# ಹೊಸತು

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು** : ರವಿ ಹೆಗ್ಗಡಿ, ತನು, ಗೋಪಿ,
ವಿಜಯಾನಂದ ಕಾಲವಾಡ, ವಿ. ಆರ್. ಸಿ. ಶೇಖರ್
**ಮುಖಪುಟ** : ಜಿ. ಎಸ್. ಎಸ್. **ವರ್ಣಚಿತ್ರ** : ಸಗ್ಗೆರೆ ರಾಮಸ್ವಾಮಿ
**ವಿನ್ಯಾಸ** : ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ** : ಜಿ. ವಿ. ತೇಜೋವತಿ


## ಈ ತಿಂಗಳು




ಕ್ರಾಂತಿಯಂದು ಬೆನ್‌ಹಿನ್ ಬೆಂಗಳೂರಿಗೆ ಬರುವ ಕಾರ್ಯಕ್ರಮವನ್ನು ರದ್ದುಮಾಡಿದ್ದಾನೆಂಬ ಸುದ್ದಿ ಬಂದಿತು. ಬೆನ್ನ ಹಿಂದೆ ಗುದ್ದಿಸಿಕೊಳ್ಳುವ ಮೊದಲೇ ಈ ತೀರ್ಮಾನ ಕೈಗೊಳ್ಳಲು ಅವನಿಗೆ ದೇವರ ಪ್ರೇರಣೆಯಾಯಿತೇನೊ! ಬೆಂಗಳೂರಿನಲ್ಲಿ ಪ್ರತಿರೋಧದ ಬೇಗೆ ಹೆಚ್ಚುತ್ತಿದ್ದುದನ್ನು ಇಲ್ಲಿಯ ಅವನ ಸಂಯೋಜಕರು ತಿಳಿಸಿರಬೇಕು. ಯೋಚನೆ ಮಾಡಿದರೆ ಅಬ್ಬಾ ಎನಿಸುತ್ತದೆ : ಅವನ ಕಾರ್ಯಕ್ರಮವನ್ನು ಜಕ್ಕೂರು ವಿಮಾನ ನಿಲ್ದಾಣದಲ್ಲಿ ಆಯೋಜಿಸಲಾಗಿತ್ತಂತೆ. ಅದೇನೂ ಕಷ್ಟವಲ್ಲ, ಏಕೆಂದರೆ ಅಮೆರಿಕಾದ ಹಣದ ಬೆಂಬಲ ಅವನಿಗೆ ಬೇಕಾದಷ್ಟಿದೆ; ಆದರೆ ವಿಮಾನ ನಿಲ್ದಾಣವನ್ನು ಬಾಡಿಗೆಗೆ ಕೊಡಲು ನಮ್ಮ ಬೃಹತ್ ಬೆಂಗಳೂರಿನ ಸಂಸ್ಥೆಯೊಂದು ತೀರ್ಮಾನಿಸಿದ್ದುದು ಆಶ್ಚರ್ಯ. ವಿಮಾನಗಳ ಓಡಾಟವಾಗಲಿ, ತರಬೇತಿಯಾಗಲಿ ಸೊನ್ನೆಯ ಹಂತಕ್ಕೆ ಮುಟ್ಟಿರುವುದರಿಂದ ಆ ನಿಲ್ದಾಣವನ್ನು ಬೆನ್‌ಹಿನ್ ಕಾರ್ಯಕ್ರಮಕ್ಕೆ ಕೊಡಬೇಕಾಗಿ ಬಂದಿದೆಯೆಂದು ತೋರುತ್ತದೆ. ಸರ್ಕಾರ ಅದಕ್ಕೇಕೆ ಅನುಮತಿ ನೀಡಿತು ಅಥವಾ ಸರ್ಕಾರದ ಅನುಮತಿಯ ಅವಶ್ಯಕತೆ ಇಲ್ಲವೆ ಎಂಬ ಪ್ರಶ್ನೆಗಳಿಗೆ ಉತ್ತರ ನಮಗೆ ತಿಳಿಯದು. ಬೆನ್‌ಹಿನ್ ಹಿಂದಕ್ಕೆ ಸರಿದ ದಿನವೇ 'ಪ್ರಜಾವಾಣಿ'ಯಲ್ಲಿ ಒಂದು ಸ್ವಾರಸ್ಯಕರ ವ್ಯಂಗ್ಯಚಿತ್ರ ಪ್ರಕಟವಾಗಿತ್ತು : 'ಬೆನ್‌ಹಿನ್ ಹಿಂದಕ್ಕೆ ಹೋಗು' ಎಂಬ ಫಲಕವನ್ನು 'ವಿದೇಶಿ ಮೂಢನಂಬಿಕೆ ವಿರೋಧಿ ವೇದಿಕೆ'ಯ ಕಾರ್ಯಕರ್ತ ಹೊತ್ತಿದ್ದಾನೆ. ಅವನಿಗೆ ಶ್ರೀಸಾಮಾನ್ಯ ಪ್ರಶ್ನೆ ಹಾಕುತ್ತಿದ್ದಾನೆ : 'ರೀ ರೀ... ಮೊನ್ನೆ ಮೂಢನಂಬಿಕೆ ನಿಷೇಧ ಬೇಡಾಂತ ಟೀವೀಲಿ ಕೊರೆಯುತ್ತಿದ್ದವರು ತಾವಲ್ಲವೆ ?' ಎಂದು. ಬೆನ್‌ಹಿನ್ ಹಿನ್ನೆಲೆಯಲ್ಲಿ ಎಲ್ಲವನ್ನೂ ಹೇಳುವ ಬಹಳ ಅರ್ಥವತ್ತಾದ ವ್ಯಂಗ್ಯಚಿತ್ರ ಇದು. ಅದರ ಸೂಚನೆಗಳು ಕೆಲವು ಹೀಗಿವೆ : (ಅ) ಸ್ವದೇಶಿ ಯಾದರೆ ಮೂಢನಂಬಿಕೆಯನ್ನು ಬೆಂಬಲಿಸಬೇಕು, ವಿರೋಧಿಸಬಾರದು; (ಆ) ಮೂಢನಂಬಿಕೆಗಳನ್ನು ಸಹ ಸ್ವದೇಶಿ ಮತ್ತು ವಿದೇಶಿ ಎಂದು ಪ್ರತ್ಯೇಕಿಸಿ ಮಾಪನ ಮಾಡಬಹುದು; (ಇ) ವಿದೇಶಿಯು ಬೇರೊಂದು ಮತಧರ್ಮದ್ದಾದ್ದರಿಂದ ಅದನ್ನು ಬಡಿದುಹಾಕಬೇಕು; (ಈ) ಸ್ವ–ಧರ್ಮದ ಮೂಢನಂಬಿಕೆಯು ಸಂಪ್ರದಾಯದ ಭಾಗವಾದ್ದರಿಂದ ಅದನ್ನು ಗೌರವಿಸಬೇಕು; (ಉ) ಮೂಢನಂಬಿಕೆಯ ವಿರೋಧಕ್ಕೂ ಮತಧರ್ಮದ ಲೇಪವೇ ಅಂತಿಮ ಮಾಪಕ, ಇತ್ಯಾದಿ. ಮೂಢನಂಬಿಕೆಗಳನ್ನು ನಿಷೇಧಿಸುವ ಕಾನೂನು ರೂಪಿಸಲು ತಾನು ಬದ್ಧವೆಂದು ಹೇಳಿಕೊಳ್ಳುವ ಕರ್ನಾಟಕ ಸರ್ಕಾರವು ಬೆನ್‌ಹಿನ್‌ನನ್ನು ತಡೆಯಲು ಸಂವಿಧಾನವು ಅಡ್ಡಬರುತ್ತದೆಂದು ಕರ್ನಾಟಕ ಉಚ್ಚ ನ್ಯಾಯಾಲಯವು ಹೇಳಿತು. ಧರ್ಮ ನಿರಪೇಕ್ಷತೆಯನ್ನು ಎತ್ತಿಹಿಡಿಯಲು ಬೆನ್‌ಹಿನ್‌ಗೆ ತಡೆಯೊಡ್ಡಲಾಗದೆಂದು ಹೇಳಲಾಗಿದೆ. ಅಂದರೆ, ನಾಳೆ ಬರಲಿರುವ ಕಾನೂನಿನ ಗತಿ ಏನಾಗಬಹುದೆಂಬ ಸೂಚನೆ ಇದೆಂದು ಭಾವಿಸೋಣವೆ ? ಬೆನ್‌ಹಿನ್‌ನ ಮತದವರ ಮೂಲಭೂತ ಹಕ್ಕು ಅಜ್ಞಾನವನ್ನು ಪೋಷಿಸುವ ಹಕ್ಕು ಎಂದಾಯಿತು; ಹಾಗಿದ್ದರೆ ವೈಜ್ಞಾನಿಕ ಮನೋಭಾವವನ್ನು ಬೆಳೆಸಬೇಕೆಂಬ ಸಂವಿಧಾನದ ಮಾತಿಗೆ ಬೆಲೆಯಿಲ್ಲವೆ ? ಬೆನ್‌ಹಿನ್ ಸಾರ್ವಜನಿಕವಾಗಿ ಮಾಡುವ ಅಗ್ಗದ ಮೋಸವನ್ನು ಖಾಸಗಿ ಯಾಗಿಯೂ ಮಾಡಬಹುದು, ಅದಕ್ಕೆ ಅಡ್ಡಿ ಒಡ್ಡುವಂತಿಲ್ಲ, ಎಂದಾದರೆ ಖೋಟಾ ವೈದ್ಯರನ್ನು ಪ್ರತಿಬಂಧಿಸಬೇಕೇಕೆ ? ಯಾರು ಬೇಕಾದರೂ ಅಪಾಯಕಾರಿ ವಿಧಾನಗಳಿಂದ ರೋಗಗಳನ್ನು ವಾಸಿಮಾಡಲು ಸ್ವತಂತ್ರರು ಎಂಬ ಸೂತ್ರವನ್ನು ಉಚ್ಚ ನ್ಯಾಯಾಲಯವು ರೂಪಿಸಿದೆಯೆ ? ಮತಧರ್ಮದ ಹಕ್ಕನ್ನು ಚಲಾಯಿಸುವುದಕ್ಕೂ, ಆ ಮತಧರ್ಮದ ಹೆಸರಿನಲ್ಲಿ ರೋಗವನ್ನು ಗುಣಪಡಿಸುವುದಾಗಿ ಸೋಗು ಹಾಕುವ ಠಕ್ಕರನ್ನು ನಿರ್ಬಂಧಿಸುವುದಕ್ಕೂ ವ್ಯತ್ಯಾಸವಿದೆ. ಬೆನ್‌ಹಿನ್‌ಗೆ ಪ್ರತಿರೋಧ ವ್ಯಕ್ತಪಡಿಸಿದ ಮೂರು ಗುಂಪುಗಳನ್ನು ಗುರುತಿಸಬಹುದು : (ಅ) ಕ್ರೈಸ್ತಧರ್ಮದ ನೆರಳಿನಲ್ಲಿ ಮೋಸದ ತಂತ್ರಗಳನ್ನು ಸಹಿಸಬಾರದೆಂದು ಬಹಿರಂಗವಾಗಿ ಪ್ರತಿಭಟಿಸಿದ ಕ್ರೈಸ್ತಧರ್ಮದ ಜನ,

**(೬ನೇ ಪುಟಕ್ಕೆ)**






ಸಂಪುಟ-೧೫ ಸಂಚಿಕೆ-೭ ಫೆಬ್ರವರಿ ೨೦೧೪

■ **ಗೌರವ ಸಂಪಾದಕ**

ಜಿ. ರಾಮಕೃಷ್ಣ

■ **ಸಂಪಾದಕ**

ಸಿದ್ದನಗೌಡ ಪಾಟೀಲ

■ **ಸಹಸಂಪಾದಕರು**

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

■ **ವ್ಯವಸ್ಥಾಪಕ**

ಎ. ಆರ್. ಉಡುಪ

■ **ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

■ **ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೯೭೪೨೬

■ **ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http ://navakarnataka.blogspot.in**
**http ://hosathumonthly.blogspot.in**

# ಸಂಪಾದಕೀಯ

## ಅವಸಾನದೆಡೆಗೆ ಅವಸರದ ನಡಿಗೆ

'ಅಭಿವೃದ್ಧಿ' ಎಂಬ ಪದಕ್ಕೆ ಚುನಾವಣೆಗಳ ಸಂದರ್ಭದಲ್ಲಿ ಮಹತ್ವ ಬರುತ್ತದೆ. ಈ ಪದ ಇಂದು ಬಹುತೇಕ ರಾಜಕೀಯ ಪಕ್ಷಗಳು, ರಾಜಕಾರಣಿಗಳು ತಮ್ಮ ಪ್ರಚಾರಕ್ಕಾಗಿ, ಸಾಧನೆಯ ಪ್ರದರ್ಶನಕ್ಕಾಗಿ ಬಳಸುವ ಪದ. ಅದಕ್ಕಾಗಿ ಅವರು ನಗರಾಭಿವೃದ್ಧಿ, ರಸ್ತೆ, ಶಾಲಾ ಕಟ್ಟಡ, ಆಸ್ಪತ್ರೆ – ಹೀಗೆ ಮೂಲ ಸೌಕರ್ಯಗಳ ಪಟ್ಟಿಯನ್ನು ಮುಂದಿಡುತ್ತಾರೆ. ಇಂಥ ಸಾಧನೆಗಳ ಭರಾಟೆಯಲ್ಲಿ ಒಂದು ಅಂಶವನ್ನು ಎಲ್ಲರೂ ಮರೆಯುತ್ತಾರೆ. ಅದು ಮನುಷ್ಯ ಬದುಕಲು ಸೂಕ್ತ ವಾತಾವರಣ ನಿರ್ಮಿಸುವ ಕುರಿತಾದದ್ದು. ಆಸ್ಪತ್ರೆಗಳನ್ನು ಆರಂಭಿಸುವುದರ ಮೂಲಕ ಆರೋಗ್ಯವನ್ನು ಒದಗಿಸಬೇಕಾದದ್ದು ಸರಕಾರಗಳ ಜವಾಬ್ದಾರಿ ನಿಜ. ಆದರೆ ಅದೇ ಸಂದರ್ಭದಲ್ಲಿ ಅನಾರೋಗ್ಯಕ್ಕೆ ಒಳಗಾಗದಂಥ ವಾತಾವರಣ ನಿರ್ಮಾಣ ಮಾಡುವುದೂ ಸರಕಾರದ ಜವಾಬ್ದಾರಿಯೆನ್ನುವುದನ್ನು ನಮ್ಮ ಶಾಸಕಾಂಗ, ಕಾರ್ಯಾಂಗಗಳು ಅರಿತುಕೊಳ್ಳಬೇಕಾಗಿದೆ. ಇಂದು ಕುಡಿವ ನೀರಿನ ವಿಷಯವನ್ನೇ ತೆಗೆದುಕೊಂಡರೆ ನಮ್ಮ ಜನತೆ ಶುದ್ಧ ಕುಡಿವ ನೀರನ್ನು ಪಡೆಯುತ್ತಿದ್ದಾರೆಯೇ ಎನ್ನುವ ಪ್ರಶ್ನೆ ಎದುರಾಗುತ್ತದೆ. ಇಂದು ಬಿಸ್ಲೇರಿ, ಕಿನ್ಲೆ, ಅಕ್ವಾಗಾರ್ಡ್‌ನಂಥ ಹಲವಾರು ನೀರು ಮಾರಾಟದ ಕಂಪನಿಗಳ ಭರಾಟೆಯನ್ನು, ಆದಾಯವನ್ನು ಗಮನಿಸಿದರೆ ನಮ್ಮ ಜನತೆ ನೈಸರ್ಗಿಕ ಜಲಮೂಲಗಳ ಮೇಲೆ ಎಷ್ಟು ವಿಶ್ವಾಸ ಹೊಂದಿದ್ದಾರೆಂದು ಅರ್ಥವಾಗುತ್ತದೆ.

ನೀರು ಎನ್ನುವುದು ಬರೀ ಜೀವನಾವಶ್ಯಕ ವಸ್ತು ಮಾತ್ರವಲ್ಲ ನಾಗರಿಕತೆಯನ್ನು, ಸಂಸ್ಕೃತಿಯನ್ನು ಕಟ್ಟಿಕೊಡುವ ಕಾರ್ಯವನ್ನೂ ಮಾಡಿದೆ ಎಂಬುದನ್ನು ಗಮನಿಸಬೇಕು. ಒಂದು ಸನ್ನಿವೇಶವನ್ನು ಇಲ್ಲಿ ನೆನಪಿಸಿಕೊಳ್ಳುವ ಅವಶ್ಯಕತೆಯಿದೆ. ಕೇವಲ ಮೂವತ್ತು ವರ್ಷದ ಹಿಂದೆ ಅಂದರೆ ಎಪ್ಪತ್ತರ ದಶಕದಲ್ಲಿ ನಮ್ಮ ಗ್ರಾಮಗಳಲ್ಲಿ ಬಾವಿಯ ನೀರು ಮಾತ್ರ ನಮ್ಮ ಜನತೆಗೆ ಕುಡಿಯುವ ನೀರಿನ ಮೂಲವಾಗಿತ್ತು. ನದಿ, ಕೆರೆಗಳಿಲ್ಲದ ಪ್ರದೇಶಗಳಲ್ಲಿ ಬಾವಿ ನೀರು ಸೇದುವ ವ್ಯವಸ್ಥೆಯಿಂದ ಮಾತ್ರ ನೀರು ಪಡೆಯಲು ಸಾಧ್ಯವಿತ್ತು. ಬಯಲು ಸೀಮೆ ಅದರಲ್ಲೂ ಉತ್ತರ ಕರ್ನಾಟಕದ ಬಹುತೇಕ ಪ್ರದೇಶದಲ್ಲಿ ಕುಡಿವ ನೀರಿಗೆ ಜನತೆ ಈ ಬಾವಿಗಳನ್ನೇ ಅವಲಂಬಿಸಬೇಕಿತ್ತು. ಇಂಥ ಸಂದರ್ಭದಲ್ಲಿ ನಮ್ಮ ಸಮಾಜ ವ್ಯವಸ್ಥೆಯಲ್ಲಿನ ಜಾತಿಪದ್ಧತಿ ಅಸ್ಪೃಶ್ಯರಿಗೆ ಕುಡಿವ ನೀರಿಗೂ ಪರಿತಪಿಸುವಂತೆ ಮಾಡಿತ್ತು. ಕಾರಣ ಬಾವಿಗಳು ಜಮೀನ್ದಾರರಿಗೆ ಮತ್ತು ಮೇಲ್ಜಾತಿಯವರಿಗೆ ಮೀಸಲಾಗಿರುತ್ತಿದ್ದವು. ಅಸ್ಪೃಶ್ಯರು ಬಾವಿ ದಂಡೆಯ ಮೇಲೆ ಕುಳಿತು ಅಸ್ಪೃಶ್ಯರಲ್ಲದವರು ನೀರು ಹಾಕಿದಾಗ ಮಾತ್ರ ತಮ್ಮ ಮಣ್ಣಿನ ಬಿಂದಿಗೆಗಳಲ್ಲಿ ನೀರು ಪಡೆಯಬೇಕಿತ್ತು. ಹೀಗೆ ಕುಡಿವ ನೀರಿಗಾಗಿ ಅಸ್ಪೃಶ್ಯರು ತಮ್ಮ ಕೂಲಿ ಕೆಲಸವನ್ನೂ ಬಿಟ್ಟು ತಾಸುಗಟ್ಟಲೆ ಕಾಯ್ದು ಯಾರೋ ಕರುಣಾವಂತರು ಬಂದಾಗ ಒಂದು ಬಿಂದಿಗೆ ಕುಡಿವ ನೀರು ಹಾಕಿಸಿಕೊಂಡು ಹೋಗುತ್ತಿದ್ದರು. ಕುಡಿವ ನೀರಿಗೇ ಈ ಸ್ಥಿತಿಯಿದ್ದರೆ ಸ್ನಾನ, ಬಳಕೆಗೆ ನೀರು ಸಿಗುವ ಮಾತು ದೂರವೇ ಇತ್ತು. ಇಂಥ ಸಂದರ್ಭದಲ್ಲಿ ೧೯೮೩ರಲ್ಲಿ ಅಂದಿನ ಸಚಿವರಾದ ಅಬ್ದುಲ್ ನಜೀರ್ ಸಾಬ್ ಅವರು ಪಂಚಾಯತ್ ರಾಜ್ ಇಲಾಖೆಯಿಂದ ಪ್ರತಿ ಊರುಗಳಿಗೂ ಹಾಗೂ ಊರಿನ ಅಸ್ಪೃಶ್ಯರ ಕೇರಿಗಳಿಗೂ ಕೊಳವೆ ಬಾವಿ ಹಾಕಿಸಿ ನೀರೊದಗಿಸುವ ಕಾರ್ಯ ಮಾಡಿದರು. ಮೇಲ್ನೋಟಕ್ಕೆ ಇದು ಅಭಿವೃದ್ಧಿಯ ಲೆಕ್ಕದಲ್ಲಿ ಒಂದು ಸಾಧನೆಯಾದರೂ ಸಾಮಾಜಿಕ ವ್ಯವಸ್ಥೆಯಲ್ಲಿ ಒಂದು ಕ್ರಾಂತಿಕಾರಕ ಬದಲಾವಣೆಯನ್ನೇ ಮಾಡಿತ್ತು. ಒಂದು ಬಿಂದಿಗೆ ನೀರಿಗಾಗಿ ಸ್ಪೃಶ್ಯ ಜಾತಿಗಳವರ ಮುಂದೆ ಗೋಗರೆವ ಅಸ್ಪೃಶ್ಯರು ತಮ್ಮ ಗುಡಿಸಲ ಮುಂದೆಯೇ ತಮ್ಮದೇ ಆದ ಕೊಳವೆ ಬಾವಿ ಪಡೆದದ್ದು, ತಮಗೆ ಬೇಕಾದಾಗ, ಬೇಕಾದಷ್ಟು ನೀರನ್ನು ತಾವೇ ಪಡೆದುಕೊಳ್ಳುವ ಹಕ್ಕು, ಅವಕಾಶ ಪಡೆದದ್ದು ಒಂದು ಸಾಮಾಜಿಕ, ಸಾಂಸ್ಕೃತಿಕ ಕ್ರಾಂತಿಯಾಗಿತ್ತು. ಆ ಕಾರಣಕ್ಕಾಗಿಯೇ ಅಬ್ದುಲ್ ನಜೀರ್‌ಸಾಬ್‌ರಂಥ ಮುನ್ನೋಟ ಹೊಂದಿದ ರಾಜಕಾರಣಿ ಇಂದಿಗೂ ಸ್ಮರಣೀಯರಾಗುತ್ತಾರೆ.

ನೀರಿಗಾಗಿ ಇಂಥ ಇನ್ನೊಂದು ಕ್ರಾಂತಿಯನ್ನು ಮಾಡಬೇಕಾದ ಸಂದರ್ಭ ಇಂದು ನಮ್ಮ ಮುಂದಿದೆ. ಅಂದು ಕೊಳವೆ ಬಾವಿ ಮಾಡಿದ ಕ್ರಾಂತಿ ಇಂದು ನಮ್ಮ ಮುಂದೆ ಮತ್ತೊಂದು ಕ್ರಾಂತಿಗಾಗಿ ಒತ್ತಾಯಿಸುತ್ತಿದೆ. ಕಳೆದ ಮೂವತ್ತು ವರ್ಷಗಳಿಗೆ ಹೋಲಿಕೆ ಮಾಡಿದರೆ ಇಂದು ಅಂತರ್ಜಲದ ಕುಸಿತ ವೇಗವಾಗಿದೆ. ಅಂತರ್ಜಲ ಕಡಿಮೆಯಾದಂತೆ ಭೂಮಿಯೊಳಗಿನ ಖನಿಜಾಂಶಗಳು ಹೆಚ್ಚು ಪ್ರಮಾಣದಲ್ಲಿ ನೀರಿನಲ್ಲಿ ಸೇರಿ ಜನರ ಆರೋಗ್ಯಕ್ಕೆ ಮಾರಕವಾಗಿ ಪರಿಣಮಿಸಿವೆ. ಅಂಥ ಗಂಭೀರ ಸ್ಥಿತಿ ಡೆಕ್ಕನ್ ಪ್ಲೇಟ್ ಎಂದು ಕರೆಯಲ್ಪಡುವ ಕರ್ನಾಟಕ ಆಂಧ್ರಪ್ರದೇಶದ ಗಡಿಭಾಗದಲ್ಲಿ ತಲೆದೋರಿದೆ. ಬಳ್ಳಾರಿ, ರಾಯಚೂರು, ಗದಗ, ಕೊಪ್ಪಳ, ತುಮಕೂರು, ಕೋಲಾರ ಮುಂತಾದ ಪ್ರದೇಶಗಳ ಅಂತರ್ಜಲದಲ್ಲಿ ಫ್ಲೋರೈಡ್ ಅಂಶ ಮಿತಿಮೀರಿದೆ. ಸರಕಾರ ಸಾಕಷ್ಟು ಹಿಂದೆಯೇ ಈ ಅಂಶವನ್ನು ಕಂಡುಕೊಂಡಿದ್ದರೂ ಅಲ್ಲಿನ ಜನತೆಗೆ ಶುದ್ಧ ಕುಡಿವ ನೀರಿನ ವ್ಯವಸ್ಥೆಯನ್ನು

ಮಾಡಲು ಗಮನಹರಿಸಿಲ್ಲ. ಇದರ ಪರಿಣಾಮವಾಗಿ ಆ ಪ್ರದೇಶದ ಜನರಲ್ಲಿ ಆತಂಕಕಾರಿ ಮಟ್ಟದಲ್ಲಿ ಅನಾರೋಗ್ಯದ ಸಮಸ್ಯೆಯಿದೆ. ಫ್ಲೋರೈಡ್‌ಯುಕ್ತ ನೀರು ಪ್ರಮುಖವಾಗಿ ಹಲ್ಲು ಮತ್ತು ಎಲುಬು, ಕೀಲುಗಳ ಮೇಲೆ ತೀವ್ರವಾದ, ಹಾನಿಕಾರಕ ಪರಿಣಾಮಗಳನ್ನುಂಟುಮಾಡುತ್ತಿದೆ. ಅನ್ನಭಾಗ್ಯ ಎಂದು ಹೇಳುವ ಸರಕಾರ ಶುದ್ಧ ನೀರು ಜನರ ಹಕ್ಕು ಎನ್ನುವುದನ್ನು ಮರೆತು ಕುಳಿತಿದೆ.

ಇಂದು ಫ್ಲೋರೈಡ್ ಮಾತ್ರವಲ್ಲ ಮೇಲ್ಪದರಿನ ಜಲಮೂಲಗಳನ್ನು ಬಳಸಿ ಕೃಷಿ ಮಾಡುವ ಪ್ರದೇಶದಲ್ಲಿ ಮಿತಿಮೀರಿದ ಕೀಟನಾಶಕಗಳನ್ನು, ರಾಸಾಯನಿಕ ಗೊಬ್ಬರವನ್ನು ಬಳಸುವುದರಿಂದ ಅಲ್ಲಿನ ಜಲವೂ ರಾಸಾಯನಿಕಗಳಿಂದ ತನ್ನ ಶುದ್ಧತೆಯನ್ನು ಕಳೆದುಕೊಂಡಿದೆ. ಇನ್ನೊಂದೆಡೆ ಗಣಿಗಾರಿಕೆ ಪ್ರದೇಶದಲ್ಲಿ ಅದು ಉಕ್ಕು, ಗ್ರಾನೈಟ್ ಹೀಗೆ ಯಾವುದೇ ಗಣಿಗಾರಿಕೆಯಿರಲಿ ಅಲ್ಲಿ ಬಳಸುವ ಅಮೋನಿಯಂ ನೈಟ್ರೇಟ್ ಬಳಕೆಯಿಂದಾಗಿ ಅಲ್ಲಿನ ಅಂತರ್ಜಲವೂ ಕಲುಷಿತಗೊಂಡಿದೆ. ಇನ್ನು ಬೆಳಗಾವಿ ಮತ್ತು ಯಾದಗಿರಿ ತಾಲೂಕಿನಲ್ಲಿ ಯುರೇನಿಯಂ ಗಣಿಗಾರಿಕೆ ಆರಂಭವಾಗಿದೆ. ಅದು ಇನ್ನೂ ಅಪಾಯಕಾರಿಯಾಗಿದೆ. ಇದಾವುದನ್ನೂ ಗಮನಿಸದ ಜನತೆ ಅಶುದ್ಧ ನೀರನ್ನೇ ಕುಡಿಯುತ್ತ ಅವಸಾನದೆಡೆಗೆ ಅವಸರದ ನಡಿಗೆ ಆರಂಭಿಸಿದ್ದಾರೆ. ಕಳೆದ ವಾರ ಬಳ್ಳಾರಿ ಜಿಲ್ಲೆಯ ಕೂಡ್ಲಗಿ ತಾಲೂಕಿನಲ್ಲಿ ಪ್ರಗತಿಪರ ಸಂಘಟನೆಗಳು ಸೇರಿ 'ಶುದ್ಧಜಲ–ಜೀವಜಲ' ಜನಾಂದೋಲನವನ್ನು ಆರಂಭಿಸಿವೆ. ವಿದ್ಯಾರ್ಥಿ, ಯುವಜನ, ಮಹಿಳಾ ಹಾಗೂ ಸಾಂಸ್ಕೃತಿಕ ಸಂಘಟನೆಗಳು ಸೇರಿ ಜನ ಜಾಗೃತಿ ಜಾಥಾ ನಡೆಸಿವೆ. ಜಾಥಾದ ಸಂದರ್ಭದಲ್ಲಿ ಸಂಘಟಕರು ಪ್ರತಿಗ್ರಾಮದಲ್ಲಿ ಆ ಗ್ರಾಮಸ್ಥರು ಬಳಸುವ ನೀರಿನಲ್ಲಿನ ಫ್ಲೋರೈಡ್ ಅಂಶವನ್ನು ಪ್ರಯೋಗದ ಮೂಲಕ ತೋರಿಸುತ್ತಿದ್ದಾರೆ. ಪ್ರಯೋಗ, ಪ್ರಾತ್ಯಕ್ಷಿಕೆಯ ನಂತರ ಆ ಗ್ರಾಮಗಳ ಕಲುಷಿತ ನೀರಿನ ಪ್ರಮಾಣವನ್ನು ನೋಡಿ ಸಂಘಟಕರೇ ಬೆಚ್ಚಿ ಬಿದ್ದಿದ್ದಾರೆ. ಜನ ತಾವು ಕುಡಿವ ನೀರಿನ ಗುಣಮಟ್ಟ ನೋಡಿ ಭಯಗೊಂಡಿದ್ದಾರೆ. ಹೋಬಳಿ ಪ್ರದೇಶದಲ್ಲಿ ಮಾರುವ ಬಾಟಲ್ ನೀರು ಸಹ ಅಶುದ್ಧವಾಗಿರುವುದು ಸಾಬೀತಾಗಿದೆ.

ಸ್ವಾತಂತ್ರ್ಯೋತ್ಸವದ ಶತಮಾನದೆಡೆಗೆ ಧಾವಿಸುತ್ತಿರುವ ನಾವು, ಮಂಗಳಯಾನವನ್ನು ಯಶಸ್ವಿಗೊಳಿಸುತ್ತಿರುವ ನಾವು, ಐ.ಟಿ., ಬಿ.ಟಿ.ಯಲ್ಲಿ ಜಗತ್ತಿಗೇ ಮಾದರಿಯಾಗುತ್ತಿರುವ ನಾವು, ಗುಡ್ಡಬೆಟ್ಟಗಳನ್ನು ಮಾರಿ ಲಕ್ಷಾಂತರ ಕೋಟಿ ವಿದೇಶಿ ವಿನಿಮಯಗಳಿಸುತ್ತಿರುವ ನಾವು ನಮ್ಮ ಜನರಿಗೆ ಶುದ್ಧ ಕುಡಿವ ನೀರು ಒದಗಿಸಲು ಅಸಮರ್ಥರಾಗಿದ್ದೇವೆ. ಜನರ ಆರೋಗ್ಯ ರಕ್ಷಣೆಗೆ ಗಮನಕೊಡದ ನಮ್ಮ ಸರಕಾರಗಳು ತಮ್ಮ ಅಭಿವೃದ್ಧಿಯ ಪಟ್ಟಿಯಲ್ಲಿ ಹೈಟೆಕ್ ಮಲ್ಟಿಸ್ಪೆಶಾಲಿಟಿ ಆಸ್ಪತ್ರೆ, ಸಾವಿರಾರು ಕಿಲೋಮೀಟರ್ ನುಣ್ಣನೆಯ ಹೆದ್ದಾರಿ (ಟೋಲ್ ದಾರಿ), ಗಗನಚುಂಬಿ ಕಟ್ಟಡಗಳ ವಿವರಗಳನ್ನು ಕೊಟ್ಟರೆ ಅದು ಅಭಿವೃದ್ಧಿಯೇ ? ಮಂಗಳ ಲೋಕದಲ್ಲಿ ನೀರಿನ ಅಂಶ ಕಂಡುಹಿಡಿದ ನಮ್ಮ ವಿಜ್ಞಾನಿಗಳಿಗೆ ನಮ್ಮ ಜನ ಕುಡಿವ ನೀರು ಎಂಥದ್ದು ಎಂದು ಕಂಡುಹಿಡಿಯುವುದು ಅಸಾಧ್ಯವೇನಲ್ಲ. ಮೊದಲು ನಮ್ಮ ಸರಕಾರಗಳು ಜನರ ಜೀವ, ಆರೋಗ್ಯ ಅಮೂಲ್ಯ ಎಂದು ತಿಳಿಯಬೇಕು. ಜನ ಜಾತಿ, ಧರ್ಮ, ದುಡ್ಡು, ಹೆಂಡಕ್ಕೆ, ಪಕ್ಷ, ಪಂಗಡ ನೋಡಿ ಮತಕೊಟ್ಟು ಕುಳಿತರೆ ಸಾಲದು. ಕನಿಷ್ಠ ಶುದ್ಧ ಕುಡಿವ ನೀರು ಕೊಡಿ ಎಂದಾದರೂ ಒಟ್ಟಾಗಿ ಕೇಳಬೇಕು.

## ಆಮ್ ಆದ್ಮಿ ಪಾರ್ಟಿ – ಏನು? ಹೇಗೆ? ಎತ್ತ?

ದೆಹಲಿ ಚುನಾವಣೆಗಳಲ್ಲಿ ಆಡಳಿತಾರೂಢ ಕಾಂಗ್ರೆಸ್ ಪಕ್ಷವನ್ನು ಮಣ್ಣು ಮುಕ್ಕಿಸಿ ಅಧಿಕಾರಕ್ಕೇರಿರುವ ಆಮ್ ಆದ್ಮಿ ಪಾರ್ಟಿ (ಎಎಪಿ) ಭಾರತದ ರಾಜಕೀಯ ರಂಗದಲ್ಲಿ ಸಾಕಷ್ಟು ಧೂಳೆಬ್ಬಿಸಿದೆ. ಮಾಧ್ಯಮಗಳ ರಾಜಕೀಯ ವಿಶ್ಲೇಷಕರಿಗೆ, ಅವು ಏರ್ಪಡಿಸುವ ಒಣ ಚರ್ಚೆಗಳಿಗೆ, ಗಾಳಿಯಲ್ಲಿ ಗೋಪುರ ಕಟ್ಟುವವರಿಗೆ ಎಎಪಿಯ ಅನಿರೀಕ್ಷಿತ ಉದ್ಭವ ಬೇಕಾದಷ್ಟು ಆಹಾರ ಒದಗಿಸಿದೆ ಮೆಲುಕು ಹಾಕಲು. ಇದು ಪ್ರಾಯಶಃ ಎಎಪಿ ನಾಯಕರಿಗೂ ಬೆಂಬಲಿಗರಿಗೂ ಅನಿರೀಕ್ಷಿತವೆ. ಏಕೆಂದರೆ ದೆಹಲಿ ಚುನಾವಣೆಗಳ ಅನಂತರದ ಬೆಳವಣಿಗೆಗಳು ಅದಕ್ಕೆ ಸಾಕ್ಷಿ. ದೇಶಾದ್ಯಂತ ದೊಡ್ಡ ನಗರಗಳಲ್ಲಿ ನಾಮುಂದು ತಾಮುಂದು ಎಂದು ಎಎಪಿಗೆ ಸೇರಲು ಅನೇಕರು ಮುಗಿಬೀಳುತ್ತಿದ್ದಾರೆ. ಇವರಲ್ಲಿ ಕೆಲವರಿಗೆ ಮುಂಬರುವ ಲೋಕಸಭಾ ಚುನಾವಣೆಗಳ ಮೇಲೆ ಕಣ್ಣು. ಅದೇನೇ ಇರಲಿ ಮೊದಲ ಪ್ರಯತ್ನದಲ್ಲೇ ಎಎಪಿಗೆ ದೊರೆತ ಯಶಸ್ಸು ಒಂದು ಸಾಧನೆಯೇ. ಹಾಗೆಯೇ ಹದಿನೈದು ವರ್ಷಗಳಿಂದ ದೆಹಲಿಯಲ್ಲಿ ಅಧಿಕಾರದ ಚುಕ್ಕಾಣಿ ಹಿಡಿಯಲು ಕಾಯುತ್ತಿದ್ದ ಭಾಜಪವನ್ನು ಪಲ್ಲಟಗೊಳಿಸಿದ್ದೂ ಸಾಧನೆಯೇ ಅನ್ನಿ. ಈಗ ಮುಂದಿನ ಲೋಕಸಭಾ ಚುನಾವಣೆಯಲ್ಲಿ ತನ್ನ ಛಾಪು ಮೂಡಿಸಲು ಎಎಪಿ ಸಿದ್ಧವಾಗುತ್ತಿದೆ. ಬೇಕಾದಷ್ಟು ಊಹಾಪೋಹಗಳು ಎದ್ದಿವೆ. ನಾಲ್ಕು ನೂರಕ್ಕೂ ಹೆಚ್ಚು ಸ್ಥಾನಗಳಲ್ಲಿ ಸ್ಪರ್ಧಿಸಬಹುದು ಎಂದು ಅಂದಾಜು ಮಾಡಲಾಗಿದೆ. ದೆಹಲಿ ಗದ್ದುಗೆಗೆ ನಡೆಯುವ ಪೈಪೋಟಿಯಲ್ಲಿ ಎಎಪಿ ಪಾತ್ರ ಬಹುಮುಖ್ಯವಾದ್ದಾಗಿರುವುದು ಎನ್ನುವವರೂ ಇದ್ದಾರೆ. ನಮೋಗೆ ಅಡ್ಡಗಾಲು ಹಾಕುವುದಾದರೆ ಅಡ್ಡಿಯಿಲ್ಲ. ಅಂತೂ ಎಎಪಿ ಕಾಂಗ್ರೆಸ್, ಭಾಜಪಗೆ ತಲೆನೋವು ತಂದಿರುವುದಂತೂ ನಿಜ.

ಭಾರತದ ರಾಜಕೀಯ ದಿಗಂತದಲ್ಲಿ ಎಷ್ಟೋ ಪಕ್ಷಗಳು ಬಂದುಹೋಗಿವೆ ಆರು ದಶಕಗಳಲ್ಲಿ.



ತಿಂಗಳ ಪತ್ರಿಕೆ
ಹೊಸತು
ನವಕರ್ನಾಟಕ ಪ್ರಕಾಶನ





■ ಚಂದಾ ವಿವರಗಳು

ಬಿಡಿ ಸಂಚಿಕೆ ₹ ೧೫/-
ವಾರ್ಷಿಕ ಚಂದಾ ₹ ೨೦೦/-
ಮೂರು ವರ್ಷಕ್ಕೆ ₹ ೪೫೦/-

■ ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಸ್ವಾತಂತ್ರ್ಯಾನಂತರದ ಮೊದಲ ವರ್ಷಗಳಲ್ಲಿ ಅಸ್ತಿತ್ವಕ್ಕೆ ಬಂದಿದ್ದ ಪ್ರಜಾ ಸೋಷಲಿಸ್ಟ್ ಪಕ್ಷ, ಸ್ವತಂತ್ರ ಪಕ್ಷ ಹಾಗೂ ಇತರ ಕೆಲವು ಪ್ರಾದೇಶಿಕ ಪಕ್ಷಗಳು ಮೊಳಕೆಯಲ್ಲೇ ಕಮರಿಹೋದವು. ದಶಕಗಳ ಕಾಲ ಪ್ರಬಲ ಎದುರಾಳಿಯೇ ಇಲ್ಲದೆ ಅಧಿಕಾರ ನಡೆಸಿದ ಕಾಂಗ್ರೆಸ್ ದುರ್ಬಲಗೊಳ್ಳುತ್ತಿದ್ದಂತೆ ಅದರ ಲಾಭ ಹಿಂದುತ್ವವಾದಿ ಬಲಪಂಥೀಯ ಭಾಜಪಗೆ ದೊರೆತದ್ದೀಗ ದುಸ್ಸಹ. ಈ ಬೆಳವಣಿಗೆಗೆ ಮುಖ್ಯ ಕಾರಣ ಕಾಂಗ್ರೆಸ್ ಮತ್ತು ಅದು ಅನುಸರಿಸಿದ ನೀತಿಗಳು ಒಂದು ಕಡೆಯಾದರೆ, ಎಡಪಕ್ಷಗಳ ದುರ್ಬಲತೆ ಇನ್ನೊಂದು ಕಡೆ. ಪರಿಣಾಮ ಹದಿನೈದು ಹದಿನಾರು ವರ್ಷಗಳಿಂದ ಕಾಂಗ್ರೆಸ್ ನೇತೃತ್ವದ ಯುಪಿಎ ಮತ್ತು ಭಾಜಪ ನೇತೃತ್ವದ ಗೊತ್ತುಗುರಿಯಿಲ್ಲದ ಕಿಚಿಡಿ ಸರಕಾರದ ದುರಾಡಳಿತ ಹಾಗೂ ಲಂಗುಲಗಾಮಿಲ್ಲದ ಭ್ರಷ್ಟಾಚಾರ. ಪರಿಸ್ಥಿತಿಯಿಂದ ಬೇಸತ್ತಿರುವ ಜನಸಾಮಾನ್ಯರಿಗೆ ಪರ್ಯಾಯವೇ ಇಲ್ಲವೇನೋ ಅನಿಸುತ್ತಿದೆ. ಕನಿಷ್ಠ ಕಾರ್ಯಕ್ರಮದ ಆಧಾರದ ಮೇಲಾದರೂ ಮೂರನೆಯ ರಂಗವೊಂದು ರೂಪುಗೊಳ್ಳುವುದು ಕನ್ನಡಿಯೊಳಗಿನ ಗಂಟಾಗುತ್ತಿದೆ. ಅದು ಎಷ್ಟು ಮಟ್ಟಿಗೆ ಪರಿಣಾಮಕಾರಿ ಆದೀತು ಎನ್ನುವುದೂ ಅನಿಶ್ಚಿತ.

ಇಂಥ ಪರಿಸ್ಥಿತಿಯಲ್ಲಿ ಭ್ರಷ್ಟಾಚಾರ ವಿರೋಧಿ ಅಲೆಯ ಮೇಲೆ ಅವತರಿಸಿರುವುದೇ ಆಮ್ ಆದ್ಮಿ ಪಾರ್ಟಿ. ಕನ್ನಡಕ್ಕೆ ಅನುವಾದಿಸಿದರೆ ಜನಸಾಮಾನ್ಯರ ಪಾರ್ಟಿ. ಎಲ್ಲ ಪಾರ್ಟಿಗಳೂ ಪ್ರಾರಂಭವಾಗುವುದು ಜನಸಾಮಾನ್ಯರ ಹೆಸರಿನಲ್ಲೇ. ಎಲ್ಲ ಪಕ್ಷಗಳೂ ಹುಟ್ಟಿಕೊಳ್ಳುವುದೂ ಕೂಡ ಜನಸೇವೆಯ ಹೆಸರಿನಲ್ಲಿಯೆ. ಅಜ್ಞಾತವಾಗಿದ್ದ ಮಹಾರಾಷ್ಟ್ರದ ಗಾಂಧಿವಾದಿ ಹೂಡಿದ ಭ್ರಷ್ಟಾಚಾರ ವಿರೋಧಿ ಚಳವಳಿ ಜ್ವಾಲೆಯಂತೆ ಹಬ್ಬಿದ್ದು ಅತಿಶಯವೇನಲ್ಲ. ೨-ಜಿ ಹಗರಣ, ಕಲ್ಲಿದ್ದಲ ಹಂಚಿಕೆ ಅವ್ಯವಹಾರ, ಭೂಕಬಳಿಕೆ ಇತ್ಯಾದಿ ಭ್ರಷ್ಟಾಚಾರಗಳ ಸರಮಾಲೆಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಈ ಆಂದೋಳನದ ಏಕೈಕ ಗುರಿ ಲೋಕಪಾಲ ಮಸೂದೆಯ ಅಂಗೀಕಾರ. ಈ ಕಾನೂನು ಬಂದರೆ ಭ್ರಷ್ಟಾಚಾರ ಮುಗಿದಂತೆ ಎಂಬ ಸಂಕುಚಿತ ಭಾವನೆ. ಚಳವಳಿಯ ನೇತಾರರಲ್ಲಿ ಒಬ್ಬರಾದ ಅರವಿಂದ ಕೇಜ್ರಿವಾಲ್ ಲೆಕ್ಕಾಚಾರ, ಅಭಿಲಾಷೆ ಬೇರೆಯೇ ಆಗಿ ರಾಜಕೀಯ ಅಧಿಕಾರದ ಕಡೆಗೆ ವಾಲಿತ್ತು. ಅಲ್ಲಿಂದ ಹೊರಬಂದು ಅವರು ಸ್ಥಾಪಿಸಿದ್ದೇ ಎಎಪಿ. ಅಣ್ಣಾ ಹಜಾರೆ ಗರಂ ಆದರೂ ಕೇಜ್ರಿವಾಲ್ ಕಿವಿಗೆ ಹಾಕಿಕೊಳ್ಳಲಿಲ್ಲ. ಏನಿದು ಎಎಪಿ ಎಂದರೆ ಸದ್ಯಕ್ಕೆ ನಗರ ಕೇಂದ್ರಿತವಾಗಿರುವ ಈ ಪಕ್ಷ ಹೆಚ್ಚಾಗಿ ಯುವಜನರನ್ನು ಆಕರ್ಷಿಸುತ್ತಿದೆ. ಆಧುನಿಕ ಸಂವಹನಗಳಾದ ಟ್ವಿಟ್ಟರ್, ಇಮೇಲ್, ಫೇಸ್‌ಬುಕ್ ಬಳಕೆ ಇದರ ವೈಶಿಷ್ಟ್ಯ. ಇದೂ ಕೂಡ ಒಂದು ನಿರ್ದಿಷ್ಟ ಸಿದ್ಧಾಂತ, ಗೊತ್ತುಗುರಿ, ಕಾರ್ಯಕ್ರಮ ಇಲ್ಲದ ಸಂಘಟನೆ. ಕೇಜ್ರಿವಾಲರದೇ ಪಾರುಪತ್ಯ. ಭ್ರಷ್ಟಾಚಾರ ವಿರೋಧ ಮತ್ತು ಶುದ್ಧ, ಶಿಷ್ಟ ಆಡಳಿತ ನಿರ್ವಹಣೆ ಇದೇ ಘೋಷವಾಕ್ಯ. ಆಡಳಿತ ನಿರ್ವಹಣೆಗೆ ಇದಿಷ್ಟೇ ಸಾಕೆ? ಖಂಡಿತಾ ಆಗದು. ವ್ಯವಸ್ಥೆಯಲ್ಲಿ ಬೇರೂರಿರುವ ಜಡತೆ, ಲಂಚಗುಳಿತನ, ಮಂದಗತಿ, ಜನರ ಬೇಡಿಕೆಗಳ ಕಡೆಗೆ ಅಲಕ್ಷ್ಯ – ಒಂದೇ ಎರಡೇ ಇವನ್ನೆಲ್ಲ ಸರಿಪಡಿಸಲು ಒಂದು ನಿರ್ದಿಷ್ಟ ಕಾರ್ಯಕ್ರಮ ಬೇಕಲ್ಲವೆ. ಅಚಾನಕ್ ಆಗಿ ದೆಹಲಿಯಲ್ಲಿ ಅಧಿಕಾರಕ್ಕೇರಿರುವ ಎಎಪಿ ರಾಷ್ಟ್ರದ ಜನತೆಯ ಮುಂದೆ ಏನು ಕಾರ್ಯಕ್ರಮ ಮಂಡಿಸಲಿದೆ. ಈ ಪ್ರಶ್ನೆ ಸಹಜ. ಎಡವೂ ಇಲ್ಲ ಬಲವೂ ಇಲ್ಲ, ಯಾವುದೇ ನಿರ್ದಿಷ್ಟ ಸಿದ್ಧಾಂತವಿಲ್ಲ ಎಂದರೆ ಆನೆ ತುಳಿದದ್ದೇ ದಾರಿ ಎನ್ನುವ ಹಾಗೆ ಅರಾಜಕತೆಗೆ ಎಡೆಕೊಡುತ್ತವಲ್ಲವೆ.

ಎಎಪಿ ಅಧಿಕಾರ ವಹಿಸಿಕೊಂಡದ್ದು ದೆಹಲಿ ಐತಿಹಾಸಿಕ ರಾಮಲೀಲಾ ಮೈದಾನದಲ್ಲಿ ಲಕ್ಷಾಂತರ ಜನರ ಸಮ್ಮುಖದಲ್ಲಿ. ಸರಳತೆಯ ಹೆಸರಿನಲ್ಲಿ ಭದ್ರತೆಯೂ ಬೇಕಿಲ್ಲ ಎಂದ ಕೇಜ್ರಿವಾಲ್ ಸಂಪುಟದ ಸಚಿವರು ವ್ಯವಸ್ಥೆಯ ಜಾಡು ಹಿಡಿಯಲೇ ಬೇಕಾಯಿತು. ಅಧಿಕಾರ ವಹಿಸಿಕೊಂಡಮೇಲೆ ವಿದ್ಯುತ್ ದರ ಕಡಿತ ಮತ್ತು ಉಚಿತ ನೀರು ಸರಬರಾಜು ಘೋಷಿಸಿದ್ದಾಯಿತು. ಮುಂದೇನು? ಇದು ಕುತೂಹಲ ಮೂಡಿಸಿರುವ ಪ್ರಶ್ನೆ. ಹೊಸ ಸಚಿವರುಗಳು ಪ್ರಾಮಾಣಿಕರು, ದಕ್ಷರೂ, ನಿಷ್ಠಾವಂತರೂ ಇರಬಹುದು. ಆದರೆ ವ್ಯವಸ್ಥೆ ಬದಲಿಸಲು, ಸುಧಾರಣೆಗಳನ್ನು ತರಲು ಇದಿಷ್ಟೇ ಸಾಲದು. ನಿಗದಿ ಕಾಲಾವಧಿಯಲ್ಲಿ ಜಾರಿಗೆ ತರುವ ಕಾರ್ಯಸೂಚಿ ಇರಬೇಕು. ಕೇಜ್ರಿವಾಲರ ಹೆಮ್ಮೆಯ ಜನತಾ ದರ್ಬಾರ್ ಈಗಾಗಲೇ ಟುಸ್ ಎಂದಿದೆ. ಸಂಪುಟದಲ್ಲಿ, ಪಕ್ಷದಲ್ಲಿ ಈಗಾಗಲೇ ಅತೃಪ್ತಿಯ ಹೊಗೆಯಾಡಲಾರಂಭವಾಗಿದೆ. ಸಚಿವ ಸ್ಥಾನದ ಆಕಾಂಕ್ಷಿಗಳು ಬಹಿರಂಗವಾಗಿಯೇ ತಮ್ಮ ನೋವನ್ನು ತೋಡಿಕೊಳ್ಳುತ್ತಿದ್ದಾರೆ. ಮುಂದಿನ ದಿನಗಳಲ್ಲಿ ಇವು ಹೇಗೆ, ಯಾವ ತಿರುವು ಪಡೆದುಕೊಳ್ಳುತ್ತವೆ ನೋಡಬೇಕು. ಏನೇ ಆದರೂ ಸದ್ಯಕ್ಕಂತೂ ಎಎಪಿಯನ್ನು ನಿರ್ಲಕ್ಷಿಸಲಾಗದು.

---

***ಈ ತಿಂಗಳು (೩ನೇ ಪುಟದಿಂದ)***

(ಆ) ಯಾವ ಮತಧರ್ಮದ್ದೇ ಆಗಲಿ, ಮೂಢ ನಂಬಿಕೆಯು ಮೂಢನಂಬಿಕೆಯೇ ಆದ್ದರಿಂದ ಅದು ಅವೈಜ್ಞಾನಿಕವಾದ ಆಚರಣೆ, ಅದನ್ನು ನಿಷೇಧಿಸ ಬೇಕು ಎಂದ ಜನ, ಮತ್ತು (ಇ) ಆಚರಣೆಯೊಂದು ಮೂಢನಂಬಿಕೆಯೇ ಆದರೂ ಅದು ಹಿಂದು ಧರ್ಮದ ಕಕ್ಷೆಗೆ ಸೇರಿದ್ದರೆ ಅದನ್ನು ನಿಷೇಧಿಸ ಕೂಡದು, ಆದರೆ ಬೇರೆ ಧರ್ಮದ ಮೂಢನಂಬಿಕೆಗಳ ಆಚರಣೆಯು ಮತಾಂತರ ಮಾಡುವ ಸನ್ನಾಹದ ಸಾಧನ; ಆದ್ದರಿಂದ ಅಂಥದನ್ನು ನಿಷೇಧಿಸಬೇಕು; ಮೊದಲೆರಡು ಪಂಥಗಳ ನಿಲುವುಗಳು ತರ್ಕಬದ್ಧ ವಾಗಿವೆ, ಆದರೆ ಮೂರನೆಯ ನಿಲುವು ಶುದ್ಧ ಕಪಟತನ. 'ಪ್ರಜಾವಾಣಿ' ವ್ಯಂಗ್ಯಚಿತ್ರವು ಅದನ್ನು ಸ್ಫುಟವಾಗಿ ನಿರೂಪಿಸಿದೆ. ಏನೇ ಇರಲಿ, ಬೆನ್‌ಹಿನ್ ನಂತಹ ಎಲ್ಲ ಮತಗಳವರನ್ನೂ ನೇರವಾಗಿ ಪರಪ್ಪನ ಅಗ್ರಹಾರದಲ್ಲಿ ಚಿರಕಾಲ ನಿರಾಳವಾಗಿ ಜೀವಿಸುವಂತೆ ಮಾಡುವುದು ಸಂವಿಧಾನಕ್ಕೆ ವಿರುದ್ಧವಾದುದಲ್ಲ ಎನಿಸುತ್ತದೆ. ಲೋಕಹಿತಕ್ಕೆ, ಮಾನವನ ಘನತೆಯ ರಕ್ಷಣೆಗೆ ಮತ್ತು ವೈಜ್ಞಾನಿಕತೆ ಯನ್ನು ಜೀವನದಲ್ಲಿ ಅಳವಡಿಸಿಕೊಳ್ಳುವುದಕ್ಕೆ ಇದು ಅಗತ್ಯ.

✶ ✶ ✶

ಮಾನ್ಯ ಶ್ರೀ. ಎಂ. ವೀರಪ್ಪ ಮೊಯ್ಲಿಯವರು ಶಾಸಕರಾಗಿ ಕಾರ್ಕಳದಿಂದ ಮೊದಲ ಬಾರಿಗೆ ಆಯ್ಕೆ ಯಾದಾಗ ತಮ್ಮನ್ನು ತಾವು ಪ್ರಗತಿಪರರೆಂದು ಗುರುತಿಸಿಕೊಂಡಿದ್ದರು. ಅವರ ನಿಲುವುಗಳು ಅದನ್ನು ಸಮರ್ಥಿಸುವಂತಿರುತ್ತಿದ್ದವು. ಉನ್ನತ ಶಿಕ್ಷಣ ಸಚಿವರಾಗಿದ್ದಾಗಲೂ ಬಹುಮಟ್ಟಿಗೆ ಅದೇ ನಿಲುವುಗಳನ್ನು ಪ್ರಕಟಿಸುತ್ತಿದ್ದರು. ಸಾಹಿತಿ ಯಾಗಿಯೂ ಅವರು ಗೌರವ ಪಡೆದದ್ದು ಇವೇ ನಿಲುವುಗಳನ್ನು ಇನ್ನೂ ಗಟ್ಟಿಗೊಳಿಸಬಹುದು ಎಂಬ ಕಾರಣಕ್ಕೆ. ಆದರೆ ಅದೇಕೋ ಬಹು ಜಾಗ್ರತೆಯಾಗಿ ಅವರು ವಿರುದ್ಧ ದಿಕ್ಕಿನಲ್ಲಿ ಬೆಳೆದು ಅಗ್ರಗಣ್ಯರಾಗಿಬಿಟ್ಟರು. ಅವರು ಮುಖ್ಯಮಂತ್ರಿ ಗಳಾದಾಗ ಹಿಂದುಳಿದ ಜನಾಂಗದವರೊಬ್ಬರು ಆ ಸ್ಥಾನಕ್ಕೆ ಬಂದಿದ್ದು ಸ್ವಾಗತಾರ್ಹವೆನಿಸಿತ್ತು. ಆದರೆ ಪಿ. ವಿ. ನರಸಿಂಹರಾವ್ ಸರ್ಕಾರವನ್ನು "ರಕ್ಷಿಸಲು" ಹೊರಟಾಗ ಅನಪೇಕ್ಷಣೀಯ ಮಾರ್ಗ ತುಳಿಯು ತ್ತಿದ್ದಾರೆಂಬ ಅಭಿಪ್ರಾಯ ಸರ್ವತ್ರ ವ್ಯಕ್ತವಾಯಿತು. ಅದಾದನಂತರ ಹಿಂದಿನ ಮೊಯ್ಲಿಯವರು ಕರಗಿ ಹೋದರು, ಕಲ್ಲಿದ್ದಲು ಕಪ್ಪಿನ ಮೊಯ್ಲಿಯವರು ವಿರಾಜಿಸತೊಡಗಿದರು. ಕೇಂದ್ರ ಸರ್ಕಾರದಲ್ಲಿ ಮಂತ್ರಿ ಪದವಿಗೇರಿದ ಮೇಲೆ ಪ್ರಗತಿಪರ ಮೊಯ್ಲಿ ಎಂಬುವವರೊಬ್ಬರು ಇದ್ದರೇ ಎಂಬ ಅನುಮಾನ ಕಾಡುವಷ್ಟರಮಟ್ಟಿಗೆ ಅವರು ಖಾಸಗೀಕರಣದ ಪರವಾದ ನಿಲುವನ್ನು ಹೊಂದುವುದಷ್ಟೇ ಅಲ್ಲ, ಸಾರ್ವಜನಿಕ ಸಂಪತ್ತನ್ನು ಖಾಸಗಿಯವರಿಗೆ ಬೇಕಾಬಿಟ್ಟಿ ಧಾರೆಯೆರೆದು ಕೊಡುವ ಪ್ರತಿಗಾಮಿ, ಅಪಾಯಕಾರಿ, ಜನವಿರೋಧಿ ನೀತಿಗಳನ್ನು ಪೋಷಿಸುವ ಸರದಾರರಾಗಿಬಿಟ್ಟರು. ಈಗಂತೂ ಅವರು ಅತಿದೊಡ್ಡ ಬಂಡವಳಿಗರ,

ಕಾರ್ಪೋರೇಟ್‌ಗಳ, ನೆಚ್ಚಿನ ಭಂಟರಾಗಿದ್ದಾರೆ. ಇಂಗ್ಲಿಷಿನಲ್ಲಿ "ನೀಲಿ ಕಣ್ಣಿನ ಹುಡುಗ" ಎಂಬ ಒಂದು ನುಡಿಗಟ್ಟಿದೆ. ಯಾರಿಗೋ ಬಹಳ ಬೇಕಾದವನಾಗಿದ್ದು, ಅವರ ಖಾಸಾ ಮಿತ್ರ, ಎಂಬುದು ಅದರರ್ಥ. ಮೊಯ್ಲಿಯವರು ಅಂಬಾನಿ ಯಂತಹ ಕುತ್ಸಿತ ಉದ್ಯಮಿಗಳ ಪೋಷಕ ರಾದ್ದರಿಂದ ಅವರೆಲ್ಲರಿಗೂ ಬೇಕಾದ "ನೀಲಿ ಕಣ್ಣಿನ ಹುಡುಗ" ಇವರು. ಪೆಟ್ರೋಲಿಯಂ ಖಾತೆಯ ಸಚಿವರಾಗಿ ಶ್ರೀ. ಜೈಪಾಲ ರೆಡ್ಡಿ ಇದ್ದರು. ಅಂಬಾನಿಯ ಕುತಂತ್ರಗಳನ್ನು ಬಯಲಿಗೆಳೆದು ಅವನಿಗೆ ಬರೆ ಎಳೆಯಲು ಅವರು ಸಿದ್ಧರಾದರು. ಆಗ ದೇಶದ "ಸೂಪರ್ ಪ್ರಧಾನ ಮಂತ್ರಿ"ಯಾದ ಅಂಬಾನಿಯು ನಾಮಾಂಕಿತ ಪ್ರಧಾನಿ ಮನಮೋಹನ ಸಿಂಗರಿಗೆ ಆಜ್ಞೆಯಿತ್ತು ರೆಡ್ಡಿಯವರನ್ನು ಕಿತ್ತು ಹಾಕಿಸಿದ. ತನ್ನ ಘನತೆಯ ಬಗ್ಗೆ ಅಷ್ಟೇನೂ ಚಿಂತಿಸದ ರೆಡ್ಡಿ ಬೇರೊಂದು ಖಾತೆಯನ್ನು ವಹಿಸಿಕೊಂಡು ಕೆಂಪು ಗೂಟದ ಕಾರನ್ನು ಉಳಿಸಿಕೊಂಡರು. ಅಂಬಾನಿಗೆ ೪೫,೦೦೦ ಕೋಟಿ ರೂಪಾಯಿಗಳು ದಕ್ಕುವಂತಹ ತೀರ್ಮಾನವನ್ನು ಶ್ರೀ. ಮೊಯಿಲಿಯವರು ಕೈಗೊಂಡರೆಂದು ಹಲವು ತಿಂಗಳುಗಳಿಂದ ಲೋಕಸಭಾ ಸದಸ್ಯ ಶ್ರೀ. ಗುರುದಾಸ ದಾಸ್‌ಗುಪ್ತ ದಾಖಲೆಗಳನ್ನೆಲ್ಲಾ ಪ್ರಧಾನಿಗೆ ಸಲ್ಲಿಸಿದ್ದಾರೆ, ಸಾರ್ವಜನಿಕರ ಮುಂದೆಯೂ ಇರಿಸಿದ್ದಾರೆ. ಅನಿಲದ ಬೆಲೆಯನ್ನು ಶೇಕಡ ನೂರರಷ್ಟು ಹೆಚ್ಚಿಸಿ ಅಂಬಾನಿಗೆ 'ಉಂಬಳಿ' ನೀಡಿದ ಕುಖ್ಯಾತಿ ಮೊಯಿಲಿಯವರದು. ಬಾವಿಯಲ್ಲಿ ಅನಿಲವೇ ಇಲ್ಲ ಎಂದು ಸುಳ್ಳು ಹೇಳುತ್ತಿದ್ದ ಅಂಬಾನಿಗೆ ಈಗ ಅದೇ ಬಾವಿಯಲ್ಲಿ ಅನಿಲ ದೊರಕುತ್ತದೆ! ಅಂಬಾನಿ–ಮೊಯಿಲಿ ಪವಾಡದ ಪರಿಣಾಮ ಅದು. ಇನ್ನೊಂದು ದುಷ್ಪರಿಣಾಮ ಸರ್ಕಾರದ ಬೊಕ್ಕಸಕ್ಕೆ ೪೫,೦೦೦ ಕೋಟಿ ರೂಪಾಯಿಗಳ ನಷ್ಟವೆಂದು ದಾಸ್‌ಗುಪ್ತ ಲೆಕ್ಕಾಚಾರ ಮಾಡಿದ್ದಾರೆ. ಆನಂದ ಶರ್ಮನೆಂಬ ಸಚಿವನನ್ನು ಮೀರಿಸುವ ಕುಖ್ಯಾತಿ ಮೊಯಿಲಿಯವರದು ಎಂದಾಯಿತು. ಕಪಿಲ್ ಸಿಬಲ್ ವೋಡಾಫೋನ್ ಕಂಪನಿಗೆ ೧೧,೦೦೦ ಕೋಟಿ ರೂಪಾಯಿಗಳ ದಂಡವನ್ನು ಮನ್ನಾ ಮಾಡಿಸಿದರೆ, ಮೊಯಿಲಿ ಯವರು ಅದರ ನಾಲ್ಕು ಪಟ್ಟು ಹಣವನ್ನು ಅಂಬಾನಿಗೆ ದಾನ ಮಾಡಿದ್ದಾರೆ. ಅಂಬಾನಿ ಫೋರ್ಬ್ಸ್ ಪಟ್ಟಿಗೆ ಸೇರಲು ಇದು ಸಾಲದೇನು? ಆಮೇಲೆ ಮೊಯಿಲಿಯವರ ವರ್ಚಸ್ಸು ಪರಿಸರ ಖಾತೆಯಲ್ಲಿ ಪ್ರಕಟವಾಗತೊಡಗಿತು. ವೇದಾಂತ, ಪೋಸ್ಕೊ, ಮುಂತಾದ ಕಂಪನಿಗಳು ಶ್ರೀಮತಿ. ಜಯಂತಿ ನಟರಾಜನ್ ಅವರನ್ನು ಪರಿಸರ ಖಾತೆಯಿಂದ ಹೊರದಬ್ಬಿದುವು. ಆ ಖಾತೆ ಶ್ರೀ. ಮೊಯಿಲಿಯವರ ವಶಕ್ಕೆ ಬಂದಿತು. ಪರಿಸರ ರಕ್ಷಣೆಯ ಭಾರ ಹೊತ್ತ ಶ್ರೀಯುತರು ಅನೇಕ ಕಂಪನಿಗಳಿಗೆ ಅನುಕೂಲ ಮಾಡಿಕೊಟ್ಟರು. ಕಂಪನಿಗಳಿಗೆ 'ನೀಲಿ ಕಣ್ಣಿನ ಹುಡುಗ' ನಿರೀಕ್ಷಿತ ಮಟ್ಟದಲ್ಲಿ ಆಪ್ತರಾಗಿದ್ದಿರಬೇಕು. ನರೇಂದ್ರ ಮೋದಿಯವರು ಹಿಂದಿನ ಪರಿಸರ ಸಚಿವೆ ಶ್ರೀಮತಿ. ಜಯಂತಿಯವರು ಭ್ರಷ್ಟಳೆಂದು ಸಾರುತ್ತಾ, ಆಕೆ ಉದ್ಯಮಿಗಳಿಗೆ "ಜಯಂತಿ ತೆರಿಗೆ" (ಅಂದರೆ, ಲಂಚ) ವಿಧಿಸುತ್ತಿದ್ದರೆಂದು ಸಾರ್ವಜನಿಕವಾಗಿ ಆಪಾದಿಸಿದರು. ಮಾನ್ಯ ಮೊಯಿಲಿಯವರು ಜಯಂತಿಯವರ ಪರವಾಗಿ ತುಟಿ ಬಿಚ್ಚಲಿಲ್ಲ. ತಮ್ಮದೇ ಪಕ್ಷದ ಸಚಿವೆಯನ್ನು ಶುದ್ಧಹಸ್ತದವರೆಂದು ಹೇಳಲು ಮೊಯಿಲಿಯವರು ಸಿದ್ಧರಾಗಲಿಲ್ಲ. ತಮ್ಮ ಸಹೋದ್ಯೋಗಿ ಸಚಿವೆಗಿಂತಲೂ ಸಾರ್ವಜನಿಕ ಸಂಪತ್ತನ್ನು ಲಪಟಾಯಿಸುವ ಅಂಬಾನಿಯಂತಹ ಉದ್ಯಮಿಗಳು ಅವರಿಗೆ ಮುಖ್ಯರಾದರು. ಶ್ರೀಮತಿ ಜಯಂತಿ ನಟರಾಜನ್ ಅವರು ಶುದ್ಧಹಸ್ತರೋ ಅಲ್ಲವೋ ಎಂದು ತೀರ್ಮಾನಿಸಲು 'ಹೊಸತು' ಬಳಿ ಪುರಾವೆಯೇನೂ ಇಲ್ಲ; ಆದರೆ ಮಾನ್ಯ ಮೊಯಿಲಿಯವರು ಅಂಬಾನಿಹಸ್ತದವರೆಂಬುದಕ್ಕೆ ಗುರುದಾಸ್ ದಾಸ್‌ಗುಪ್ತ ಹತ್ತಾರು ಪುರಾವೆಗಳನ್ನು ಪ್ರಧಾನಿಯವರಿಗೆ ಸಲ್ಲಿಸಿದ್ದಾರೆ. ಅವರು ಮೌನಿಬಾಬಾ ಅಲ್ಲವೆ! ಹೇಗೂ ಯುವಕ ರಾಹುಲ್ ಗಾಂಧಿಗೆ ಪಟ್ಟ ಕಟ್ಟಲು ಅವರು ತವಕದಿಂದಿದ್ದಾರೆ. ಜನತೆಯು ಸಿಂಗ್ ಪಕ್ಷಕ್ಕೆ ಬಹುಮತ ನೀಡಿದರೆ ತಾನೆ ಸಿಂಗ್ ಅವರ ವ್ರತ ಕೈಗೂಡುವುದು!! ಇಂದು ಸಚಿವರುಗಳ ಮುಖೇನ ತಮಗೆ ಬೇಕಾದ್ದನ್ನು ಪಡೆಯಲು ಬೃಹತ್ ಬಂಡವಳಿಗರು ಸಮರ್ಥರಾಗಿದ್ದಾರೆ. ನಾಳೆ ಅಂತಹ ಸಚಿವರನ್ನು ಆಶ್ರಯಿಸುವ ಅಗತ್ಯವೇ ಬಾರದಂತೆ ಅವರೆಲ್ಲಾ ತಾವೇ ಸಚಿವ ಸ್ಥಾನಗಳನ್ನು ತುಂಬಹೊರಟಿದ್ದಾರೆ. ಬೆಂಗಳೂರಿನಿಂದ ನಂದನ್ ನಿಲೇಕಣಿಯವರನ್ನು ಲೋಕಸಭೆಗೆ ಅಭ್ಯರ್ಥಿ ಯನ್ನಾಗಿ ಕಾಂಗ್ರೆಸ್ ಪಕ್ಷವು ಘೋಷಿಸಿರುವುದರ ಅರ್ಥ ಅದೇ. ಜನರು ಅಂಬಾನಿ ಸಂತತಿಗೆ ಅಧಿಕಾರ ನೀಡುತ್ತಾರೋ, ಅಧಿಕಾರವನ್ನು ತಮ್ಮಲ್ಲಿ ಇರಿಸಿಕೊಳ್ಳುತ್ತಾರೋ ಎಂಬುದೇ ೨೦೧೪ರ ಚುನಾವಣೆಯು ತೀರ್ಮಾನಿಸಬೇಕಾಗಿರುವುದು. ನಮ್ಮ ಆಯ್ಕೆ ಸರಳವಾದ್ದು, ನೇರವಾದ್ದು : ಭಾರತದ ಪ್ರಜಾಪ್ರಭುತ್ವದಲ್ಲಿ ಅಧಿಕಾರವು ಜನತೆಯದೇ ಆಗಿರಬೇಕು, ಅಂಬಾನಿ–ಪೋಸ್ಕೋ–ಒಬಾಮ ಅವರದ್ದಲ್ಲ. ಮಾನ್ಯ ಮೊಯಿಲಿಯವರು ತಾವು ಎತ್ತ ವಾಲಬೇಕೆಂದು ತೀರ್ಮಾನಿಸಿಕೊಳ್ಳುವುದು ಆರೋಗ್ಯಕರ.

✶ ✶ ✶

ಧಾರವಾಡದಲ್ಲಿ ನಡೆದ ಸಾಹಿತ್ಯ ಗೋಷ್ಠಿಯಲ್ಲಿ ಮಾನ್ಯ ಎಸ್. ಎಲ್. ಭೈರಪ್ಪನವರು ರಾಜಕೀಯ ದಿಂದ ತಾವು ವಿಮುಖರಾಗಿರುವುದಾಗಿಯೂ, ರಾಜಕೀಯಕ್ಕೆ ಹೊರಟರೆ ಸಾಹಿತಿಯಾಗಿ ಸತ್ತಂತೆ ಆಗುತ್ತದೆಯೆಂದೂ ಹೇಳಿದುದಾಗಿ ವರದಿಯಾಗಿದೆ. ಈವರೆಗಿನ ಅವರ ಸಾಹಿತ್ಯವು ರಾಜಕೀಯವಾಗಿ ನಿರ್ಲಿಪ್ತಭಾವವನ್ನು ಪ್ರಕಟಿಸಿದೆಯೆಂದು ಇದರರ್ಥ; ಏಕೆಂದರೆ ಅವರು ಸಾಹಿತಿಯಾಗಿ ಸತ್ತಿಲ್ಲ, ಸಾಯುವುದೂ ಬೇಡ. ಚುನಾವಣೆಗಳಲ್ಲಿ ಸ್ಪರ್ಧಿಸಿದರೆ ಮಾತ್ರ ಅದು ರಾಜಕೀಯವೆನಿಸುತ್ತದೆ ಎಂಬ ಶ್ರೀಯುತರ ವ್ಯಾಖ್ಯಾನವು ತರ್ಕಾತೀತವಾದ್ದು. ರಾಜಕೀಯ ವ್ಯಕ್ತಿಗಳು ಬೇರೆಯವರಿಗಿಂತ ಭಿನ್ನರು ಎಂಬುದನ್ನು ಅವರೆಲ್ಲಾ ಒಂದು ವರ್ಗದವರು ಎಂದು ಅರ್ಥೈಸಲಾದೀತೆ? ಎಲ್ಲ ರಾಜಕೀಯ ವ್ಯಕ್ತಿಗಳೂ ಒಂದೇ ತೆರನಾದವರು, ಅವರೆಲ್ಲರ ವ್ಯವಹಾರಗಳೂ ಒಂದೇ ರೀತಿಯವು, ಅವರೆಲ್ಲಾ ಒಂದು "ಬುಡಕಟ್ಟಿನವರು" ಎಂದು ಹೇಳಲಾಗು ವುದಿಲ್ಲ. ಭೈರಪ್ಪನವರ ಅಭಿಪ್ರಾಯಗಳು ಯಾವೊಂದು ರಾಜಕೀಯ ಚಿಂತನೆ ಮತ್ತು ಕ್ರಿಯೆ ಗಳಿಗೂ ಇಂಬು ಮತ್ತು ಪ್ರೇರಣೆ ನೀಡುವುದಿಲ್ಲವೆ? ಯಾವುದೇ ಆರೆಸ್ಸೆಸ್–ಬಿಜೆಪಿ ಸದಸ್ಯರಿಗಿಂತಲೂ ಭೈರಪ್ಪನವರು ಯಾವುದರಲ್ಲಿ ಭಿನ್ನರು? ಭ್ರಷ್ಟಾಚಾರದಲ್ಲಿ ತೊಡಗದಿರುವುದೊಂದನ್ನುಳಿದು ಇನ್ನೆಲ್ಲ ವಿಷಯಗಳಲ್ಲೂ ಭೈರಪ್ಪನವರು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯವಾಗಿ ಆರೆಸ್ಸೆಸ್– ಬಿಜೆಪಿಗಳಿಂದ ಗುಣಾತ್ಮಕವಾಗಿ ಪ್ರತ್ಯೇಕವಲ್ಲ. ಅವರ 'ಆವರಣ' ಮತ್ತು 'ಕವಲು' ಬರಹಗಳನ್ನು ಪಕ್ಕಕ್ಕಿಟ್ಟು ಬೇರೆಯವನ್ನು ನೋಡಿದರೂ ಈ ಸತ್ಯವು ಮನದಟ್ಟಾಗುತ್ತದೆ. ಎಂಥದೋ ಒಂದು ರಾಜಕೀಯ ಪ್ರಜ್ಞೆಯನ್ನು ಹೊಂದದ ಮತ್ತು ಅದನ್ನು ಪ್ರಕಟಿಸದ ಕಾದಂಬರಿಕಾರರ ಹೆಸರುಗಳ ಪಟ್ಟಿ ಮಾಡಹೊರಟರೆ ಹಾಳೆಯು ಖಾಲಿಯಾಗಿಯೇ ಉಳಿಯುತ್ತದೆ. ಜೇನ್ ಆಸ್ಟಿನ್, ಟಾಲ್‌ಸ್ಟಾಯ್, ಮುಂತಾದವರಿಗೂ ಒಂದು ರಾಜಕೀಯ ಅಭಿಪ್ರಾಯವಿತ್ತು, ಒಲವಿತ್ತು. ಅಂತೆಯೇ ದೇವುಡು ನರಸಿಂಹಶಾಸ್ತ್ರಿಗಳಿಗೂ ಇತ್ತು. ಏಕಿರಬಾರದು ಮತ್ತು ಇರದಿರಲು ಹೇಗೆ ಸಾಧ್ಯ? ತಾವು ಅನನ್ಯರೆಂದು ಭೈರಪ್ಪನವರು ಭಾವಿಸಿರುವಂತಿದೆ; ಅನನ್ಯರಲ್ಲ, ವಿಚಿತ್ರದವರು ಎಂದು ಇತರರು ಭಾವಿಸಿಯಾರು. "ನನ್ನದೊಂದು ರಾಜಕೀಯ ದೃಷ್ಟಿ ಇದೆ, ಅದನ್ನು ಪ್ರಕಟಿಸಲು ನನಗೆ ಅಂಜಿಕೆ ಇಲ್ಲ" ಎಂದು ಹೇಳಿಬಿಟ್ಟರೆ ಭೈರಪ್ಪನವರ ವ್ಯಕ್ತಿತ್ವವು ಕುಂದುವುದಿಲ್ಲ, ಉತ್ತಮವೂ ಆಗುವುದಿಲ್ಲ. ಅವರು ಅವರಾಗಿಯೇ ಉಳಿಯುತ್ತಾರೆ. ಹಾಗೆ ಉಳಿಯುವುದರಲ್ಲಿ ಬಿಗುಮಾನದ ಅಗತ್ಯವಿಲ್ಲ. ನಿತ್ಯಾನಂದಸ್ವಾಮಿಯು ಭಗವದ್ಗೀತೆಯ ಪ್ರವಚನ ನೀಡಿದರೂ ಆತ ನಿತ್ಯಾನಂದಸ್ವಾಮಿಯೇ ಆಗಿರುತ್ತಾನೆ. ಅದರಲ್ಲೇನು ಮುಚ್ಚುಮರೆ?

✶ ✶ ✶

ಅಂತೂ ಕಾಂಗ್ರೆಸ್ ಮತ್ತು ಭಾಜಪಗಳು ರಾಜ್ಯದಲ್ಲಿ ಕಳಂಕಿತರಿಗೆ ಹಸಿರು ನಿಶಾನೆ ತೋರುವುದರಲ್ಲಿ ಸಮವಾಗಿದ್ದಾರೆ. ಮುಖ್ಯಮಂತ್ರಿ ಸಿದ್ದರಾಮಯ್ಯ ಹಗ್ಗಜಗ್ಗಾಟ ನಡೆಸಿ ಕೊನೆಗೂ ಕಳಂಕಿತರನ್ನು ಸಂಪುಟದಲ್ಲಿ ಬರಮಾಡಿ ಕೊಂಡಿದ್ದಾರೆ. ಸಂಪುಟದಿಂದ ದೂರ ಇರಿಸಿದ್ದ ಡಿ. ಕೆ. ಶಿವಕುಮಾರ್, ರೋಷನ್ ಬೇಗ್ ಇಬ್ಬರೂ ಈಗ ಸಚಿವರು. ಮುಂಬರುವ ಲೋಕಸಭಾ ಚುನಾವಣೆಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಅಲ್ಪಸಂಖ್ಯಾತ ಮುಸ್ಲಿಮರನ್ನೂ ಬಹು ದೊಡ್ಡ ಸಂಖ್ಯೆಯಲ್ಲಿರುವ ಒಕ್ಕಲಿಗರನ್ನೂ ಓಲೈಸಲು ಈ ಕ್ರಮ ಕೈಗೊಳ್ಳಲಾಗಿದೆ. ಇದರ ಹಿಂದೆ ದೆಹಲಿಯ

ಹೈಕಮಾಂಡ್‌ನ ಕೈವಾಡ ಎಷ್ಟು ಬಲವಾಗಿತ್ತು ಎನ್ನುವುದನ್ನು ಊಹಿಸಿಕೊಳ್ಳಬಹುದು. ಸಂಪುಟ ವಿಸ್ತರಣೆ ಈಗಾಗಲೇ ಕಾಂಗ್ರೆಸ್ ಶಾಸಕರ ಪೈಕಿ ಸಚಿವರಾಗುವ ಕನಸು ಕಾಣುತ್ತಿರುವವರ ಕಣ್ಣು ಕೆಂಪಗಾಗಿಸಿದೆ. ಬಹಿರಂಗವಾಗಿಯೇ ಅವರಲ್ಲಿ ಕೆಲವರು ತಮ್ಮ ಅತೃಪ್ತಿ ತೋಡಿಕೊಂಡಿದ್ದಾರೆ. ಹೈಕಮಾಂಡ್ ಪ್ರತಿನಿಧಿ ದಿಗ್ವಿಜಯ ಸಿಂಗ್ ನೇತೃತ್ವದ ಸಮನ್ವಯ ಸಮಿತಿ ಈಚೆಗೆ ಸಭೆ ಸೇರಿ ಸದ್ಯಕ್ಕೆ ತೇಪೆ ಕೆಲಸ ನಿರ್ವಹಿಸಿದೆ, ಚುನಾವಣೆ ಗಳಾದ ಮೇಲೆ ಏನಾಗುತ್ತೊ ನೋಡಬೇಕು. ಪ್ರದೇಶ ಕಾಂಗ್ರೆಸ್ ಅಧ್ಯಕ್ಷ ಪರಮೇಶ್ವರ್ ಬೆಂಬಲಿಗರು ಅವರಿಗೆ ಉಪ ಮುಖ್ಯಮಂತ್ರಿ ಸ್ಥಾನ ನೀಡಬೇಕೆಂದು ಒತ್ತಾಯಪಡಿಸುತ್ತಿದ್ದಾರೆ. ಈ ಮಧ್ಯೆ ಭ್ರಷ್ಟಾಚಾರದ ವಿರುದ್ಧವಾಗಿ ಸಮರ ಸಾಧಿಸಿರುವ ಹಿರೇಮಠ ಅವರು ಸಚಿವ ರೋಷನ್ ಬೇಗ್ ಮತ್ತು ಶಿವಕುಮಾರ್ ಭೂ ಕಬಳಿಕೆಯ ಹೊಸ ಆರೋಪ ಮಾಡಿ ದಾಖಲೆಗಳನ್ನು ಬಿಡುಗಡೆ ಮಾಡಿದ್ದಾರೆ. ಇವರಿಬ್ಬರ ಹಿನ್ನೆಲೆ ಎಂಥದ್ದು ಎನ್ನುವುದನ್ನು, ಇವರ ಜಾತಕವನ್ನು ಮತ್ತೆ ಇಲ್ಲಿ ಒದರುವುದು ಅನಗತ್ಯ. ಇವರು ಮುಂದಿನ ದಿನಗಳಲ್ಲಿ ಕಾಂಗ್ರೆಸ್ಸಿಗೆ ಹೊರೆಯಾಗುತ್ತಾರೆಯೋ ಇಲ್ಲ ಲಾಭವಾಗುತ್ತಾರೋ ಲೋಕಸಭಾ ಚುನಾವಣೆಗಳ ಫಲಿತಾಂಶದಿಂದ ಗೊತ್ತಾಗುತ್ತದೆ. ಅಂತೂ ಕಾಂಗ್ರೆಸ್ ಏನೇ ತಿಪ್ಪರಲಾಗ ಹೊಡೆದರೂ ಕಳಂಕಿತರನ್ನು ದೂರ ಇರಿಸಿ ಉಳಿಯುವುದು ಕಷ್ಟ ಎನ್ನುವುದಕ್ಕೆ ಸಿದ್ದರಾಮಯ್ಯ ಸಂಪುಟ ಇನ್ನೊಂದು ಸಾಕ್ಷಿ.

ಈ ವಿಷಯದಲ್ಲಿ ರಾಜ್ಯ ಭಾರತೀಯ ಜನತಾ ಪಾರ್ಟಿಯೇನೂ ಹಿಂದೆ ಬಿದ್ದಿಲ್ಲ. ಕಳಂಕಿತ ನರೇಂದ್ರ ಮೋದಿಗೆ ಪ್ರಧಾನಿ ಪಟ್ಟ ಕಟ್ಟಲು ಹೊರಟಿರುವ ಈ ಪಕ್ಷದಿಂದ ಬೇರೆ ಏನನ್ನು ನಿರೀಕ್ಷಿಸಲು ಸಾಧ್ಯ ಹೇಳಿ. ಈಗ ಎಲ್ಲ 'ನಮೋ' ಜಪ ಮಾಡುತ್ತ ಪಕ್ಷ ಬಲಪಡಿಸಿಕೊಳ್ಳಲು ಹೊರಕ್ಕೆ ಹೊರಟಿದ್ದವರನ್ನೆಲ್ಲ ಮತ್ತೆ ಒಳಗೆ ಸೇರಿಸಿ ಕೊಳ್ಳುತ್ತಿದೆ. ನಾಲ್ಕಾರು ತಿಂಗಳಿಂದ ಯಡಿಯೂರಪ್ಪ ಸ್ಥಾಪಿತ ಕರ್ನಾಟಕ ಜನತಾ ಪಕ್ಷ ಭಾಜಪ ಸೇರುವ ಪ್ರಯತ್ನ ನಡೆಸಿತ್ತು. ರಾಜ್ಯ ಭಾಜಪ ನಾಯಕರುಗಳು ಸೋಲನ್ನುಂಡು ಸಪ್ಪಗಾಗಿ ಹೊಸ ರಕ್ತ ತುಂಬಲಾಗದೆ ಮತ್ತೆ ಹಳೇ ಪಾದಕ್ಕೇ ಎರಗಲು ಸಿದ್ಧರಾಗಿದ್ದರು. ದೆಹಲಿ ನಾಯಕರು ಮಾತ್ರ ಹಿಂದುಮುಂದು ನೋಡುತ್ತಿದ್ದರು. ಯಡಿಯೂರಪ್ಪ ಅಂತೂ ತಮ್ಮನ್ನು ನಂಬಿದವರ ಕೈಬಿಟ್ಟು ನಡೆಯಲು ತುದಿಗಾಲ ಮೇಲೆ ನಿಂತಿದ್ದರು. ಅಂತೂ ಡಿಸೆಂಬರ್ ತಿಂಗಳಲ್ಲೇ 'ಮಾತೃ ಪಕ್ಷ'ಕ್ಕೆ ಮರಳಿದ್ದಾರೆ ನಾಲ್ಕು ಶಾಸಕರ ಜೊತೆ. ಮೂರನೇ ಎರಡು ಭಾಗ ಆಯಿತಲ್ಲ ಇನ್ನೇನು. ಇವರ ಸೇರ್ಪಡೆಯಿಂದ ದೇವೇಗೌಡರ ಜೆಡಿಎಸ್, ವಿರೋಧ ಪಕ್ಷದ ಮಾನ್ಯತೆ ಕಳೆದುಕೊಳ್ಳುತ್ತಿದೆ. ತಮ್ಮನ್ನು ನಂಬಿದ್ದ ಕೆಜೆಪಿ ಕಾರ್ಯಕರ್ತರಿಗೆ ಯಡಿಯೂರಪ್ಪ ಕೈಕೊಟ್ಟಿದ್ದಾರೆ. ರಾಜಕೀಯದಲ್ಲಿ ಅಸಂಭವವಾದ್ದು ಏನೂ ಇಲ್ಲ. ಅದರಲ್ಲೂ ಕೆಳಮಟ್ಟದ ರಾಜಕೀಯಕ್ಕೆ ದಾದಿಫಿರ್ಯಾದಿ ಏನೂ ಇಲ್ಲ, ಆಡಿದ್ದೇ ಆಟ.

* * *

ಮೂಢನಂಬಿಕೆ ನಿಷೇಧ ಕಾನೂನು ತರಲು ಮುಂದಾಗಿದ್ದ ಸಿದ್ದರಾಮಯ್ಯ ಈಗ ಪೂರ್ಣವಾಗಿ ಹಿಂದೇಟು ಹಾಕಿದ್ದಾರೆ. ಈ ವಿಚಾರದ ಮಟ್ಟಿಗೆ ಅವರು ಬಾಯಿಬಿಡುತ್ತಲೇ ಇಲ್ಲ. ಮಹಾರಾಷ್ಟ್ರದಲ್ಲಿ ದಾಭೋಲ್ಕರ್ ಹತ್ಯೆಯಾದ ಮೇಲೆ ತೋರಿಬಂದ ಉತ್ಸಾಹ ಈಗ ಅವರಲ್ಲಿಲ್ಲ. ಸಿದ್ದರಾಮಯ್ಯನವರು ವಿಚಾರವಾದಿ ಹೌದೋ ಅಲ್ಲವೋ ಗೊತ್ತಿಲ್ಲ. ಆದರೆ ಅವರ ಪಕ್ಷದಲ್ಲಿರುವವರಂತೂ ಖಂಡಿತ ಇಲ್ಲ. ಎಲ್ಲರೂ ನಂಬಿರುವವರೇ. ಹೇಗೆ ಕೈಬಿಟ್ಟಾರು. ನಮ್ಮ ದೇಶದ ಜನರ ಮನೋಭಾವ ಇನ್ನೂ ಹದಿನೆಂಟನೆ ಶತಮಾನದಲ್ಲೇ ಇದೆಯೇ ಹೊರತು ಇಪ್ಪತ್ತೊಂದನೇ ಶತಮಾನಕ್ಕೆ ಹೊಂದಿ ಕೊಂಡಿಲ್ಲ. ಬಂಡವಾಳಶಾಹಿ ವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸಲು ದಾಪುಗಾಲು ಹಾಕುತ್ತಿರುವ ದೇಶ ಇನ್ನೂ ಪಾಳೆಯಗಾರಿ ಸಂಸ್ಕೃತಿಯನ್ನು ಕೊಡವಿಕೊಂಡಿಲ್ಲ. ಸುತ್ತಲೂ ಆಸ್ತಿ, ಆಸ್ತಿಕರು ಇರುವಾಗ ಬೇರೆ ಏನನ್ನು ನಿರೀಕ್ಷಿಸಲು ಸಾಧ್ಯ ? ಇಷ್ಟೆಲ್ಲ ಪೀಠಿಕೆ ಯಾಕೆಂದರೆ ಸಿದ್ದರಾಮಯ್ಯ ನವರ ಸಂಪುಟದಲ್ಲೇ ಮೂಢನಂಬಿಕೆಯ ಭಕ್ತರಿರುವಾಗ ಅವರಿಗೆ ಏನು ಮಾಡಲು ಸಾಧ್ಯ ? ಜ್ಯೋತಿಷ್ಯ, ತಾಯಿತ, ವಾಸ್ತು, ಯಜ್ಞಯಾಗ, ದೇವತಾ ದರ್ಶನ, ಅರ್ಚನೆ, ಆರಾಧನೆ, ಅಭಿಷೇಕ ಇವುಗಳನ್ನೇ ಬಂಡವಾಳವಾಗಿ ಹೊಂದಿರುವ ರಾಜಕಾರಣಿಗಳು ಇರುವಾಗ ವಿಚಾರವಾದಿ ಧೋರಣೆ ಅಪೇಕ್ಷಿಸುವುದು ಮೂರ್ಖತನವೇ ಸರಿ. ಹೊಸದಾಗಿ ಸಚಿವರಾಗಿರುವ ಡಿ. ಕೆ. ಶಿವಕುಮಾರ್ ಮತ್ತು ಸಚಿವ ಎಚ್. ಆಂಜನೇಯ ಒಂದೇ ಕೊಠಡಿಗಾಗಿ ಕಚ್ಚಾಡಿದರೆಂದು ಮಾಧ್ಯಮಗಳಲ್ಲಿ ವರದಿಯಾಗಿತ್ತು. ಇಬ್ಬರೂ ಸಂಖ್ಯಾಶಾಸ್ತ್ರವನ್ನು ನಂಬಿರುವವರು. ಬೆಸಸಂಖ್ಯೆ ಜ್ಯೋತಿಷಿಗಳ ಪ್ರಕಾರ ಪ್ರಶಸ್ತವಾದ ಸಂಖ್ಯೆ ೩೪೦ ನಂಬರ್ ಎಂದರೆ ೭. ಅತಿ ಶ್ರೇಷ್ಠ ಸಂಖ್ಯೆ. ಅದಕ್ಕಾಗಿ ಕಚ್ಚಾಡಿದರೆ ಯಾರದೇನು ಅಡ್ಡಿ. ಆದರೆ ಇಲ್ಲಿ ಅವರ ಕಚ್ಚಾಟದ ವಿಷಯ ಅಲ್ಲ; ಸಚಿವ ಆಂಜನೇಯ ಲಕ್ಷಗಟ್ಟಳೆ ಖರ್ಚು ಮಾಡಿಸಿ ತಮ್ಮ ಕೋಣೆ ಅಗಲೀಕರಿಸಲು ಗೋಡೆ ಒಡೆಸಿರುವುದು. ಇವರಿಗೆ ನಿಗದಿಯಾಗಿದ್ದು ೩೪೦, ೩೪೦ ಎ ಸಂಖ್ಯೆಯ ಎರಡು ಕೋಣೆಗಳು. ಸ್ಥಳ ಸಂಕೋಚ ಇವರಿಗೆ. ಎರಡೂ ಸೇರಿಸಿ ದೊಡ್ಡ ಕೋಣೆ ಬೇಕು ಈತನಿಗೆ ಆಡಳಿತ ನಡೆಸಲು. ಸರಿ ಮಧ್ಯದ ಗೋಡೆ ಒಡೆಸಲು ಮುಂದಾದರು. ಈಗ ಈ ಪ್ರಕರಣ ನ್ಯಾಯಾಲಯದ ಮೆಟ್ಟಿಲೇರಿದೆ. ನಾಚಿಕೆಗೇಡು ! ಕೆಲಸ ಮಾಡುವುದನ್ನು ಬಿಟ್ಟು ಕಿತಾಪತಿ ನಡೆಸುವುದೇ ಇಂಥವರಿಗೆ ಕಸಬು. ಈ ಸಚಿವರ ಕೋಣೆ ಸಜ್ಜುಗೊಳಿಸಲು ಖರ್ಚು ಎಷ್ಟು ಗೊತ್ತೆ ? ೧೮ ಲಕ್ಷ ರೂ. ಅಂದಾಜು. ತೆರಿಗೆದಾರರ ಹಣ ತಾನೆ ಅವರಿಗೇನಂತೆ. ಇಂಥವರಿರುವಾಗ ಉತ್ತಮವಾದ ಆಡಳಿತ ನಿರ್ವಹಿಸುವುದು ಹೇಗೆ ? 'ಸರಕಾರದ ಕೆಲಸ ದೇವರ ಕೆಲಸ' ತಾನೆ !

* * *

ರಾಜಧಾನಿ ಬೆಂಗಳೂರು ನಗರದ ರಸ್ತೆಗಳಲ್ಲಿ ದೊಡ್ಡ ದೊಡ್ಡ ಗುಂಡಿಗಳು, ರಸ್ತೆ ಪಕ್ಕದಲ್ಲಿ ಕಸದ ರಾಶಿ, ದುರ್ವಾಸನೆ ಇವೆಲ್ಲ ಹೊಸದೇನಲ್ಲ. ಉದ್ಯಾನನಗರ ಅಧ್ವಾನ ನಗರವಾಗಿ ಯಾವ ಕಾಲವೋ ಆಯಿತು. ಈಗ ನಗರಕ್ಕೆ 'ಸಾಲದ ನಗರ' ಎಂದು ಹೆಸರಿಡಲು ಅಡ್ಡಿ ಇಲ್ಲ. ಕೆಲ ತಿಂಗಳ ಹಿಂದೆ ಅಮೆರಿಕದ ಕಾರು ತಯಾರಿಕೆ ನಗರ ಡೆಟ್ರಾಯಿಟ್ ದಿವಾಳಿಯಾದ ಸುದ್ದಿ ಪ್ರಕಟವಾಗಿತ್ತು. ಆದಾಯಕ್ಕಿಂತ ಖರ್ಚು ಹೆಚ್ಚಾಗಿ ಆ ನಗರ ಆಡಳಿತಕ್ಕೆ ಸಿಬ್ಬಂದಿಗೆ ಸಂಬಳ ನೀಡಲು ರೊಕ್ಕ ಇರಲಿಲ್ಲ. ಇದೀಗ ಬೆಂಗಳೂರು ನಗರದ ಪರಿಸ್ಥಿತಿ ಕೂಡ ಹಾಗೆಯೇ ಆಗಿದೆ. ಬೆಂಗಳೂರು ನಗರ ಪಾಲಿಕೆ, ಈಗ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮೂಗಿನ ತುದಿಯವರೆಗೆ ಸಾಲದ ಮಡುವಿನಲ್ಲಿದೆ. ಅದರ ಸಾಲದ ಹೊರೆ ಸುಮಾರು ೩೫೦೦ ಕೋಟಿ ರೂಪಾಯಿಗಳು ಎಂದು ಹೇಳಲಾಗಿದೆ. ಕಾರ್ಪೊರೇಷನ್ನಿಗೆ ಸೇರಿರುವ ನೂರಾರು ಆಸ್ತಿಗಳು ಬ್ಯಾಂಕುಗಳಿಗೆ ಅಡಮಾನ ವಾಗಿವೆ. ನಗರದ ಕೆ. ಆರ್. ಮಾರುಕಟ್ಟೆ, ಮೇಯೋ ಹಾಲ್, ಯುಟಿಲಿಟಿ ಕಟ್ಟಡ, ಕೆಂಪೇಗೌಡ ಮ್ಯೂಸಿಯಂ ಮುಂತಾದ ಹಲವು ಆಸ್ತಿಗಳು ಅಡಮಾನವಾಗಿವೆ. ನಗರದ ಪ್ರತಿಷ್ಠಿತ ಪುರಭವನ – ಸರ್ ಪುಟ್ಟಣ್ಣ ಚೆಟ್ಟಿ ಟೌನ್ ಹಾಲ್‌ಅನ್ನು ವಿಕ್ರಯಿಸುವ, ಅಡಮಾನ ಮಾಡುವ ಸುದ್ದಿ ಈಚೆಗೆ ಬಂದಿತ್ತು. ಆದರೆ ಕಟ್ಟಡ ಯಾರಿಗೆ ಸೇರಿದ್ದು – ಸರಕಾರಕ್ಕೋ, ಕಾರ್ಪೊರೇಷನ್ನಿಗೋ ಯಾರಿಗೂ ಗೊತ್ತಿಲ್ಲ. ಎರಡರ ಆರ್ಥಿಕ ಸ್ಥಿತಿಯೂ ಒಂದೇ ಅನ್ನಿ. ಇರುವ ಎಲ್ಲ ಬ್ಯಾಂಕುಗಳಿಂದಲೂ ಕಾರ್ಪೊರೇಷನ್ ಸಾಲ ಪಡೆದುಕೊಂಡಿದೆ. ಕಾರ್ಪೊರೇಷನ್ ಕಂಟ್ರಾಕ್ಟರುಗಳಿಗೆ ತೆರಬೇಕಾಗಿರುವ ಬಾಕಿ ಹಣವೇ ೧೬೦೦ ಕೋಟಿ ರೂಪಾಯಿಗಳು ಎಂದು ಲೆಕ್ಕ ಹಾಕಲಾಗಿದೆ. ಈ ಮಧ್ಯೆ ಮಹಾನಗರ ಪಾಲಿಕೆ ತನ್ನ ಕೆಲವು ಆಸ್ತಿಗಳನ್ನು ಮಾರಾಟ ಮಾಡಿ ಸಾಲ ತೀರಿಸುವ ಯೋಜನೆ ಹೊಂದಿದೆ ಎಂಬ ಸುದ್ದಿ ಇದೆ. ಹಾಗಾದರೆ ಅವನ್ನು ಯಾರು ಯಾರು ಕಡಿಮೆ ದರದಲ್ಲಿ ಲಪಟಾಯಿಸುತ್ತಾರೋ ನೋಡಬೇಕು. ಭ್ರಷ್ಟಾಚಾರ ದುರಾಡಳಿತದಿಂದ ತುಂಬಿರುವ ಈ ಪಾಲಿಕೆಯ ಸ್ಥಿತಿ ಇಷ್ಟು ಚಿಂತಾಜನಕ ವಾಗಿರುವಾಗ ಇನ್ನೇನು ತಾನೆ ನಿರೀಕ್ಷಿಸಲು ಸಾಧ್ಯ ! ರಾಜ್ಯದಲ್ಲಿ ಇತರ ನಗರಸಭೆಗಳ ಸ್ಥಿತಿಯೂ ಇದಕ್ಕೆ ಹೊರತಾಗಿಲ್ಲ. ಎಲ್ಲರ ಮನೆಯ ದೋಸೆಯೂ ತೂತೆ ಎಂದು ಸಮಾಧಾನಪಟ್ಟುಕೊಳ್ಳಬಹುದಲ್ಲ. ಇಡೀ ದೇಶವೇ ಸಾಲದಲ್ಲಿ ಮುಳುಗಿರುವಾಗ ಬೆಂಗಳೂರು ನಗರ ಕಾರ್ಪೊರೇಷನ್‌ದೇನು ಕೇಡು ಅಲ್ಲವೆ ?




ಮುಸ್ಲಿಂ ಹೆಣ್ಣು ಮಕ್ಕಳಿಗೆ 'ಶಾದಿ ಭಾಗ್ಯ' ಎಂಬ ಒಂದು ಯೋಜನೆಯನ್ನು ಸರಕಾರ ಹುಟ್ಟು ಹಾಕಿದೊಡನೆ, ಪತ್ರಕರ್ತರಿಗೆ ಲೇಖಕ, ಲೇಖಕಿಯರು ಹಾಗೂ ಸಾಮಾಜಿಕ ಕಾರ್ಯಕರ್ತರ ಸಂದರ್ಶನ ನಡೆಸಿ ಪತ್ರಿಕೆಗಳಲ್ಲಿ ಪ್ರಕಟಿಸಲು ಒಂದು ಅವಕಾಶ ದೊರೆಯಿತು. ಅಲ್ಪಸಂಖ್ಯಾತರ ಪರವಾಗಿ ಬರೆಯುವ ಪತ್ರಿಕೆಗಳು, 'ಶಾದಿ ಭಾಗ್ಯ'ದ ಪರವಾಗಿ ಹಾಗೂ ಇತರ ಪತ್ರಿಕೆಗಳು ಅದರ ವಿರೋಧವಾಗಿ ಲೇಖನಗಳನ್ನು ಪ್ರಕಟಿಸಿದುವು. ನನ್ನ ಸಂದರ್ಶನ ನಡೆಸಿದವರೊಡನೆ ನಾನು ಹೇಳಿದ ಎಲ್ಲಾ ವಿಷಯಗಳನ್ನೂ ಸಮನಾಗಿ ಪ್ರಕಟಿಸದೇ, 'ಬಡ ಮುಸ್ಲಿಂ ಹೆಣ್ಣು ಮಕ್ಕಳ ಮದುವೆಗಾಗಿ ಸರಕಾರ ನೀಡುವ ಈ ಕೊಡುಗೆಯನ್ನು ನಾನು ವಿರೋಧಿಸಿ, ಈ ಸೌಲಭ್ಯವನ್ನು ನಾನು ತಡೆಯುತ್ತಿದ್ದೇನೆ' ಎಂಬ ಅಪವಾದ ನನ್ನ ಮೇಲಿದೆ.

ಬಡ ಮುಸ್ಲಿಂ ಹೆಣ್ಣು ಮಕ್ಕಳ ಮದುವೆಗಾಗಿ ಸರಕಾರ ಹಣ ನೀಡಬೇಕಾಗಿಲ್ಲ, ಯಾಕೆಂದರೆ ಅದು ಆ ಹೆಣ್ಣು ಮಕ್ಕಳ ಉಪಯೋಗಕ್ಕೆ ದೊರೆಯುವುದಿಲ್ಲ. ಈ ಬಡ ಗಂಡಸರು ಆ ಹಣವನ್ನು ದುರ್ಬಳಕೆ ಮಾಡಿ, ಮಂಚ ಮತ್ತು ಕಪಾಟು ಕೊಟ್ಟರೆ ಮರುದಿನವೇ ಅವುಗಳೆಲ್ಲವನ್ನೂ ಮಾರಿ ಹೆಂಡತಿಗೆ ತಲಾಖ್ ಕೊಟ್ಟೋ ಕೊಡದೆಯೋ ಪರಾರಿಯಾಗುತ್ತಾರೆ. ಬಡ, ಅನಕ್ಷರಸ್ಥ, ನಿರುದ್ಯೋಗಿ ಮಹಿಳೆಯರಿಗೆ ಆರ್ಥಿಕವಾಗಿ ನೆರವು ದೊರೆಯುವಂತಹ ಕೈಗಾರಿಕೆಗಳನ್ನು ಸರಕಾರ ಸ್ಥಾಪಿಸಬೇಕು; ಗಾರ್ಮೆಂಟ್ ಫ್ಯಾಕ್ಟರಿ ಅಥವಾ ಬೇಕರಿ ಸಾಮಾನುಗಳನ್ನು ಸಿದ್ಧಪಡಿಸುವುದು ಮತ್ತು ಅವುಗಳಿಗೆ ಮಾರುಕಟ್ಟೆಯನ್ನೊದಗಿಸುವುದು ಮುಂತಾಗಿ ಅವರ ಆರ್ಥಿಕತೆಗೆ ನೆರವಾಗುವಂತಹದೇನನ್ನಾದರೂ ಸರಕಾರ ಸ್ಥಾಪಿಸಿ, ಅವರು ಆರ್ಥಿಕವಾಗಿ ಸಬಲರಾಗುವಂತೆ ಸರಕಾರ ಯೋಜನೆ ರೂಪಿಸಬೇಕೇ ಹೊರತು ಅವರ ಮದುವೆಗಾಗಿ ಹಣ ನೀಡುವಂತಹ ಯೋಜನೆಯನ್ನು ಸರಕಾರ ಕೈಗೊಳ್ಳಬಾರದೆಂದು ನಾನು ಹೇಳಿದ್ದೆ.

ಇನ್ನೊಂದು ಬಹಳ ಮುಖ್ಯವಾದ ವಿಷಯವನ್ನೂ ನಾನು ಹೇಳಿದ್ದೆ. ಅಲ್ಪಸಂಖ್ಯಾತ ಬಡ ಮಹಿಳೆಯರ ಮದುವೆಗೆ ನೆರವು ನೀಡುವುದೆಂದರೆ ಬಹುಸಂಖ್ಯಾತರಲ್ಲಿ ಬಡ ಮಹಿಳೆಯರಿಲ್ಲವೇ ಎಂಬ ಪ್ರಶ್ನೆ ಕೂಡಲೇ ಎದುರಾಗುತ್ತದೆ. ಮಾತ್ರವಲ್ಲ, ಸರಕಾರವೇ ಸಮಾಜಗಳ ಬೇರ್ಪಡಿಸುವಿಕೆಗೆ ಸಹಕಾರ ನೀಡಿದಂತಾಗುತ್ತದೆ. ಅಲ್ಪಸಂಖ್ಯಾತರ ಕುರಿತು ಬಹುಸಂಖ್ಯಾತರಲ್ಲಿ ಅಸಹನೆ ಮಡುಗಟ್ಟುತ್ತದೆ. ಬಹುಸಂಖ್ಯಾತರಲ್ಲಿ ಅವಿವಾಹಿತ ಬಡ ಮಹಿಳೆಯರಿಲ್ಲವೇ ಎಂಬ ಪ್ರಶ್ನೆಗೆ ಒಂದು ಉದಾಹರಣೆ ನಮ್ಮ ಕಣ್ಣ ಮುಂದಿದೆ.

ಸಂತೋಷಕುಮಾರನೆಂಬ ಶಿಕ್ಷಕನೊಬ್ಬನು ಸುಮಾರು ಇಪ್ಪತ್ತಕ್ಕಿಂತ ಹೆಚ್ಚು ಮಹಿಳೆಯರಿಗೆ ಸಯನೈಡ್ ನೀಡಿ ಕೊಲೆ ಮಾಡಿದ್ದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಆ ಎಲ್ಲ ಮಹಿಳೆಯರಿಗೆ ಆತನು ಒಡ್ಡಿದ ಆಮಿಷವೆಂದರೆ ಮದುವೆ! ತಾನು ಅವಿವಾಹಿತನಾಗಿ ಸರಕಾರಿ ಕೆಲಸದಲ್ಲಿದ್ದೇನೆಂದೂ ಆಕೆಯೊಡನೆ ಮದುವೆಗೆ ಸಿದ್ಧನೆಂಬುದೂ ಆತನೊಡ್ಡಿದ ಆಮಿಷ. ಬಹಳ ಬಡತನದಲ್ಲಿದ್ದು ಬೀಡಿ ಕಟ್ಟುತ್ತಾ, ಮದುವೆಗಾಗಿ ಕಾತರಿಸುತ್ತಾ ಪ್ರಾಯ ಮೀರುತ್ತಿದ್ದ ಆ ಮಹಿಳೆಯರು ಸುಲಭದಲ್ಲಿ ಆತನ ಬಲೆಗೆ ಬಿದ್ದಿದ್ದರು, ಹೀಗೆ ಮದುವೆಯನ್ನು ಇದಿರು ನೋಡುತ್ತಾ, ಕಾತರಿಸಿ ಸುಸ್ತಾಗಿ ದಿನಗಳೆಯುತ್ತಿರುವ ಬಡ ಮಹಿಳೆಯರು ಈ ದೇಶದ ಎಲ್ಲಾ ಸಮಾಜಗಳಲ್ಲೂ ಇದ್ದಾರೆ ಎಂಬುದರೆಡೆಗೆ ಸರಕಾರ ಗಮನಹರಿಸಬೇಕು. ಅಲ್ಪಸಂಖ್ಯಾತರ ಅಭಿವೃದ್ಧಿಗಾಗಿ ಬಿಡುಗಡೆ ಮಾಡಿದ ಫಂಡ್ ಖರ್ಚಾಗಲಿಲ್ಲವೆಂದು ಅದನ್ನು ಹೆಣ್ಣು ಮಕ್ಕಳ ಮದುವೆಗಾಗಿ ಖರ್ಚು ಮಾಡಿದರೆ ಖಂಡಿತವಾಗಿಯೂ ಅವರ ಉದ್ಧಾರವಾಗುವುದಿಲ್ಲ ಎಂಬುದಕ್ಕೆ ಒಂದು ಉದಾಹರಣೆ ನೀಡುವೆ.




ಕೆಲವು ವರ್ಷಗಳ ಹಿಂದೆ ನನ್ನ ಬಂಧುಗಳೊಬ್ಬರ ಮನೆಯಲ್ಲಿ ಓರ್ವ ಬಡ ಹುಡುಗಿ ಇದ್ದಳು. ಮಾನಸಿಕ ಸ್ಥಿರತೆ ಇಲ್ಲದ ಆಕೆಯ ತಾಯಿ ಆ ಮಗುವನ್ನು ಈ ಶ್ರೀಮಂತರ ಮನೆಯಲ್ಲಿ ಬಿಟ್ಟು ಎಲ್ಲೋ ಹೊರಟು ಹೋದಳು. ಆ ಮನೆಯವರು ಆ ಮಗುವನ್ನು ಸಾಕಿ ತಮ್ಮ ಮಕ್ಕಳೊಡನೆ ಶಾಲೆಗೆ ಕಳುಹಿಸಿ ಓದು ಬರಹವನ್ನೂ ಕಲಿಸಿದರು. ದೊಡ್ಡವಳಾದ ಬಳಿಕ ಅವರ ಮನೆಗೆಲಸ ಮಾಡುತ್ತಾ ದಿನಗಳೆಯುತ್ತಿದ್ದಳು. ತಮ್ಮ ಮನೆಯಲ್ಲೇ ಬೆಳೆದ ಹುಡುಗಿಗೆ ಅವರು ಮದುವೆ ಮಾಡಲೂ ಸಿದ್ಧರಾದರು. ಹುಡುಗನಿಗೆ ಒಂದು ಲಕ್ಷ ರೂಪಾಯಿ

## 'ಹೊಸತು' ಓದುಗರ – ಲೇಖಕರ ಸಂವಾದ ಕಾರ್ಯಕ್ರಮ

೨೦೧೪ ಫೆಬ್ರವರಿ ೧೬ರ ಭಾನುವಾರದಂದು ಬೆಳಗ್ಗೆ ೧೦ ಗಂಟೆಗೆ **ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್** (ಬಿ. ಪಿ. ವಾಡಿಯಾ ರಸ್ತೆ, ಬಸವನಗುಡಿ, ಬೆಂಗಳೂರು – ೪) ಇಲ್ಲಿ ಸಂವಾದ ಕಾರ್ಯಕ್ರಮವೊಂದನ್ನು ಏರ್ಪಡಿಸಲಾಗಿದೆ.

'ಹೊಸತು' ಪತ್ರಿಕೆ ಯಶಸ್ವಿಯಾಗಿ ಪ್ರಕಟಣೆಯ ೧೫ನೆಯ ವರ್ಷಕ್ಕೆ ಕಾಲಿಟ್ಟಿದೆ. ಈ ಸಂದರ್ಭದಲ್ಲಿ ಪತ್ರಿಕೆಯ ಕುರಿತು ಓದುಗರ – ಲೇಖಕರ ಅಭಿಪ್ರಾಯ, ಸಲಹೆ, ಸೂಚನೆಗಳನ್ನು ಪಡೆದು ಇನ್ನೂ ಉತ್ತಮಗೊಳಿಸುವ ಆಶಯವನ್ನು 'ಹೊಸತು' ಸಂಪಾದಕ ಮಂಡಳಿ ಇಟ್ಟುಕೊಂಡಿದೆ.

'ಹೊಸತು' ಲೇಖಕರು, ಓದುಗರು, ಹಿತೈಷಿಗಳು ಈ ಸಂವಾದ ಕಾರ್ಯಕ್ರಮದಲ್ಲಿ ಭಾಗವಹಿಸಬೇಕಾಗಿ ವಿನಂತಿ.

*– ಸಂಪಾದಕ*

ವರದಕ್ಷಿಣೆ ಮತ್ತು ಹುಡುಗಿಗೆ ಮೂವತ್ತು ಸವರನ್ನುಗಳಷ್ಟು ಚಿನ್ನಾಭರಣವನ್ನೂ ನೀಡಿದರು. ಅಕ್ಕಪಕ್ಕದವರನ್ನು ಕರೆದು ಮದುವೆಯನ್ನೂ ಚೆನ್ನಾಗಿಯೇ ನೆರವೇರಿಸಿದರು. ಒಂದೆರಡು ವಾರ ತನ್ನ ಮನೆಯಲ್ಲಿ ಆಕೆಯನ್ನಿಟ್ಟುಕೊಂಡ ಆ ಗಂಡನು ಆಕೆಗೆ ನೀಡಿದ್ದ ಚಿನ್ನಾಭರಣಗಳನ್ನು ಕಸಿದುಕೊಂಡು ಆಕೆಯನ್ನು ಹಿಂದೆ ಕಳುಹಿಸಿ ಆಕೆಗೆ ತಲಾಖ್ ನೀಡಿದನು. ಆ ಯಜಮಾನರು ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿ ಆತನನ್ನು ಜೈಲಿಗಟ್ಟಿದರು. ಗಂಡಸರಿಂದ ಈ ರೀತಿ ವಂಚಿತರಾದ ಎಷ್ಟೋ ಬಡ ಹುಡುಗಿಯರಿದ್ದಾರೆ. ಒಂದೆರಡು ಮಕ್ಕಳಾದ ಮೇಲೆ ಆ ಮಕ್ಕಳನ್ನೂ ಆಕೆಯ ಮೇಲೆ ಹೊರಿಸಿ ತಲಾಖ್ ನೀಡಿಯೊ ನೀಡದೆಯೊ ಕಣ್ಮರೆಯಾಗುವವರಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಮುಸ್ಲಿಂ ಹೆಣ್ಣು ಮಕ್ಕಳ ಮದುವೆಗೆ ಹಣ ನೀಡಿ, ಅವರು ಮುಂದೆ ನೆಮ್ಮದಿಯಿಂದ ಇರುತ್ತಾರೆ ಎಂದು ತಿಳಿದುಕೊಳ್ಳುವುದು ನಮ್ಮ ಮೂರ್ಖತನವಾಗುತ್ತದೆ ಅಷ್ಟೆ. ಆ ಹೆಣ್ಣು ಮಗಳು ಇಂದಿಗೂ ತನ್ನ ಚಿನ್ನಾಭರಣಗಳನ್ನು ದೋಚಿ ತನ್ನನ್ನು ವಂಚಿಸಿದ ಆ ಗಂಡನಿಗೆ ಹಿಡಿ ಶಾಪ ಹಾಕುತ್ತಾ ಕಣ್ಣೀರು ಸುರಿಸುತ್ತಾಳೆ.

ಮುಂಬೈಯ ಕೆಂಪುದೀಪ ಪ್ರದೇಶದಲ್ಲಿರುವ ವೇಶ್ಯೆಯರಲ್ಲಿ ೭೫% ಮಹಿಳೆಯರು ಗಂಡನಿಂದ ತಲಾಖ್ ನೀಡಲ್ಪಟ್ಟ ಮುಸ್ಲಿಂ ಮಹಿಳೆಯರು ಎಂಬುದು ಏನನ್ನು ಸೂಚಿಸುತ್ತದೆ ?

ಸರಕಾರ ಈ 'ಶಾದಿ ಭಾಗ್ಯ' ಎಂಬುದನ್ನು 'ನೌಕರಿ ಭಾಗ್ಯ' ಎಂದು ಬದಲಾಯಿಸಿಕೊಂಡರೆ ಲೇಸು.

*ಮಂಗಳೂರು* ***ಡಾ॥ ಸಾರಾ ಅಬೂಬಕ್ಕರ್***

೧೯೯೩ – ೯೫ರ ಅವಧಿಯಲ್ಲಿ ನಾನು ನಾಡಿನ ಹಿರಿಯ ವೈಣಿಕರಾಗಿದ್ದ ಡಾ॥ ವಿ. ದೊರೆಸ್ವಾಮಿ ಅಯ್ಯಂಗಾರ್ ಅವರ ಆತ್ಮಕಥನವನ್ನು ನಿರೂಪಿಸಿದೆ. 'ಸುಧಾ' ವಾರಪತ್ರಿಕೆಯಲ್ಲಿ ಇದು ಧಾರಾವಾಹಿಯಾಗಿ ಪ್ರಕಟವಾಯಿತು. ೧೯೯೭ರಲ್ಲಿ ಮೈಸೂರಿನ ಗೀತಾ ಬುಕ್ ಹೌಸ್ 'ವೀಣೆಯ ನೆರಳಿನಲ್ಲಿ' ಎಂಬ ಶೀರ್ಷಿಕೆಯಲ್ಲಿ ಪುಸ್ತಕ ರೂಪದಲ್ಲಿ ಹೊರತಂದಿತು. ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ ಸೇರಿದಂತೆ ಕೆಲವು ಬಹುಮಾನಗಳು ಈ ಪುಸ್ತಕಕ್ಕೆ ಲಭಿಸಿವೆ. ಮುನ್ನುಡಿಯನ್ನು ಬರೆದಿರುವವರು ವರಕವಿ ಪುತಿನ ಹಾಗೂ ಡಾ॥ ಹಾ. ಮಾ. ನಾಯಕ್.

೨೦೧೦ರಲ್ಲಿ ಪ್ರೊ॥ ವಿ. ಅಮೃತಾ "ವಿಪಂಚಿ ವೈಭವ" ಅನ್ನುವ ಪುಸ್ತಕವನ್ನು ಪ್ರಕಟಿಸಿದ್ದಾರೆ. ಹಲವಾರು ವೈಣಿಕರ ಪರಿಚಯ ಇಲ್ಲಿದೆ. ಡಾ॥ ವಿ. ದೊರೆಸ್ವಾಮಿ ಅಯ್ಯಂಗಾರ್ ಮತ್ತು ಅವರ ತಂದೆ ಆಸ್ಥಾನ ವಿದ್ವಾನ್ ವೆಂಕಟೇಶ ಅಯ್ಯಂಗಾರ್ ಅವರ ಬಗ್ಗೆ ಬರೆಯುವಾಗ ಈ ಲೇಖಕಿ ನಮ್ಮ "ವೀಣೆಯ ನೆರಳಿನಲ್ಲಿ" ಪುಸ್ತಕದಿಂದ ಕೃತಿಚೌರ್ಯ ಮಾಡಿದ್ದಾರೆ. ನನ್ನ ಪುಸ್ತಕದ ಮೊದಲ ಪುಟದ ಮೊದಲ ವಾಕ್ಯದಿಂದ, ಪುಟ ೧೮೦ರವರೆಗೆ ಅಲ್ಲಲ್ಲಿ ಅಪಹರಿಸಿದ್ದಾರೆ. ನನ್ನ ಪುಸ್ತಕದ ಒಟ್ಟು ಪುಟಗಳು ೧೯೦. ಕೆಲವೊಂದು ಕಡೆ ವಿಚಕ್ಷಣತೆಯಿಂದ ಸಣ್ಣಪುಟ್ಟ ಬದಲಾವಣೆ ಮಾಡಿದ್ದಾರಾದರೂ ಬಹುಭಾಗ ಹಾಗೆಯೇ ಇದೆ. ಕೃತಿಚೌರ್ಯದಂಥ ಅಸಾಧು ಅಭ್ಯಾಸ ಮುಂದುವರಿಯುತ್ತಲೇ ಇರುವುದು ವಿಷಾದಕರ ಸಂಗತಿ.

*ಬೆಂಗಳೂರು* ***ಭಾರತೀ ಕಾಸರಗೋಡು***

*(ಪ್ರತಿಕ್ರಿಯೆಗಳಿಗೆ ಸ್ವಾಗತವಿದೆ – ಸಂ.)*

# ನಗುಮೊಗದ ಶ್ರೀ ಚೆನ್ನಪ್ಪ ಇನ್ನಿಲ್ಲ



ಕಳೆದ ಮೂರು ದಶಕಗಳಿಂದ ರಾಜ್ಯಾದ್ಯಂತ ನವಕರ್ನಾಟಕ ಪುಸ್ತಕ ಪ್ರದರ್ಶನಗಳನ್ನು ಏರ್ಪಡಿಸುತ್ತ ಲಕ್ಷಾಂತರ ಓದುಗರ ಪ್ರೀತಿಗೆ ಪಾತ್ರರಾಗಿದ್ದ ಶ್ರೀ ಜಿ. ಚೆನ್ನಪ್ಪ (೫೭) ಇನ್ನು ನೆನಪು ಮಾತ್ರ .

೨೦೧೪ ಜನವರಿ ೧೮ರ ಶನಿವಾರ ರಾತ್ರಿ ತಮ್ಮ ಸ್ವಗ್ರಾಮವಾದ ವರ್ಕಾಡಿಯಲ್ಲಿ (ಮಂಜೇಶ್ವರ, ಕಾಸರಗೋಡು ಜಿಲ್ಲೆ, ಕೇರಳ) ಸಂಭವಿಸಿದ ರಸ್ತೆ ಅಪಘಾತದಲ್ಲಿ ಅವರು ದುರ್ಮರಣಕ್ಕೆ ಈಡಾಗಿರುವುದು ಅತ್ಯಂತ ಖೇದಕರ. ಮೃತರು ತಾಯಿ ಸೀತಾ, ಪತ್ನಿ ಜಲಜಾಕ್ಷಿ, ಪುತ್ರ ರೋಹನ್, ಬಂಧು–ಬಳಗ ಮತ್ತು ಹಲವಾರು ಆತ್ಮೀಯ ಸ್ನೇಹಿತರನ್ನು ಅಗಲಿದ್ದಾರೆ. ಚೆನ್ನಪ್ಪ ಅವರ ಅಕಾಲಿಕ ನಿಧನಕ್ಕೆ ನವಕರ್ನಾಟಕ ಪ್ರಕಾಶನ ಮತ್ತು 'ಹೊಸತು' ಬಳಗ ತೀವ್ರ ಸಂತಾಪವನ್ನು ವ್ಯಕ್ತಪಡಿಸಿ ಅವರ ಕುಟುಂಬದ ದುಃಖದೊಂದಿಗೆ ಭಾಗಿಯಾಗುತ್ತದೆ.

ಮಂಗಳೂರಿನಲ್ಲಿ ಪದವಿ ಶಿಕ್ಷಣ ಪಡೆದ ಚೆನ್ನಪ್ಪನವರು ಉದ್ಯೋಗವನ್ನರಸಿ ನೆಲೆಕಂಡದ್ದು 'ನವಕರ್ನಾಟಕ'ದಲ್ಲಿ. ೧೯೮೪ರಲ್ಲಿ ಆಗಿನ 'ಸೋವಿಯತ್ ಪುಸ್ತಕ ಪ್ರದರ್ಶನ' ತಂಡವೊಂದರಲ್ಲಿ ಸಹಾಯಕರಾಗಿ ಸೇರಿದ ಅವರು ಅತ್ಯಂತ ಶ್ರದ್ಧೆಯಿಂದ ಕಾರ್ಯನಿರ್ವಹಿಸಿ ರಾಜ್ಯಾದ್ಯಂತ ಪ್ರವಾಸ ಕೈಗೊಂಡು, ಹೊಸ ತಂಡಗಳನ್ನು ರಚಿಸಿ, ನೂರಾರು ನಿರುದ್ಯೋಗಿ ಯುವಕರಿಗೆ ಪುಸ್ತಕ ಮಾರಾಟದಲ್ಲಿ ತರಬೇತಿ ಮತ್ತು ಉದ್ಯೋಗಾವಕಾಶಗಳನ್ನು ನೀಡಿದರು. ಕ್ರಮೇಣ ಸೋವಿಯತ್ ಪುಸ್ತಕಗಳ ಆಮದು ಸ್ಥಗಿತಗೊಂಡಮೇಲೆ 'ನವಕರ್ನಾಟಕ ಪುಸ್ತಕ ಪ್ರದರ್ಶನ'ಗಳನ್ನು ಏರ್ಪಡಿಸುತ್ತ ಪ್ರಗತಿಪರ ಮತ್ತು ವೈಚಾರಿಕ ಸಾಹಿತ್ಯವನ್ನು ನಾಡಿನ ಮೂಲೆಮೂಲೆಗೆ ಕೊಂಡೊಯ್ದು ಲಕ್ಷಾಂತರ ಓದುಗರ ಮತ್ತು ಅಭಿಮಾನಿಗಳ ಪ್ರೀತಿಗೆ ಪಾತ್ರರಾದರು. ಅಂತೆಯೇ ಸಾವಿರಾರು ಓದುಗರನ್ನು 'ಹೊಸತು' ಚಂದಾದಾರರನ್ನಾಗಿಯೂ ಮಾಡಿದರು.

'ಪುಸ್ತಕಗಳ ಮೂಲಕ ಮನುಕುಲದ ಸೇವೆ' ಎಂಬ ನವಕರ್ನಾಟಕ ಪ್ರಕಾಶನದ ಧ್ಯೇಯವಾಕ್ಯಕ್ಕೆ ತಕ್ಕಂತೆ ನಿರಂತರವಾಗಿ ಮೂವತ್ತು ವರ್ಷಗಳ ಕಾಲ ಓದುಗರ ಸೇವೆ ಮಾಡುತ್ತ ಬಂದವರು ಚೆನ್ನಪ್ಪನವರು. ನವಕರ್ನಾಟಕದ ಈ ಮಟ್ಟದ ಸಾಧನೆ ಮತ್ತು ಜನಪ್ರಿಯತೆಯ ಹಿಂದೆ ಅವರ ಪರಿಶ್ರಮವೂ ಬಹಳಷ್ಟಿದೆ.

ಪುಸ್ತಕದ ಕಾಯಕಕ್ಕಾಗಿಯೇ ತನ್ನನ್ನು ಸಮರ್ಪಿಸಿಕೊಂಡ ಶ್ರೀ ಚೆನ್ನಪ್ಪ ಅವರದು ದಣಿವರಿಯದ ಜೀವ. ಎಂದೂ ಬತ್ತದ ಉತ್ಸಾಹ ಅವರದಾಗಿತ್ತು. ಕೆಲಸದ ಒತ್ತಡ ಎಷ್ಟೇ ಇದ್ದರೂ ಸದಾ ಹಸನ್ಮುಖಿ. ಇನ್ನು ಆ ನಗುಮೊಗ ನೆನಪು ಮಾತ್ರ.

# ಕಸಾಪ ಸಮ್ಮೇಳನದಲ್ಲಿ ನಾ. ಡಿಸೋಜ ಅವರ ಸಂದೇಶದ ಸಾರಾಂಶ




ಎಲ್ಲ ಅಭಿಮಾನಿ ಕನ್ನಡಿಗರೇ,

ಕೊಡಗನ್ನ ಕರ್ನಾಟಕದ ಸ್ವಿಜರ್‌ಲ್ಯಾಂಡ್ ಎಂದು ಕರೆಯುತ್ತಾರೆ. ನಾನು ನನ್ನ ನಾಡನ್ನ ಹೊಗಳಲಿಕ್ಕೆ ಬೇರೊಂದು ದೇಶವನ್ನ ಎರವಲು ಪಡೆಯಲು ಹೋಗುವುದಿಲ್ಲ. ಕೊಡಗು ಕೊಡಗೆ. ಸಮುದ್ರಕ್ಕೆ ಸಮುದ್ರವೇ ಉಪಮೆಯಂತೆ. ಹಾಗೆಯೇ ಕೊಡಗಿಗೆ ಕೊಡಗೇ ಉಪಮೆ.

**ನನ್ನ ಬಗ್ಗೆ ಎರಡು ಮಾತು**

ನನ್ನ ಮನೆ ಮಾತು ಕೊಂಕಣಿ. ಗೋವೆಯಲ್ಲಿ ಧಾರ್ಮಿಕ ವಿಚಾರಣೆ ಅನ್ನುವಂತಹ ತುಸು ಕ್ರೂರವಾದ ಒಂದು ಪ್ರಕ್ರಿಯೆ ನಡೆದಾಗ ಅದನ್ನ ಎದುರಿಸಲಾರದೆ ಕೊಂಕಣಿ ಜನ ಕರ್ನಾಟಕಕ್ಕೆ ಓಡಿಬಂದಾಗ ಇಲ್ಲಿಯ ಇಕ್ಕೇರಿ ದೊರೆಗಳು ನಮಗೆ ಆಶ್ರಯ ನೀಡಿದರು. ಅಲ್ಲಿಂದ ವಿವಿಧ ವೃತ್ತಿ ಧರ್ಮಗಳನ್ನ ನಂಬಿದ ಕೊಂಕಣಿ ಜನ ಇಲ್ಲಿ ಇಲ್ಲಿಯವರೇ ಆಗಿ ಬದುಕಿದ್ದಾರೆ. ಅವರ ಭಾಷೆ, ಸಂಸ್ಕೃತಿ, ಜೀವನ ವಿಧಾನ ತುಸು ಬೇರೆ. ಆದರೂ ಕನ್ನಡನಾಡಿನವರೇ ಆಗಿ ಇಂದು ಉಳಿದಿದ್ದಾರೆ. ಕನ್ನಡದ ಪ್ರಖ್ಯಾತ ಚುಟುಕು ಕವಿ ದಿನಕರ ದೇಸಾಯಿ ಹೇಳಿದ್ದಾರೆ :

*ಕನ್ನಡದ ಜೊತೆಗೆ ಕೊಂಕಣಿ ಮಾತನಾಡಿ*
*ಒಂದುಗೂಡಿದವು ಎರಡು ಜೀವನಾಡಿ*
*ಎರಡು ಪಕಳೆಯ ಹೂವು ಹಣ್ಣಾಗಿ ಕಾಯಿ*
*ಕಾಯಿ ಹಣ್ಣಾದೊಡನೆ ಜೀವನ ಮಿಠಾಯಿ.*

ಹೀಗೆ ಕೊಂಕಣಿಯ ಜೊತೆಗೆ ಕನ್ನಡ ಮಾತನಾಡಿ ತಮ್ಮ ಜೀವನವನ್ನ ಮಿಠಾಯಿ ಮಾಡಿಕೊಂಡವರು ಬಹಳ ಜನ ಇದ್ದಾರೆ. ಗೋವಿಂದ ಪೈಗಳು, ಗೌರೀಶ ಕಾಯ್ಕಿಣಿ, ಗೋಪಾಲಕೃಷ್ಣ ಪೈ, ಸಂತೋಷ ಕುಮಾರ ಗುಲ್ವಾಡಿ, ಯಶವಂತ ಚಿತ್ತಾಲ, ಜಯಂತ ಕಾಯ್ಕಿಣಿ, ಇನ್ನೂ ಹಲವರು ಕೊಂಕಣಿ ಮನೋಭಾವದ ಕನ್ನಡಿಗರು. ಕನ್ನಡದ ಸೇವೆ ಮಾಡಿದವರು.

ನಾನು ಚಿಕ್ಕ ವಯಸ್ಸಿನಲ್ಲಿ ಕನ್ನಡದ ಮೋಹಕ್ಕೆ ಒಳಗಾದೆ. ಅಂದು ನಾನು ಬೆಳೆಸಿಕೊಂಡ ಈ ಮೋಹ ಇಂದು ನನ್ನನ್ನ ಇಲ್ಲಿಗೆ ಕರೆತಂದು ನಿಲ್ಲಿಸಿದೆ. ಆದರೆ ಇದು ನಾನು ಒಂಟಿಯಾಗಿ ಮಾಡಿದ ಪಯಣವಲ್ಲ. ನನ್ನ ಬರವಣಿಗೆಗೆ ನನ್ನ ಮಿತ್ರರು, ಪತ್ರಿಕಾ ಸ್ನೇಹಿತರು ಸಾಥ್ ನೀಡಿದ್ದಾರೆ.

**ಸಾಹಿತ್ಯ ಮತ್ತು ಕಲೆ**

ನಮ್ಮ ಜನ ಯಾವತ್ತೂ ಸಾಹಿತ್ಯಕ್ಕೆ ಹೆಚ್ಚಿನ ಸ್ಥಾನಮಾನವನ್ನ ಕೊಡುತ್ತ ಬಂದಿದ್ದಾರೆ. ಈ ಬದುಕು ನಮಗೆ ಬಹಳ ಪ್ರಿಯವಾದದ್ದು. ನಮ್ಮಲ್ಲಿ ಬದುಕನ್ನ ಧಿಕ್ಕರಿಸಿ ಸನ್ಯಾಸಿಗಳಾಗುವವರು ಕೆಲವರೇ ಆದರೆ ಉಳಿದವರೆಲ್ಲ ಪರಿಸ್ಥಿತಿ ಏನೇ ಬರಲಿ ಬದುಕಬೇಕು ಅನ್ನುವವರು. ಆತ್ಮಹತ್ಯೆಗೆ ನಮ್ಮಲ್ಲಿ ಗೌರವ ಇಲ್ಲ. ಇರಬೇಕು ಇದ್ದು ಜಯಿಸಬೇಕು ಅನ್ನುವುದು ನಮ್ಮ ಧ್ಯೇಯ. 'ಮಾನವ ಜನ್ಮ ದೊಡ್ಡದು ಇದ ಹಾನಿ ಮಾಡಿಕೊಳ್ಳಬೇಡಿ ಹುಚ್ಚಪ್ಪಗಳಿರಾ' ಎಂದು ನಮ್ಮ ದಾಸರು ಹೇಳಿದ್ದಾರೆ. ಇಂತಹಾ ಬದುಕಿನ ಬಗ್ಗೆ ನಮಗೆ ನೇರವಾಗಿ ತಿಳಿಸಿ ಕೊಡುವುದು ಸಾಹಿತ್ಯ.

ಕತೆ – ಕಾದಂಬರಿ – ಕಾವ್ಯ – ನಾಟಕ ಬೇರೆ ಯಾವುದೇ ಸಾಹಿತ್ಯ ಪ್ರಕಾರವೇ ಇರಲಿ ಅದು ಬದುಕನ್ನ ಕುರಿತೇ ಇರುತ್ತದೆ. ನಾವು ಬದುಕುವ ಧಾವಂತದಲ್ಲಿ ಬದುಕುತ್ತ ಹೋಗಿಬಿಡುತ್ತೇವೆ. ನಾವೇನು ತಪ್ಪು ಮಾಡಿದ್ದೇವೆ ಅನ್ನುವುದು ನಮಗೆ ತಿಳಿಯದೇ ಹೋಗಿಬಿಡುತ್ತದೆ. ಅಧಿಕಾರವನ್ನ, ಹಣವನ್ನ, ಹೆಣ್ಣನ್ನ ಭೋಗಿಸುವಾಗ ನಮ್ಮ ವರ್ತನೆ ಏನಾಗಿತ್ತು ಅನ್ನುವುದು ನಮಗೆ ತಿಳಿಯುವುದಿಲ್ಲ. ಇಂತಹ ಸಂದರ್ಭದಲ್ಲಿ ನಮ್ಮ ಬದುಕಿನ ಪುನರವಲೋಕನ ಮಾಡಲು ಸಾಹಿತ್ಯ ನಮಗೆ ನೆರವು ನೀಡುತ್ತದೆ.

ಮಾಹಿತಿ ತಂತ್ರಜ್ಞಾನದ ಇಂದಿನ ದಿನಗಳಲ್ಲಿ ನಾವೆಲ್ಲ ಜ್ಞಾನವಂತರಾಗುತ್ತಿದ್ದೇವೆ. ಆದರೆ ನಾವು ಯಾರೂ ಕೂಡ ವಿವೇಕಶಾಲಿಗಳಾಗಿ ಪರಿವರ್ತನೆ ಹೊಂದುತ್ತಿಲ್ಲ. ಇನ್ನು ಈ ಯಂತ್ರದ ದಾಳಿಗೆ ಒಳಗಾಗಿ ನಮ್ಮ ಭಾಷೆ ಕೂಡ ನಶಿಸಿಹೋಗುತ್ತಿದೆಯೆ ? ನಾವು ಈ ವಿಚಾರ ಮಾಡಬೇಕು.

ವೈವಿಧ್ಯಮಯ ಕನ್ನಡವನ್ನ ಇರಿಸಿಕೊಂಡು ನಾವು ಏನೂ ಮಾಡಬಹುದು. ಆದರೆ ನಮ್ಮ ಜನ ಕನ್ನಡದಲ್ಲಿ ಶಬ್ದಗಳಿಲ್ಲ, ವಿಜ್ಞಾನ, ವೈದ್ಯಕೀಯ ಇತ್ಯಾದಿ ವಿಷಯಗಳನ್ನ ಕನ್ನಡದಲ್ಲಿ ಹೇಳಲಿಕ್ಕೆ ಸಾಧ್ಯವಿಲ್ಲ ಅನ್ನುವ ನೆಪಗಳನ್ನ ಹೇಳುತ್ತಿರುವುದು ನಾಚಿಕೆಗೇಡು. ನಮ್ಮ ನಾಡಿನ ಕೃಷಿಕರು, ಕುಶಲಕರ್ಮಿಗಳು, ವಿವಿಧ ಕೆಲಸ ಕಾರ್ಯಗಳನ್ನ ಮಾಡುವವರು ತಾವು ದಿನ ನಿತ್ಯ ಬಳಸುವ ವಸ್ತುಗಳಿಗೆ ಸುಂದರ ಹೆಸರುಗಳನ್ನ ಇರಿಸಿದ್ದಾರೆ, ತಮ್ಮ ಸುತ್ತ ಇರುವ ಗಿಡ ಮರ ಬಳ್ಳಿ ಹಕ್ಕಿ ಮೀನುಗಳಿಗೆ ಹೆಸರನ್ನ ಇರಿಸಿದ್ದಾರೆ. ಆದರೆ ಒಂದು ಮೋರಿ ಕಟ್ಟಲು ನಮ್ಮ ಇಂಜಿನಿಯರುಗಳಿಗೆ ವರ್ಡ್ಸ್ ಇಲ್ಲ ಅಂದರೆ ಅದು ಭಾಷೆಯ ಅಸಾಮರ್ಥ್ಯ ಅಲ್ಲ. ಇದು ಅವರ ಅಸಾಮರ್ಥ್ಯ.

ಸರಕಾರ ಕನ್ನಡಕ್ಕಾಗಿ ಏನೂ ಮಾಡುತ್ತಿಲ್ಲ ಅನ್ನುವುದು ನಮ್ಮ ಜನರ ಪುಕಾರು. ಸರಕಾರ ಆ ಕಡೆ ಇರಲಿ, ನಾವು ಏನು ಮಾಡಿದ್ದೇವೆ ? ನಮ್ಮ ಮಕ್ಕಳು ನಾಯಿಯನ್ನ ಡಾಗಿ ಅಂದಾಗ, ಬೆಕ್ಕನ್ನ ಕ್ಯಾಟಿ ಅಂದಾಗ, ಚಂದ್ರನನ್ನ ಮೂನ್ ಅಂಕಲ್ ಎಂದಾಗ ತೆಂಗಿನ ಮರ ಹತ್ತಿ ಕೂರುವ ನಮ್ಮ ನಮ್ಮ ಪೋಷಕರು ಕನ್ನಡದ ಇಂದಿನ ಸ್ಥಿತಿಗೆ ಮೂಲ ಕಾರಣ. ಆಂಗ್ಲ ಮಾಧ್ಯಮ ಶಾಲೆಗಳು ನಮ್ಮ ಜನರಿಗೆ ರೋಮಾಂಚನವನ್ನ ಉಂಟುಮಾಡುತ್ತವೆ. ಈ ಶಾಲೆಗಳ ಶಿಕ್ಷಣದ ಬಗ್ಗೆ ನನ್ನ ತಕರಾರಿದೆ. ಹತ್ತು ಕೆಜಿ ಹೆಗಲ ಚೀಲ, ಕೈಯಲ್ಲಿ ನೀರಿನ ಬಾಟಲಿ, ಊಟದ ಡಬ್ಬಿ, ಕೊಡೆ, ಇತ್ಯಾದಿ ಹೊತ್ತು ಶಾಲೆಗೆ ಹೋಗುವ ಮಕ್ಕಳಿಗೂ ಗಡಿಯಲ್ಲಿ ಗಡಿಕಾಯುವ ನಮ್ಮ ಸೈನಿಕರಿಗೂ ನನಗೆ ವ್ಯತ್ಯಾಸ ಕಾಣುವುದಿಲ್ಲ. ಅಲ್ಲಿಯ ಹೋಂ ವರ್ಕ್ ಅನ್ನುವ ಶಿಕ್ಷೆ, ಶಿಸ್ತಿನ ಹೆಸರಿನ ಬಿಗಿ ಶಿಕ್ಷಣ, ಇದು ಮಕ್ಕಳನ್ನ ಏನು ಮಾಡಬಹುದು ನಾವು ವಿಚಾರ ಮಾಡಬೇಕು.

ಎಲ್ಲ ರಾಜ್ಯಗಳ ಸರಕಾರಗಳೂ ತಮ್ಮ ರಾಜ್ಯದ ಭಾಷೆಯ ಹಿತವನ್ನ ಕಾಪಾಡುತ್ತ ಬಂದಿವೆ. ಆದರೆ ಕರ್ನಾಟಕದ ಸರಕಾರ ಕನ್ನಡ ಸರಕಾರವಾಗಿದೆಯೇ ? ಕೆಲ ವರ್ಷಗಳ ಹಿಂದೆ ತಮಿಳುನಾಡಿನ ಮುಖ್ಯಮಂತ್ರಿ ಬೆಂಗಳೂರಿನ ವಿಧಾನಸೌಧಕ್ಕೆ ಬಂದ. ಆತ ಅಲ್ಲಿ ಕುಳಿತು ತಮಿಳಿನಲ್ಲಿ ಮಾತನಾಡಿದ. ನಮ್ಮ ಮುಖ್ಯಮಂತ್ರಿ ಆತನಿಗೆ ಇಂಗ್ಲಿಷಿನಲ್ಲಿ ಉತ್ತರಿಸಿದರು. ಇದು ಕನ್ನಡ ಸರಕಾರದ ಲಕ್ಷಣ ಖಂಡಿತ ಅಲ್ಲ.

ಕನ್ನಡವನ್ನ ಅನುಷ್ಠಾನಕ್ಕೆ ತರುವಲ್ಲಿ ನಮ್ಮ ಮಂತ್ರಿಗಳು ಮುಂದಿದ್ದಾರೆ. ಆದರೆ ಇವರಿಗೆ

ಅಡ್ಡಿಯಾಗಿ ನಿಂತಿರುವವರು ವಿಧಾನಸೌಧ ಮತ್ತಿತರ ಕಡೆಗಳಲ್ಲಿ ಕುಳಿತಿರುವ ಆಂಗ್ಲ ಮೋಹೀ ಅಧಿಕಾರಿಗಳು ಅನ್ನುವ ಮಾತಿದೆ. ಇವರು ಕನ್ನಡದ ಪರವಾಗಿ ನಿಂತರೆ ಕನ್ನಡ ಖಂಡಿತ ಉದ್ಧಾರವಾಗುತ್ತದೆ.

ಕನ್ನಡ ಭಾಷೆಗೆ, ಕರ್ನಾಟಕಕ್ಕೆ ಎಲ್ಲೇ ಅವಮಾನವಾಗಲಿ, ನಷ್ಟವಾಗಲಿ, ಅದರ ವಿರುದ್ಧ ಮೊದಲು ಸರಕಾರ, ನಂತರ ಜನ ಸಿಡಿದು ನಿಲ್ಲಬೇಕು. ಮೊನ್ನೆ ಬೆಳಗಾಂನಲ್ಲಿ ಒಂದು ಮಾತು ಕೇಳಿಬಂತು. ನಾಲ್ಕು ಜನ ಇದ್ದರೆ ಕರ್ನಾಟಕದ ಹೆಣ ಹೊರುತ್ತೇವೆ, ಐದು ಜನ ಇದ್ದರೆ ಕರ್ನಾಟಕದ ತಿಥಿ ಮಾಡುತ್ತೇವೆ ಅನ್ನುವ ಮಾತದು. ಆದರೆ ಈ ಬಗ್ಗೆ, ಸರಕಾರ, ನಮ್ಮ ಜನಪ್ರತಿನಿಧಿಗಳು, ಕೊನೆಗೆ ಜನ ಕೂಡ ಪ್ರತಿಭಟಿಸಲಿಲ್ಲ. ಕನ್ನಡಕ್ಕೆ ಕರ್ನಾಟಕಕ್ಕೆ ಇಂತಹಾ ದುಃಸ್ಥಿತಿ ಬರಬೇಕಿತ್ತೆ! ನಾನು ಕೇಳುತ್ತಿದ್ದೇನೆ. ಕವಿ, ಲೇಖಕ ಎಳೆ ಬಿಸಿಲು, ತಂಪು ಬೆಳದಿಂಗಳು, ಜುಳುಜುಳು ಹರಿಯುವ ನದಿಯ ನೀರು ಇವುಗಳ ಕುರಿತೇ ಬರೆಯಬೇಕು ಅನ್ನುವ ತತ್ವಕ್ಕೆ ವಿರೋಧಿಯಾದವನು ನಾನು.

**ಪುಡಾರಿ**

ತ್ಯಾಗ, ನಿಸ್ವಾರ್ಥ ಮನೋಭಾವ, ದೇಶದ ಬಗ್ಗೆ ನಿಜವಾದ ಕಳಕಳಿ, ದೇಶದ ಪ್ರಗತಿಯ ಕುರಿತಂತೆ ಆಸಕ್ತಿ ಇದೆಲ್ಲ ಅಂದಿನ ವಿಶೇಷತೆ ಆಗಿದ್ದರೆ ಇಂದು ಅದಕ್ಕೆ ತದ್ವಿರುದ್ಧವಾದ ಚಿತ್ರಣವನ್ನ ನಾವು ನೋಡುತ್ತಿದ್ದೇವೆ. ನಾನು ಕೆಲವರ್ಷಗಳ ಹಿಂದೆ ಸೊಲ್ಲಾಪುರಕ್ಕೆ ಹೋಗಿದ್ದೆ. ಅಲ್ಲೊಂದು ಪತ್ರಿಕಾ ಕಛೇರಿ. ಪುಡಾರಿ ಅನ್ನುವ ಒಂದು ದಿನಪತ್ರಿಕೆ ಅಲ್ಲಿಂದ ಪ್ರಕಟವಾಗುತ್ತಿತ್ತು. ಸಂಪಾದಕರಲ್ಲಿ ಮಾತನಾಡುತ್ತ ನಾನು, "ಪುಡಾರಿ ಅನ್ನುವ ಶಬ್ದಕ್ಕೆ ನಮ್ಮಲ್ಲಿ ಒಳ್ಳೆಯ ಅರ್ಥವಿಲ್ಲ, ನಮ್ಮಲ್ಲಿ ಚಿಲ್ಲರೆ ರಾಜಕಾರಣ ಮಾಡುವವರನ್ನ, ದೇಶಸೇವೆಯ ಸೋಗು ಹಾಕುವವರನ್ನ, ರಾಜಕೀಯ ಧೂರ್ತರನ್ನ ನಾವು ಪುಡಾರಿ ಎಂದು ಕರೆಯುತ್ತೇವೆ, ನೀವು ಇಂತಹ ಹೆಸರನ್ನ ಇಟ್ಟಿದ್ದೀರಲ್ಲ ?" ಎಂದು ಕೇಳಿದೆ. ಅದಕ್ಕೆ ಅವರು "ಇಲ್ಲಿ ಆ ಅರ್ಥದಲ್ಲಿ ಈ ಶಬ್ದ ಬಳಕೆಯಲ್ಲಿ ಇಲ್ಲ, ಇಲ್ಲಿ ಪುಡಾರಿ ಅಂದರೆ ನಿಜವಾದ ದೇಶಭಕ್ತ, ಎಲ್ಲರೂ ಹೀಗಿರಬೇಕು ಅನ್ನುವ ಕಾರಣಕ್ಕೆ ನಾವು ನಮ್ಮ ಪತ್ರಿಕೆಗೆ ಆ ಹೆಸರನ್ನ ಇರಿಸಿದ್ದೇವೆ" ಎಂದರು. ಜೊತೆಗೆ, "ಇಂದಿನ ಪರಿಸ್ಥಿತಿ ನೋಡಿದರೆ ನಾಳೆ ನಾವೂ ಕೂಡ ನೀವು ಹೇಳುವ ಅರ್ಥದಲ್ಲಿ ಈ ಶಬ್ದವನ್ನ ನೋಡಬೇಕಾಗುತ್ತದೇನೋ" ಅನ್ನುವ ಅಭಿಪ್ರಾಯ ವ್ಯಕ್ತಪಡಿಸಿದರು. ಆಗ ನನಗೆ ಕನ್ನಡದ ಜನ ಬಹಳ ಮುಂಚೆಯೇ ನಮ್ಮ ರಾಜಕಾರಣದ ದುರವಸ್ಥೆಯನ್ನ ಗುರುತಿಸಿಬಿಟ್ಟರಲ್ಲ ಅನಿಸಿ ಸಂತೋಷವಾಯಿತು. ಅಂದು ನನಗೆ ನಮ್ಮ ಭಾಷೆಯ ಬಗ್ಗೆ ಹೆಮ್ಮೆ ಅನಿಸಿತು.

**ರೈತ**

ಹೌದು, ನಾನು ರೈತರ ಹೆಸರನ್ನ ತೆಗೆದೆ. ಕುವೆಂಪು ಅವರ ನೇಗಿಲ ಯೋಗಿ ಕವಿತೆಯ ಮೂಲಕ ರೈತನ ಎಲ್ಲ ಸ್ಥಾನಮಾನ ಬವಣೆಗಳನ್ನ ಬಣ್ಣಿಸುತ್ತಾರೆ. ರೈತ ದೇಶದ ಬೆನ್ನೆಲುಬು, ಅವನನ್ನ ನಾವೆಲ್ಲ ಚೆನ್ನಾಗಿ ನೋಡಿಕೊಳ್ಳಬೇಕು ಅನ್ನುವ ಆಶಯ ಅಲ್ಲಿದೆ. ಆದರೆ ಇವತ್ತು ಈ ರೈತನನ್ನ ನಾವು ಯಾವ ಪರಿಸ್ಥಿತಿಗೆ ತಂದು ನಿಲ್ಲಿಸಿದ್ದೇವೆ ಯೋಚಿಸೋಣ. ಅವನ ದುಡಿಮೆಗೆ ಬೆಲೆ ಇಲ್ಲ. ಅವನ ನೆಲ ಅವನ ಕೈಯಲ್ಲಿ ಉಳಿದಿಲ್ಲ. ಅವನಿಗೆ ಗೌರವವಿಲ್ಲ. ರೈತನಿಗೆ ಹಣದ ಆಸೆ ತೋರಿಸಿ ಅವನ ಜಮೀನಿಗೆ ಲಕ್ಷಾಂತರ ರೂಪಾಯಿ ಬೆಲೆ ಕಟ್ಟಿ ಅದನ್ನ ಆಧುನಿಕ ವ್ಯವಹಾರಗಳಿಗಾಗಿ ಕೊಂಡು ಅವನನ್ನ ಅದೇ ನೆಲದಲ್ಲಿ ತಲೆ ಎತ್ತುತ್ತಿರುವ ಕಾರ್ಖಾನೆಯ ಕಾವಲುಗಾರನನ್ನಾಗಿ ಮಾಡುವ ಹುನ್ನಾರ ನಡೆದಿದೆ. ನೆಲ ಅನ್ನುವುದು ಒಂದು ಗಟ್ಟಿಸಂಪತ್ತು. ನೆಲ ಇದೆ ಅನ್ನುವುದೇ ರೈತನಿಗೆ ಒಂದು ಭರವಸೆ, ಬೆಂಗಾವಲು, ವರ, ಮುಂದಿನ ಬದುಕಿಗೆ ಆಧಾರ, ಇದನ್ನೇ ಅವನಿಂದ ನಾವು ಕಿತ್ತುಕೊಳ್ಳುತ್ತಿದ್ದೇವೆ. ವ್ಯವಸಾಯವೇ ಬದುಕು ಅನ್ನುವ ನಂಬಿಕೆ ಇದ್ದ ಈ ನಾಡಿನಲ್ಲಿ ವ್ಯವಸಾಯವನ್ನ ದಿವಾಳಿಕೋರತನ ಅನ್ನುವಂತೆ ಪ್ರತಿಬಿಂಬಿಸಲಾಗುತ್ತಿದೆ.

೧೯೭೪ರಲ್ಲಿ ಭೂಸುಧಾರಣಾ ಕಾನೂನು ಬಂದಿತು. ಗೇಣಿ ಪದ್ಧತಿ ಅಮಾನುಷವಾದದ್ದು ಎಂದರು. ಉಳುವವನೇ ಹೊಲದೊಡೆಯನಾದ. ಆದರೆ ಈ ಭೂವಿದ್ಯಾದಾನದ ರೈತ ಇಂದಿಗೂ ಗೇಣಿದಾರ. ೧೦,೦೦೦ ಎಕರೆ ಸರಕಾರೀ ಜಮೀನಿನಲ್ಲಿ ಇಂದು ೩೦,೦೦೦ ರೈತ ಕುಟುಂಬಗಳು ಗೇಣಿದಾರರಾಗಿ ಬದುಕುತ್ತಿವೆ. ಪುರಾತನವಾದ ಅನಿಷ್ಟ ಗೇಣಿಪದ್ಧತಿಯನ್ನ ನಿರ್ಮೂಲನೆ ಮಾಡಿದ ದೇಶ ಈ ಪದ್ಧತಿಯನ್ನ ಇನ್ನೂ ಕಾಪಾಡಿಕೊಂಡು ಬಂದಿದೆ ಅನ್ನುವುದು ಎಂತಹಾ ವಿಪರ್ಯಾಸ ಅಲ್ಲವೆ ? ಈ ನಾಡಿನ ರೈತ ಅವನು ಕಬ್ಬು ಬೆಳೆಗಾರ ಇರಬಹುದು, ಭತ್ತ, ಅಡಿಕೆ, ರಾಗಿ, ಜೋಳ, ಏನೇ ಬೆಳೆಯುವವ ಇರಬಹುದು, ಅವರೆಲ್ಲ ಸಂತೃಪ್ತಿಯಿಂದಂತೂ



ಇಲ್ಲ. ಅವರ ನಿಟ್ಟುಸಿರು, ಸರಕಾರದ ಕಣ್ಣಿಗೆ ಬೀಳದೆ ? ಸಭೆ ಸಮಾರಂಭಗಳಲ್ಲಿ ರೈತಗೀತೆ ಹಾಡಿದರೆ ಸಾಕೆ ?

**ಪರಿಸರ**

* ನನಗೆ ಬಹಳ ಪ್ರಿಯವಾದದ್ದು ಈ ಪರಿಸರ. ಈ ಪ್ರೀತಿಗೆ ಕಾರಣ ಪರಿಸರದ ಮೇಲೆ ನನಗೆ ಇರುವ ಗೌರವ. ನೆಲದ ಮೇಲೆ ಕೋಟ್ಯಾನುಕೋಟಿ ಜೀವ ಜಂತುಗಳು ಇವೆ. ಅವುಗಳಲ್ಲಿ ಮಾನವ ಜೀವಿ ಕೂಡ ಒಬ್ಬ. ಪರಿಸರದಲ್ಲಿ ಅವನು ಶ್ರೇಷ್ಠ ಖಂಡಿತಾ ಅಲ್ಲ. ಇದ್ದುದರಲ್ಲಿ ಆತ ಬುದ್ಧಿವಂತ. ಬುದ್ಧಿವಂತ ಅಂದ ಕೂಡಲೇ ಇಡೀ ಪರಿಸರವನ್ನ ಆಳುವ, ಬದಲಾಯಿಸುವ, ಬೇಕಾಬಿಟ್ಟಿಯಾಗಿ ಬಳಸಿಕೊಳ್ಳುವ ಅಧಿಕಾರವನ್ನ ಈ ಮನುಷ್ಯನಿಗೆ ಯಾರೂ ಕೊಟ್ಟಿಲ್ಲ. ಆದರೆ ತನ್ನ ಕುತಂತ್ರದಿಂದ ಅವನು ಇದನ್ನ ಸಾಧಿಸಿದ್ದಾನೆ. ಹೀಗೆ ಇಲ್ಲದ ಸಾಧನೆಗಳನ್ನ ಮಾಡಿ ತನಗೆ ತಾನೇ ಅಪಾಯ ತಂದುಕೊಳ್ಳುತ್ತಿದ್ದಾನೆ. ನಾವು ಪರಿಸರದ ನಿಯಮಗಳನ್ನ ಮೀರಿದ ದಿನ ಅದು ನಮ್ಮ ಮೇಲೆ ಸೇಡು ತೀರಿಸಿಕೊಳ್ಳುತ್ತದೆ.

ನಾವು ಎಷ್ಟು ಅಣೆಕಟ್ಟುಗಳನ್ನ, ನಾಲೆಗಳನ್ನ ನಿರ್ಮಿಸಬೇಕು ? ಕಾಡುಮೇಡು ಎಂದು ನಷ್ಟವಾಗುವ ಪರಿಸರ ಎಷ್ಟು ? ತೊಂದರೆಗೆ ಒಳಗಾಗುವ ಜನರ ಬವಣೆಯ ಬಗ್ಗೆ ಯೋಚಿಸಬೇಡವೇ ? ಹೊಸದಾಗಿ ತಲೆದೋರುವ ಸಮಸ್ಯೆಗಳ ಅರಿವು ನಮಗಿದೆಯೇ ?

ನಮ್ಮ ದೇಶವನ್ನ ಹೊಸದಾಗಿ ನಿರ್ಮಿಸುವ ಸಂದರ್ಭದಲ್ಲಿ ಜವಾಹರಲಾಲ್ ನೆಹರು ಅವರು ಅಣೆಕಟ್ಟುಗಳನ್ನ ದೇಶದ ದೇವಾಲಯಗಳು ಅಂತ ಕರೆದರು. ಇಂದು ಈ ದೇವಾಲಯಗಳು ಜನರ ಪಾಲಿಗೆ ನರಕಗಳಾಗಿ ಪರಿಣಮಿಸಿವೆ. ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಾಗ ಎಷ್ಟು ಜನ ನಿರಾಶ್ರಿತರಾದರು ಅದರ ಮೂರು ಪಟ್ಟು ಜನ ಅಣೆಕಟ್ಟುಗಳಿಂದ ತೊಂದರೆಗೆ ಒಳಗಾಗಿದ್ದಾರೆ. ಈ ವಿಷಯವನ್ನ ವೈಜ್ಞಾನಿಕವಾಗಿ ನೋಡಿ ಸಮಸ್ಯೆಗಳನ್ನ ಬಗೆಹರಿಸುವ ಯತ್ನ ಆಗಬೇಕಾಗಿದೆ.

* ದೇಶದಲ್ಲಿ ಕಾಣಿಸಿಕೊಂಡಿರುವ ಮತ್ತೊಂದು ಮನೋಭಾವವನ್ನ ನಾನಿಲ್ಲಿ ಪ್ರಸ್ತಾಪಿಸಬೇಕು. ಹಿಂದೆ ನಮ್ಮ ದೇಶದಲ್ಲಿ ಹುಟ್ಟುವ ಮಕ್ಕಳೆಲ್ಲ ಕೈ ಮುಷ್ಟಿಯನ್ನ ಕಟ್ಟಿಕೊಂಡೇ ಹುಟ್ಟುತ್ತಿದ್ದವು. ಇಂದು ಎಲ್ಲ ಮಕ್ಕಳೂ ಕೈ ಚಾಚಿಕೊಂಡೇ ಹುಟ್ಟುತ್ತಿವೆ. ತಾ ತಾ ತಾ ನಮ್ಮ ಜನರ ಮನೋಭಾವ ಆಗುತ್ತಿದೆ. ಈ ತಾ ತಾ ಅನ್ನುವ ಮನೋಭಾವಕ್ಕೆ ಭಾಗ್ಯ ಅನ್ನುವ ಹೆಸರನ್ನ ನಾವು ಇರಿಸಿದ್ದೇವೆ. ಸೈಕಲ್ ಭಾಗ್ಯ, ಅನ್ನ ಭಾಗ್ಯ, ಶಾದಿ ಭಾಗ್ಯ, ಪುಸ್ತಕ ಭಾಗ್ಯ – ಇಲ್ಲಿ ನಮ್ಮ ಆತ್ಮಾಭಿಮಾನದ ಕೊರತೆ ಇದೆ ಅಂತ ನಮಗೆ ಏಕೆ ಅನಿಸೋದಿಲ್ಲ ?

ನಮ್ಮ ಸರಕಾರಗಳು ನಮ್ಮ ಜನರನ್ನ ನಿಷ್ಪ್ರಯೋಜಕರು, ಸೋಮಾರಿಗಳು, ಆತ್ಮಾಭಿಮಾನ ಇಲ್ಲದವರನ್ನಾಗಿ ಮಾಡುತ್ತಿದೆಯೇ ? ನಾವು ಯೋಚಿಸಬೇಕು. ಕೆಲ ವರ್ಷಗಳ ಹಿಂದೆ ಮುಂಬಯಿಯಲ್ಲಿ ಓರ್ವ ಫುಟ್‌ಪಾತ್ ಹುಡುಗನಿಗೆ ಒಂದು ಹಣದ ಚೀಲ ದೊರೆಯುತ್ತದೆ. ಅದನ್ನ ಆತ ಹತ್ತಿರದ ಪೊಲೀಸ್ ಠಾಣೆಗೆ ತೆಗೆದುಕೊಂಡುಹೋಗಿ ಕೊಡುತ್ತಾನೆ. ಅಲ್ಲಿಯ ಅಧಿಕಾರಿ ಅದನ್ನ ತೆರೆದು ನೋಡಿದಾಗ ಅದರಲ್ಲಿ ಗರಿಗರಿಯಾದ ನೂರರ ಹತ್ತು ನೋಟುಗಳು ಇರುತ್ತವೆ. ಅಧಿಕಾರಿ ಅಚ್ಚರಿಯಿಂದ ಕೇಳುತ್ತಾನೆ : "ಈ ಹಣ ನಿನಗೆ ಸಿಕ್ಕಿದ್ದನ್ನ ಯಾರೂ ನೋಡಿಲ್ಲ, ಇದನ್ನ ನೀನೇ ಇರಿಸಿಕೊಳ್ಳಬಹುದಿತ್ತಲ್ಲ ?" ಆಗ ಆ ಫುಟ್‌ಪಾತ್

ಹುಡುಗ ಹೇಳುತ್ತಾನೆ: "ಹರಾಮಕಾ ಪೈಸಾ ಮತ್ ಚಾಹಿಯೇ ಸಾಬ್." ಇವತ್ತು ಎಲ್ಲಿಯಾದರೂ ಯಾರಾದರೂ ಇಂತಹ ಮಾತನ್ನ ಆಡಿಯಾರೇ? ಇಂತಹ ಮಾತನ್ನ ಯಾರೂ ಆಡದ ಹಾಗೆ ನಮ್ಮ ಸಾಮಾಜಿಕ, ರಾಜಕೀಯ, ಧಾರ್ಮಿಕ ವ್ಯವಸ್ಥೆ ಒಂದು ವಾತಾವರಣವನ್ನ ನಿರ್ಮಾಣ ಮಾಡಿದೆ.

* ಗಾಂಧೀಜಿಯವರು ಒಂದು ಮಾತನ್ನ ಹೇಳುತ್ತಿದ್ದರು. ನಮ್ಮ ದೇಶದ ಓರ್ವ ಹೆಣ್ಣು ಮಗಳು ನಿಶ್ಚಿಂತೆಯಿಂದ ಮಧ್ಯರಾತ್ರಿಯಲ್ಲಿ ಊರಿನ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗುವಂತಾದ ದಿನ ಬಂದಾಗ ಈ ದೇಶಕ್ಕೆ ಸ್ವಾತಂತ್ರ್ಯ ಬಂತು ಅಂತ ನಾನು ನಂಬುತ್ತೇನೆ. ಈ ದೇಶಕ್ಕೆ ಸ್ವಾತಂತ್ರ್ಯ ಬಂದಿದೆ ಅನ್ನುವ ಭ್ರಮೆಯಲ್ಲಿ ನಾವು ಇದ್ದೇವೆ. ಆದರೆ ನಮ್ಮ ಹೆಣ್ಣು ಮಕ್ಕಳು ಇಂದು ಯಾವ ಪರಿಸ್ಥಿತಿಯಲ್ಲಿ ಇದ್ದಾರೆ ನಾವು ನೋಡಬೇಕು. ಅತ್ಯಾಚಾರ ದಿನನಿತ್ಯದ ಸುದ್ದಿ ಆಗುತ್ತಿದೆ. ನಮ್ಮ ಹೆಣ್ಣು ಮಕ್ಕಳು ರಾತ್ರಿ ಹೊತ್ತು ಬೇಡ, ಹಗಲು ಹೊತ್ತಿನಲ್ಲಿ ಕೂಡ ಇವತ್ತು ಅಸುರಕ್ಷಿತರು.

ಮೊದಲಿನಿಂದಲೂ ನಮ್ಮ ಹೆಣ್ಣು ವಿವಿಧ ಬಗೆಯ ಕಿರುಕುಳಕ್ಕೆ ಒಳಗಾದವಳು. ಆಧುನಿಕತೆ ಅವಳನ್ನ ಅವಳ ಶತಮಾನಗಳ ಸಂಕೋಲೆಯಿಂದ ಹೊರತಂದಿದೆ ಅಂತ ನಾನು ನಂಬಿದ್ದೆ. ಆದರೆ ಆಕೆ ಇನ್ನೊಂದು ಬಗೆಯ ಶಾಪಕ್ಕೆ ಒಳಗಾಗಿರೋದು ನಿಜಕ್ಕೂ ವಿಷಾದದ ಸಂಗತಿ. ದಿನನಿತ್ಯ ನಡೆಯುತ್ತಿರುವ ಸಾಲು ಅತ್ಯಾಚಾರಗಳು ಕೂಡ ನಮ್ಮ ಸರಕಾರದ ಕಣ್ಣನ್ನ ತೆರೆಸುವುದಿಲ್ಲ. ನಮ್ಮ ಸ್ವಾಮಿ ಜಗದ್ಗುರುಗಳು ಇದರಿಂದ ವಿಚಲಿತರಾಗುವುದಿಲ್ಲ. ಅಯ್ಯಾ ಅಣ್ಣಾ ಅಂತ ಕರೆ, ಎದುರು ನಿಂತವ ಅತ್ಯಾಚಾರಕ್ಕೆ ಮುಂದಾಗುವುದಿಲ್ಲ ಅನ್ನುವ ಉಪದೇಶ ಬಿಟ್ಟರೆ ಕಾರ್ಯಗತವಾಗಬಹುದಾದ ಯಾವುದೇ ಕ್ರಮ, ಮಾತು, ಸರಕಾರದಿಂದ ಬಂದಿಲ್ಲ. ಹೆಣ್ಣನ್ನ ಒಪ್ಪಿಕೊಳ್ಳುವ, ಸ್ವೀಕರಿಸುವ, ಸಹಿಸಿಕೊಳ್ಳುವ, ಯಥಾ ಅವಳನ್ನ ಗೌರವಿಸುವ ಮನೋಭಾವ ಎಲ್ಲರಲ್ಲಿ ಬಾರದೆ ಹೆಣ್ಣಿಗೆ ಇವತ್ತಿನ ಆತಂಕ, ಭೀತಿ, ಕಳವಳ, ದೂರವಾಗುವುದಿಲ್ಲ. ಹೆಣ್ಣಿಗೆ ನೀಡಬೇಕಾದ ಸ್ಥಾನ ನೀಡದಿದ್ದರೆ ನಮ್ಮ ಸಮಾಜಕ್ಕೆ ಪಾರ್ಶ್ವವಾಯು ಹೊಡೆಯುತ್ತದೆ.

ಇದೀಗ ಕನ್ನಡ ನಾಡನ್ನ ಒಡೆಯುವ ಮಾತು ಕೇಳಿಬರುತ್ತಿದೆ. ಒಂದು ದೀರ್ಘ ಹೋರಾಟದ ಮೂಲಕ ಪಡೆದ ನಾಡು ಇದು. ಆಲೂರು ವೆಂಕಟರಾಯರು, ಕಡಪಾ ರಾಘವೇಂದ್ರರಾಯರು, ಮುದವೀಡು ಕೃಷ್ಣರಾಯರು, ಯಾವುದೇ ಅಧಿಕಾರದ ಆಸೆ ಇಲ್ಲದೆ, ಮಕ್ಕಳು ಮೊಮ್ಮಕ್ಕಳಿಗೆ ಆಸ್ತಿ ಮಾಡದೆ, ಯಾವುದೇ ಅನ್ಯಾಯವನ್ನ ಮಾಡದೆ ಕಟ್ಟಿದ ನಾಡು. ಇದನ್ನ ನಾವು ಹಾಗೆಯೇ ಇರಿಸಿಕೊಳ್ಳಬೇಕು. ಆದರೆ ನಾಳೆ ತಮಗೆ ಮಂತ್ರಿಗಿರಿ ದೊರೆಯಬೇಕೆಂದೋ, ಇಲ್ಲ ತಮ್ಮ ಬೇಳೆ ಬೇಯಿಸಿ ಕೊಳ್ಳಬೇಕೆಂದೋ ಕೆಲವರು ಬೇರೆ ಬೇರೆ ರಾಜ್ಯಗಳ ಮಾತನ್ನ ಆಡುತ್ತಿದ್ದಾರೆ. ೧೯೫೬ರಲ್ಲಿ ಈ ನಾಡು ನವ ಮೈಸೂರು ಅನ್ನುವ ಹೆಸರಿನಲ್ಲಿ ತಲೆಎತ್ತಿತು, ಜನರ ಅಭಿಪ್ರಾಯ ರೂಪಿಸಿ ದೇವರಾಜ ಅರಸು ಅವರು ಇದಕ್ಕೆ ಕರ್ನಾಟಕ ಅನ್ನುವ ಹೆಸರನ್ನ ಇರಿಸಿದರು. ಇದು ಹಾಗೇ ಇರಲಿ. ಮತ್ತೆ ಒಡಕು ಬೇಡ. ಮತ್ತೆ ಈ ನಾಡು ಒಡೆದರೆ ನಾವು ದುರ್ಬಲರಾಗುತ್ತೇವೆ. ನಮ್ಮ ದನಿ ಉಡುಗಿಹೋಗುತ್ತದೆ.

* ಇತ್ತೀಚೆಗೆ ನಮ್ಮ ಸರಕಾರ ಮೂಢನಂಬಿಕೆಯ ವಿರುದ್ಧ ಒಂದು ಯುದ್ಧವನ್ನೇ ಸಾರಿತು. ಸಾಕಷ್ಟು ಕಡೆ ಇದರ ಬಗ್ಗೆ ಚರ್ಚೆ ಆಯಿತು, ಆಗುತ್ತಿದೆ. ಇದು ಆಗಬೇಕಾದ ಒಂದು ಕೆಲಸ. ಇಲ್ಲಿ ಜೀವವಿರೋಧಿ, ಪ್ರಜಾಪ್ರಭುತ್ವ ವಿರೋಧಿ, ಮನುಷ್ಯನನ್ನ ಕೆಳಹಂತಕ್ಕೆ ತರುವ, ಅವನನ್ನ ಇನ್ನೊಬ್ಬನ ಪಾದದ ಕೆಳಗೆ ಬೀಳಿಸುವ ಹಲವು ನಂಬಿಕೆ, ಆಚರಣೆ, ಸಂಪ್ರದಾಯಗಳು ಇವೆ. ಇದು ಈ ಧರ್ಮ ಆ ಧರ್ಮ ಅಂತ ಅಲ್ಲ. ಎಲ್ಲ ಧರ್ಮಗಳಲ್ಲೂ ಈ ಸಂಪ್ರದಾಯಗಳು ಇವೆ. ಇವು ನಿಲ್ಲಬೇಕು. ಆದರೆ ಇದು ದಿಢೀರನೆ ಆಗುವ ಕೆಲಸವಲ್ಲ. ಜನರಲ್ಲಿ ಆತ್ಮವಿಶ್ವಾಸ, ವೈಜ್ಞಾನಿಕ ಮನೋಭಾವ, ಸ್ಪಷ್ಟವಾಗಿ ಚಿಂತಿಸುವ ಶಕ್ತಿ, ಬದುಕನ್ನ ಒಂಟಿಯಾಗಿ ನಿಂತು ಎದುರಿಸುವ ಧೀಮಂತಿಕೆ ಬಂದರೆ ಜನ ತಾವಾಗಿ ಈ ಮೌಢ್ಯದಿಂದ ದೂರವಾಗುತ್ತಾರೆ. ಮುಖ್ಯವಾಗಿ ನಮ್ಮ ನಾಯಕರು, ಧರ್ಮಾಧಿಕಾರಿಗಳು, ಸಮಾಜದ ಮುಂದುವರಿದ ವರ್ಗ, ವಿದ್ಯಾವಂತರು ರಿಪೇರಿಯಾದರೆ ಸಮಾಜದ ರಿಪೇರಿ ಆದ ಹಾಗೆ. ಇಲ್ಲೊಂದು ಅಂಶವನ್ನ ನಾವೆಲ್ಲ ಗಮನಿಸಬೇಕು. ಜನ ತಾವು ಒಪ್ಪಿಕೊಂಡಿರುವ ಆಚರಣೆಗಳನ್ನ ಸುಲಭವಾಗಿ ಬಿಟ್ಟುಕೊಡುವುದಿಲ್ಲ. ಬೇರೆಯವರು ಅದನ್ನ ಟೀಕೆ ಮಾಡಿದಷ್ಟೂ ಅದಕ್ಕೆ ಬಲವಾಗಿ ಅಂಟಿಕೊಳ್ಳುತ್ತಾರೆ. ಈ ಸೂಕ್ಷ್ಮವಾದ ಕೆಲಸವನ್ನ ಎಚ್ಚರಿಕೆಯಿಂದ ಮಾಡಬೇಕು.

ಹೇಳಬೇಕಾದ ವಿಷಯಗಳು ಬಹಳ ಇವೆ. ಇಲ್ಲಿ ಅವುಗಳನ್ನ ಸೂಕ್ಷ್ಮವಾಗಿ ಹೇಳಬಹುದು – ಹೊಸ ಸರಕಾರ ಬಂದು ಕೆಲ ತಿಂಗಳುಗಳು ಕಳೆದರೂ ಇನ್ನೂ ಅಕ್ಯಾಡೆಮಿಗಳು ಅಸ್ತಿತ್ವಕ್ಕೆ ಬಂದಿಲ್ಲ. ನಾಡಿನ ಸಾಂಸ್ಕೃತಿಕ ಬದುಕಿಗೆ ಒಂದು ಬಗೆಯ ಗರ ಬಡಿದಿದೆ. ಬೇರೆ ಭಾಷೆಯ ಚಲನಚಿತ್ರಗಳು ವಿಜೃಂಭಣೆಯಿಂದ ಕನ್ನಡನಾಡಿನಲ್ಲಿ ಪ್ರದರ್ಶಿತವಾಗುತ್ತಿವೆ. ಕನ್ನಡ ಬಾರದೇನೆ ಇಲ್ಲಿ ಬದುಕುವಂತಹ ವಾತಾವರಣವನ್ನ ನಾವು ಸೃಷ್ಟಿಮಾಡಿ ಇರಿಸಿದ್ದೇವೆ. ಕನ್ನಡಿಗರಿಗೆ ಉದ್ಯೋಗ ಸಿಗಬೇಕು ಅನ್ನುವ ಉದ್ದೇಶದಿಂದ, ಇತರೇ ಕೆಲ ಸಮಸ್ಯೆಗಳನ್ನ ಬಗೆಹರಿಸಲು ಸಿದ್ಧಪಡಿಸಿದ ವರದಿಗಳು ಗೆದ್ದಲು ತಿನ್ನುತ್ತ ವಿಧಾನಸೌಧದಲ್ಲಿ ಬಿದ್ದಿವೆ. ಖಾಸಗೀ ಶಿಕ್ಷಣ ಸಂಸ್ಥೆಗಳ ಲಾಬಿ ಬಲವಾಗುತ್ತಿದೆ. ಕೋಮು ಶಕ್ತಿಗಳು ತಮ್ಮೆಲ್ಲ ಆಂತರಿಕ ಶಕ್ತಿಯನ್ನ ಬಳಸಿಕೊಂಡು ಜನರ ನಡುವೆ ವಿಷಬೀಜವನ್ನ ಬಿತ್ತುವ ಕೆಲಸವನ್ನ ಮುಂದುವರಿಸಿವೆ. ನೈತಿಕ ಪೊಲೀಸ್ ಅನ್ನುವ ಪರ್ಯಾಯ ವ್ಯವಸ್ಥೆ ಇನ್ನೂ ಜೀವಂತವಾಗಿದೆ. ನಮ್ಮ ಸಹಜೀವಿಗಳನ್ನ ಅನುಮಾನದಿಂದ ನೋಡುವ ಪ್ರವೃತ್ತಿಗೆ ತಡೆ ಬಂದಿಲ್ಲ. ಕಿರುತೆರೆ ಅನ್ನುವ ಆಧುನಿಕ ಅಪಾಯ ಮೌಢ್ಯ, ಭಯ, ಅಪರಾಧ, ಇತ್ಯಾದಿಗಳನ್ನ ವೈಭವೀಕರಿಸಿ ಜನರ ಬೇಡಿಕೆಯನ್ನ ಪೂರೈಸುತ್ತ ತನ್ನ ನಿಜವಾದ ಶಕ್ತಿಯನ್ನು ದುರುಪಯೋಗ ಮಾಡಿಕೊಳ್ಳುತ್ತಿದೆ. ಇವುಗಳನ್ನ ಸರಕಾರ, ಜನ, ಗಮನಿಸಬೇಕು. ಇಂತಹ ಸಮಸ್ಯೆಗಳನ್ನ ಇರಿಸಿಕೊಂಡು ನಾವು ಬದುಕುವುದರಲ್ಲಿ ಸುಖ ಇಲ್ಲ. ನೆಮ್ಮದಿಯೂ ಇಲ್ಲ. ಅದು ಪುರುಷಾರ್ಥವೂ ಅಲ್ಲ.

ನಾನು ಇಡೀ ಕರ್ನಾಟಕವನ್ನ ಸುತ್ತಿ ಬಂದವನು. ಇಲ್ಲಿಯ ವೈವಿಧ್ಯಮಯವಾದ ಭಾಷೆ, ಜನ, ಬದುಕು, ರೀತಿ, ನೀತಿ, ಉಡುಗೆ, ಆಹಾರ, ನೀರಿನ ಗುಣ, ಮಣ್ಣಿನ ಬಣ್ಣ, ಪರಿಸರದ ವಿವಿಧತೆ ನನ್ನನ್ನ ಮರಳುಮಾಡಿವೆ. ಒಂದು ಕಡೆ ಕುರಿಗಳನ್ನ ಕರೆದುಕೊಂಡು ಓರ್ವ ಕುರುಬ ಹೆಗಲ ಮೇಲೆ ದೋಟಿ ಹೊತ್ತು ನಡೆದರೆ ಕುರಿಗಳು ಅವನನ್ನ ಅನುಕರಿಸುತ್ತವೆ, ಇನ್ನೊಂದು ಕಡೆ ಕುರಿಗಳನ್ನ ಕುರುಬ ಹೊಡೆದುಕೊಂಡು ಹೋಗಬೇಕಾಗುತ್ತದೆ. ಒಂದು ಕಡೆ ನೀರು ಬೆಟ್ಟದ ತುದಿಯಲ್ಲಿ ಪುಟಿದು ಬಚ್ಚಲು ಮನೆಯ ಹಂಡೆಗೆ ಬಂದು ಬಿದ್ದರೆ, ಇನ್ನೊಂದು ಕಡೆ ಒಂದು ಕೊಡಪಾನ ನೀರಿಗಾಗಿ ನಮ್ಮ ಹೆಂಗಳೆಯರು ಇಂದು ಒಂದು ಕಿ.ಮೀ., ನಾಳೆ ಮೂರು ಕಿ.ಮೀ. ಹೋಗಬೇಕಾಗುತ್ತದೆ. ಒಂದು ಕಡೆ ಸಮೃದ್ಧವಾದ ಹಸಿರು, ಇನ್ನೊಂದು ಕಡೆ ಹಸಿರೇ ಇಲ್ಲದ ಬೆಂಗಾಡು. ಇದು ಕರ್ನಾಟಕ. ಶತಮಾನಗಳಿಂದ ನಮ್ಮ ಜನ ಇಲ್ಲಿ ಬದುಕಿದ್ದಾರೆ. ನಾನು ನೆಮ್ಮದಿಯಿಂದ ಇರುವವರನ್ನ ಕಂಡು ಸಂತಸಪಟ್ಟಿದ್ದೇನೆ, ಕಷ್ಟದಲ್ಲಿ ಇರುವವರ ಕುರಿತು ನೊಂದಿದ್ದೇನೆ. ದಿನ ನಿತ್ಯ ನೋವನ್ನ ಅನುಭವಿಸುವವರ ನೋವು ದೂರವಾಗಲಿ ಎಂದು ಹಾರೈಸುತ್ತೇನೆ. ಸರ್ವರಿಗೆ ಸಮಪಾಲು, ಸರ್ವರಿಗೆ ಸಮಬಾಳು ಎಂಬ ಸಾಹಿತ್ಯದ ಉದ್ದೇಶ ನಮ್ಮ ನಾಡಿನ ಎಲ್ಲರ ವಿಷಯದಲ್ಲೂ ನಿಜವಾಗಬೇಕು. ನಮ್ಮ ಸರಕಾರ, ನಾಡಿನ ಕ್ರಿಯಾಶೀಲರು, ವೈಜ್ಞಾನಿಕ ವಿಧಿ ವಿಧಾನಗಳ ಮೂಲಕ ಆ ಆಶಯವನ್ನು ಸಾಧಿಸುವಂತಾಗಲಿ ಎಂದು ಹಾರೈಸುತ್ತೇನೆ. ಈ ನಾಡನ್ನ ಕವಿಗಳು, ದ್ರಷ್ಟಾರರು, ರಾಜಕೀಯ ವ್ಯಕ್ತಿಗಳು, ನಾಡಿನ ಕೃಷಿ ಕಾರ್ಮಿಕರು, ವ್ಯಾಪಾರಿಗಳು, ಕ್ರೀಡಾಪಟುಗಳು, ಮತ್ತೆಲ್ಲರೂ ಬಯಸಿ ಬಯಸಿ ಹಂಬಲಿಸಿ ನಿರ್ಮಿಸಿದರು ಅನ್ನುವ ಅಂಶ ಸದಾ ನಮ್ಮ ನೆನಪಿನಲ್ಲಿ ಇರಬೇಕು. ಈ ನಾಡನ್ನ ಒಡೆಯುವ, ಇಲ್ಲಿ ಅಶಾಂತಿಯನ್ನ ಹುಟ್ಟಿಸುವ ಕೆಲಸ ಆಗದಿರಲಿ ಅನ್ನುವುದೇ ನಮ್ಮೆಲ್ಲರ ಹಾರೈಕೆ.

ನನ್ನ ಮಾತು ತುಸು ದೀರ್ಘವಾಗಿದ್ದರೂ ಕೇಳಿದ್ದೀರಿ. ಹಂಸಕ್ಷೀರ ನ್ಯಾಯ ಅನ್ನುವ ಮಾತನ್ನ ನಿಮ್ಮ ನೆನಪಿಗೆ ತರುತ್ತೇನೆ. ಬೇಂದ್ರೆಯವರ ಈ ಮಾತುಗಳ ಮೂಲಕ ನನ್ನ ಮಾತಿಗೆ ಮಂಗಳ ಹಾಡುತ್ತೇನೆ:

*ಲೇಸೆ ಕೇಳಿಸಲಿ ಕಿವಿಗೆ, ನಾಲಗೆಗೆ ಲೇಸೆ ನುಡಿದು ಬರಲಿ, ಲೇಸೆ ಕಾಣಿಸಲಿ ಕಣ್ಗೆ, ಜಗದೊಳಗೆ ಲೇಸೆ ಹಬ್ಬುತಿರಲಿ, ಲೇಸೆ ಕೈಗಳಿಂದಾಗುತಿರಲಿ, ತಾ ಬರಲಿ ಲೇಸೆ ನಡೆದು, ಲೇಸನುಂಡು, ಲೇಸುಸಿರಿ, ಇಲ್ಲಿರಲಿ ಲೇಸೆ ಮೈಯ ಪಡೆದು.*



ನಮಸ್ಕಾರ.

**ನಾ. ಡಿಸೋಜ**
ಅಧ್ಯಕ್ಷರು, ೮೦ನೇ ಅಖಿಲ
ಭಾರತ ಕನ್ನಡ ಸಾಹಿತ್ಯ
ಸಮ್ಮೇಳನ, ಮಡಿಕೇರಿ

# ಋಗ್ವೇದ ಪ್ರವೇಶಿಕೆ

## ಐತಿಹ್ಯ ಮತ್ತು ವಾಸ್ತವ



ಜಿ. ರಾಮಕೃಷ್ಣ

ಸಾಯಣ ಭಾಷ್ಯದೊಂದಿಗೆ ಋಗ್ವೇದ ಸಂಹಿತೆಯನ್ನು ಪುಣೆಯಲ್ಲಿರುವ ವೈದಿಕ ಸಂಶೋಧನಾ ಮಂಡಲವು ಮೊದಲ ಬಾರಿಗೆ ಪ್ರಕಟಿಸಿದ್ದು 1933ರಲ್ಲಿ; ಶಕವರ್ಷ 1855ರ ವಿಜಯದಶಮಿಯಂದು (28-9-1933). ಆಗ್ಗೆ ಮಂಡಲದ ಅಧ್ಯಕ್ಷರಾಗಿದ್ದವರು ಖ್ಯಾತ ವಿದ್ವಾಂಸ ವಿ. ಕೆ. ರಾಜವಾಡೆ. ಐದು ಸಂಪುಟಗಳಲ್ಲಿ ಹೊರಬಂದ ಈ ಪ್ರಕಟಣೆಯ ಮೊದಲ ಸಂಪುಟದ ಪೀಠಿಕೆಯ ಒಂದು ಭಾಗದಲ್ಲಿ ರಾಜವಾಡೆಯವರು ಋಗ್ವೇದದ ಕಾವ್ಯಗುಣದ ಪ್ರಸ್ತಾಪ ಮಾಡುತ್ತಾ ಹೀಗೆ ಬರೆದಿದ್ದರು : "ಈವರೆಗಿನ ನನ್ನ ಕೆಲಸ ಬಹಳ ಕಡಿಮೆ ಪ್ರಮಾಣದ್ದು; ಅಂಥದರಲ್ಲೂ ನನ್ನಲ್ಲಿ ಒಂದು ಗಾಢ ಭಾವನೆ ಮೂಡಿದೆ. ಋಗ್ವೇದದ ಮಹಾಕಲಾವಂತಿಕೆಗೆ ಸಂಬಂಧಿಸಿದ್ದು ಅದು. ಅದರ ಶೈಲಿ ಆಪ್ತವಾಗಿದೆ, ಚಿಂತನೆಯೂ ಆಪ್ತವಾಗಿದೆ. ಆದರೆ ಅದು ಕೇವಲ ಜನಪ್ರಿಯ ಗಾಥೆಗಳ ಸಂಗ್ರಹ ಮಾತ್ರವಲ್ಲ. ಅದರ ಸೃಷ್ಟಿಕರ್ತರು ಧೀಮಂತ ವಿದ್ವಜ್ಜನ. ಅವರಿಗೆ ಹಾಸ್ಯ ಮತ್ತು ವಿವೇಕವಷ್ಟೇ ಅಲ್ಲದೆ ಸ್ತ್ರೀರಕ್ತಿಯೂ ಸಾಕಷ್ಟಿತ್ತು. ಮಾನವ ಸಹಜ ಗುಣಗಳು, ಭಾವನೆಗಳು, ವ್ಯಾಮೋಹ, ಎಲ್ಲವನ್ನೂ ತುಂಬಿಕೊಂಡಿದ್ದ ಆ ಜನ ಕವಿ ಕಾಳಿದಾಸನಂತೆ ಅಭಿವ್ಯಕ್ತಿಯಲ್ಲಿ ನಿಸ್ಸೀಮರು. ಶ್ಲೇಷಾರ್ಥ (ಎರಡು ಬೇರೆ ಬೇರೆ ಅರ್ಥಗಳು) ಇರುವಂತಹ ಕವಿತೆಗಳನ್ನು ಅವರು ಬೇಕಾದಷ್ಟು ರಚಿಸಿದ್ದಾರೆಂದು ಹೇಳಿದರೆ ಓದುಗರಿಗೆ ಅಚ್ಚರಿ ಎನಿಸಬಹುದು. ಆದರೆ ಅದು ಅವರಿಗೆ ರೂಢಿಗತವಾಗಿತ್ತು. ಕಾವ್ಯಾಭಿವ್ಯಕ್ತಿಯ ಕಲೆ ಅದು. ಇಂತಹ ಕಲಾವಂತಿಕೆಯ ಸಾಹಿತ್ಯವು ವಿಶ್ವದ ಸಾಹಿತ್ಯದಲ್ಲಿ ಮೊದಲ ಮೆಟ್ಟಿಲು ಆಗಿದ್ದಿರಲಾರದು. ಕವಿತ್ವ ಋತುವಿನ ಅಂತಿಮ ಭಾಗದಲ್ಲಿ ಮೂಡುವಂತಹ ಫಲವೇ ಋಗ್ವೇದ. ಇದಕ್ಕಿಂತಲೂ ಸರಳವಾದ, ಕಡಿಮೆ ಕಲಾವಂತಿಕೆಯ, ಪೇಲವ ಸಾಹಿತ್ಯವು ಅದಕ್ಕಿಂತಲೂ ಹಿಂದೆ ಇದ್ದಿರಬೇಕು."

ಹಾಗೇನಾದರೂ ಇದ್ದರೆ ಅದು ನಮಗೆ ದೊರೆತಿಲ್ಲ, ಆದರೆ ರಾಜವಾಡೆಯವರ ಮಾತು ಒಂದಂಶವನ್ನು ಖಚಿತಗೊಳಿಸುತ್ತದೆ : ಋಗ್ವೇದದ ವಿವಿಧ ಭಾಗಗಳು ಒಂದೇ ಘಟ್ಟಕ್ಕೆ ಸೇರಿದುವಲ್ಲ ಮತ್ತು ಅವುಗಳ ರಚನೆಯು ಒಂದು ನಿರ್ದಿಷ್ಟ ದಶಕದಲ್ಲಿ ನಡೆದುಹೋಗಲಿಲ್ಲ. ಕಾಡುಮೇಡುಗಳಲ್ಲಿ ಸಂಚರಿಸುತ್ತಿದ್ದ ಋಗ್ವೇದದ ಕವಿಗಳು ಸಸ್ಯರಾಶಿಯಿಂದ ಮೂಲಿಕೆಗಳನ್ನು ಅರಸಿ ವೈದ್ಯಕೀಯದತ್ತ ಹೆಜ್ಜೆ ಹಾಕಲಾರಂಭಿಸಿದರು. ಅಶ್ವಿನೀ ದೇವತೆಗಳು, ರುದ್ರ, ಮುಂತಾದವರು 'ಭಿಷಜ'ರಾಗಿ ಹೊಮ್ಮಿದ್ದು ಹಾಗೆ. "ವೈದ್ಯರಲ್ಲಿ ಅತಿ ದೊಡ್ಡ ವೈದ್ಯ ನೀನು" (ಭಿಷಕ್ತಮಂ ತ್ವಾ ಭಿಷಜಾಂ ಶೃಣೋಮಿ. - ಋ. 2.33.4) ಎಂದು ರುದ್ರನನ್ನು ಹೊಗಳಲಾಗಿದೆ. ಅಶ್ವಿನೀ ದೇವತೆಗಳು ದೇವವೈದ್ಯರು. ಅವರ ಸಂಗತಿಯನ್ನು ಮುಂದೆ ವಿವರವಾಗಿ ತಿಳಿಯೋಣ. ಪ್ರಕೃತದಲ್ಲಿ ರುದ್ರನನ್ನು ಪರಿಚಯಿಸಿಕೊಂಡು ಔಷಧಿ ಅಥವಾ ಮೂಲಿಕೆಗಳನ್ನು ಕುರಿತಂತೆ ಋಗ್ವೇದದ ಕವಿಯ ಭಾವವನ್ನು ತಿಳಿಯೋಣ. ಈ ಮಾಲಿಕೆಯಲ್ಲಿ ಇದು ಎಂಟನೆಯ ಕಂತು.

ಋಗ್ವೇದದ ಆದಿಕಾಲದಿಂದ ಯಜುರ್ವೇದದ ಅಂತ್ಯದವರೆಗೆ ರುದ್ರನು ವಿಕಾಸ ಹೊಂದಿದ್ದನ್ನು ಅನುಕ್ರಮವಾಗಿ ವಿಶ್ಲೇಷಿಸಿದರೆ ವೇದಕಾಲೀನ ಜನರ ನಾಗರಿಕತೆಯು ಹೊಮ್ಮುತ್ತಾ ಬಂದ ಬಗೆಯನ್ನು ತಿಳಿಯಬಹುದೆನಿಸುತ್ತದೆ.

ಇಂದಿನ ಕಾಲದಲ್ಲಿ ರುದ್ರಾಭಿಷೇಕ ಎಂಬ ಆಚರಣೆ ರೂಢಿಯಲ್ಲಿದೆ. ಅದು ಏಕ, ಏಕಾದಶ, ಶತ, ಸಹಸ್ರ, ಅನೇಕ, ಎಂದು ವಿಧವಿಧವಾಗಿ ನಡೆಯುತ್ತದೆ. ಆ ಯಾಂತ್ರಿಕ ಆಚರಣೆಗೂ ಋಗ್ವೇದದ ರುದ್ರನಿಗೂ ಎಂತಹ ಸಂಬಂಧವೂ



ಇಲ್ಲ. ಯಜುರ್ವೇದದ ತೈತ್ತಿರೀಯ ಸಂಹಿತೆಯ ರುದ್ರ ಸಹ ಬಹುಶಃ ಅಭಿಷೇಕಕ್ಕೆ ಪಾತ್ರವಾಗಲಿಲ್ಲ, ಆದರೆ ಅವನನ್ನು ಕುರಿತಾದ ಮಂತ್ರಗಳು ಇಂದು ಅಭಿಷೇಕದ ವೇಳೆಯಲ್ಲಿ ಪುಂಖಾನುಪುಂಖವಾಗಿ (ಮತ್ತು ಹಲವು ವೇಳೆ ತಪ್ಪುತಪ್ಪಾಗಿ) ಕೇಳಿಬರುತ್ತವೆ. 'ನಮಃ' ಮತ್ತು 'ಚ' ಬಹಳ ಬರುತ್ತವಾದ್ದರಿಂದ ಅದನ್ನು 'ನಮಕ–ಚಮಕ' ಎಂದು ಕರೆಯುವುದು ರೂಢಿಯಾಗಿದೆ. ಋಗ್ವೇದದ ರುದ್ರನು ಶಿವನಲ್ಲ, ಏಕೆಂದರೆ ಅಲ್ಲಿನ್ನೂ ಶಿವನ ಆವಿರ್ಭಾವವೇ ಆಗಿಲ್ಲ. 'ಶಿವ' ಎಂಬ ಪದವು ವಿವಿಧ ರೂಪಗಳಲ್ಲಿ ಹಲವು ಬಾರಿ ಬರುತ್ತದೆ, ಆದರೆ ಅದು 'ಸುಖಕರ' ಅಥವಾ 'ಕಲ್ಯಾಣ' ಎಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಶಿವನ ರೂಪವು ಹರಪ್ಪ ಸಂಸ್ಕೃತಿಯಲ್ಲೇ ಕಾಣಬರುತ್ತದೆಂಬ ವಾದವೊಂದಿದೆ. ಹರಪ್ಪ ಸಂಸ್ಕೃತಿಯ ಮತ್ತು ಋಗ್ವೇದದ ಕರ್ತೃಗಳು ಒಬ್ಬರೇ ಎಂದು ಅನೈತಿಹಾಸಿಕ ತೀರ್ಮಾನಕ್ಕೆ ಬರುವವರು ಈ ಪ್ರಶ್ನೆಯನ್ನು ಹಾಕಿಕೊಳ್ಳಬೇಕು : ಹರಪ್ಪದಲ್ಲಿರುವ ಶಿವ ಋಗ್ವೇದದಲ್ಲೇಕಿಲ್ಲ, ಎಂದು. ಏನೇ ಇರಲಿ, ಋಗ್ವೇದದ ರುದ್ರನು ಶಿವನಂತೂ ಅಲ್ಲ; ಶಿವನ ಗಣವು ರುದ್ರನಿಗಿಲ್ಲ. ಋಗ್ವೇದದ ಮೂರು ಸಾವಿರ ವರ್ಷಗಳ ನಂತರದ ಸಾಯಣನಿಗೆ ಇದೊಂದು ಸಮಸ್ಯೆಯಾಗಿದೆ. ಅದನ್ನು ಅವನು ಪರಿಹರಿಸಿಕೊಳ್ಳುವ ವಿಧಾನವು ತಮಾಷೆಯಾಗಿದೆ. ಶಿವನು ಲಯಕರ್ತನೆಂಬುದು ಅವನ ಕಾಲದ ಪುರಾಣ. ಅದನ್ನು ಅವನು ಯಾವ ಸಂಕೋಚವೂ ಇಲ್ಲದೆ ಋಗ್ವೇದಕ್ಕೆ ಆರೋಪಿಸಿ ಬಿಡುತ್ತಾನೆ ! ಒಂದನೆಯ ಮಂಡಲದ ೧೧೪ನೆಯ ಸೂಕ್ತವು ರುದ್ರನನ್ನು ಉದ್ದೇಶಿಸಿದ್ದು. ಅಲ್ಲಿಯ ಮೊದಲ ಮಂತ್ರದ ಭಾಷ್ಯದಲ್ಲಿ 'ರುದ್ರ' ಎಂಬ ಪದದ ವ್ಯುತ್ಪತ್ತಿಯನ್ನು ಸಾಯಣನು ಆರು ರೀತಿಗಳಲ್ಲಿ ಹೇಳಿದ್ದಾನೆ : ಅಂತಕಾಲದಲ್ಲಿ ಎಲ್ಲರನ್ನೂ ಅಳಿಸುತ್ತಾನೆ (ರೋದಯತಿ), ಆದ್ದರಿಂದ ಅವನು ರುದ್ರ; 'ರುತ್' ಎಂದರೆ ಸಂಸಾರವೆಂಬ ದುಃಖ, ಅದನ್ನು ಹೋಗಲಾಡಿಸುವವನು ರುದ್ರ; 'ರುತಃ' ಎಂದರೆ ಉಪನಿಷತ್ತುಗಳು, ಅವುಗಳಿಂದ ತಿಳಿಯಲ್ಪಡುವವನು ರುದ್ರ; 'ರುತ್' ಎಂಬ ಶಬ್ದದಿಂದ ಆತ್ಮವಿದ್ಯೆಯು ಸೂಚಿಸಲ್ಪಡುತ್ತದೆ ಮತ್ತು ಅದನ್ನು ಉಪಾಸಕರಿಗೆ ಕೊಡುವವನು ರುದ್ರ; 'ರುಣದ್ಧಿ' ಎಂದರೆ ಆವರಿಸುವವನು ಎಂದರ್ಥ, ಆದ್ದರಿಂದ 'ರುತ್' ಎಂಬುದು ಅಂಧಕಾರದ ಸೂಚಕ ಪದ, ಅದನ್ನು ಹೋಗಲಾಡಿಸುವವನು ರುದ್ರ. ತನ್ನಿಷ್ಟ ಬಂದಂತೆ ವ್ಯಾಖ್ಯಾನಿಸಿಕೊಳ್ಳುವ ಹಕ್ಕನ್ನು ಸಾಯಣ ಚೆನ್ನಾಗಿ ಚಲಾಯಿಸುತ್ತಾನೆ ಎಂದಷ್ಟೇ ಹೇಳಬಹುದು. ಅಷ್ಟು ಸಾಲದೆಂಬಂತೆ ಅವನು ಕತೆಯೊಂದನ್ನು ಕಟ್ಟಿದ್ದಾನೆ : ದೇವಾಸುರ ಸಂಗ್ರಾಮ ಕಾಲದಲ್ಲಿ ಅಗ್ನ್ಯಾತ್ಮಕನಾದ ರುದ್ರನಲ್ಲಿ ಸಂಪತ್ತನ್ನು ಇರಿಸಿದ್ದರಂತೆ. ಅದನ್ನು ತೆಗೆದುಕೊಂಡು ರುದ್ರ ಓಡಿಹೋದ. ದಾನವರನ್ನು ಸೋಲಿಸಿದ ನಂತರ ದೇವತೆಗಳಿಗೆ ಸಂಪತ್ತು ನೆನಪಾಯಿತು. ರುದ್ರನನ್ನು ಹಿಡಿದು ಸಂಪತ್ತು ವಾಪಸ್ಸು ಪಡೆದರು. ರುದ್ರ ಆಗ ಅಳಲಾರಂಭಿಸಿದ (ಅರುದತ್). ಆದ್ದರಿಂದ ಅವನಿಗೆ ರುದ್ರನೆಂಬ ಹೆಸರು ! ತೈತ್ತಿರೀಯ ಸಂಹಿತೆಯ ವಾಕ್ಯವೊಂದು (೧.೫.೧.೧ : ಸೋऽರೋದೀತ್ ಯದರೋದೀತ್ ತತ್‌ರುದ್ರಸ್ಯ ರುದ್ರತ್ವಂ) ಸಾಯಣನ ಕತೆಗೆ ಪುರಾವೆ. ಚಾರಿತ್ರಿಕ ದೃಷ್ಟಿಯಿಲ್ಲದೆ ಋಗ್ವೇದಕ್ಕೆ ವ್ಯಾಖ್ಯಾನ ನೀಡುವ ಸಾಯಣನಂತೆ ನಮ್ಮ ಸಮಕಾಲೀನ ವಿದ್ವಾಂಸರೂ ಅಂಜಿಕೆಯಿಲ್ಲದೆ ಮಾಡಿಬಿಡುತ್ತಾರೆ. ಅದು, ಪಾಪ, ಋಗ್ವೇದದ 'ಕರ್ಮ' ಆಗಿಹೋಗಿದೆ.

ವಾಸ್ತವಿಕವಾಗಿ ರುದ್ರನು ಆರೋಗ್ಯದಾತ, ಹಾನಿಯಿಂದ ರಕ್ಷಣೆ ನೀಡುವವನು, ಆಯುಷ್ಯ ವರ್ಧಿಸುವವನು. ಆದ್ದರಿಂದ ಕವಿಯು ಅವನನ್ನು ತಣಿಸಲು ಮುಂದಾಗುತ್ತಾನೆ, ಅವನು ಶ್ರೇಷ್ಠ ವೈದ್ಯನೆಂದು ಹೇಳುತ್ತಾ ಪೋಷಣೆಗಾಗಿ ಅವನ ಮೊರೆಹೋಗುತ್ತಾನೆ. ಇದನ್ನು ನೇರವಾಗಿ ವೇದದ ವಾಕ್ಯಗಳಿಂದಲೇ ತಿಳಿಯಲು ಎರಡು ಋಗ್ವೇದ ಸೂಕ್ತಗಳನ್ನು (೨.೩೩ ಮತ್ತು ೧.೧೧೪) ಸಂಕ್ಷಿಪ್ತವಾಗಿ ಪರಿಚಯಿಸಿಕೊಳ್ಳೋಣ. ಮೊದಲು ಸೂಕ್ತ ೨.೩೩ :

"ಮರುತ್ತುಗಳ ತಂದೆಯೆ, ನಿನ್ನಿಂದ ನಮಗೆ ಸುಖ ಲಭಿಸಲಿ; ಸೂರ್ಯನ ಬೆಳಕಿನಿಂದ ನಮ್ಮನ್ನು ದೂರ ಮಾಡಬೇಡ (ಅಂದರೆ, ನಮ್ಮನ್ನು ಜೀವಂತವಾಗಿರಿಸು); ನಮ್ಮ ಮಕ್ಕಳು ಶತ್ರುಗಳನ್ನು ಹಿಮ್ಮೆಟ್ಟಿಸಲಿ. ಮಕ್ಕಳು ಮತ್ತು ಮೊಮ್ಮಕ್ಕಳೊಂದಿಗೆ ನಾವು ಸುಖದಿಂದಿರುತ್ತೇವೆ (ಮಂತ್ರ ೧). ನೀನು ನೀಡುವ ಶುಭಕರ ಔಷಧಿಗಳಿಂದ ನೂರು ಹೇಮಂತಗಳನ್ನು ಪಡೆಯುವೆವು ಮತ್ತು ನಮ್ಮ ದ್ವೇಷಿಗಳನ್ನು ನೀನು ವಿನಾಶ ಮಾಡು. ನಮ್ಮ ಕೆಡುಕುಗಳನ್ನು ನಿವಾರಿಸು, ರೋಗಮುಕ್ತರನ್ನಾಗಿಸು (೨ : ತ್ವಾದತ್ತೇಭೀ ರುದ್ರ ಶಂತಮೇಭಿಃ ಶತಾ ಹಿಮಾ ಅಶೀಯ ಭೇಷಜೇಭಿಃ। ವಿ ಅಸ್ಮತ್ ದ್ವೇಷೋ ವಿತರಂ ವಿ ಅಂಹೋ ವಿ ಅಮೀವಾಃ ಚಾತಯಸ್ವಾ ವಿಷೂಚೀಃ॥) ನೀನು ಸರ್ವಶ್ರೇಷ್ಠ, ಸಂಪತ್ತಿನ ಒಡೆಯ, ನಿಷ್ಣಾತರಲ್ಲಿ ಅತಿನಿಷ್ಣಾತ; ನಮ್ಮನ್ನು ಪಾಪಕೂಪದಿಂದ ಪಾರು ಮಾಡು, ಆ ಹಾದಿಯಿಂದ ವಿಮುಖರನ್ನಾಗಿಸು (೩). ನಿನ್ನನ್ನು ತಪ್ಪಾಗಿ ಗ್ರಹಿಸಿ ಕೋಪ ತರಿಸಲಾರೆವು; ನಿನ್ನನ್ನು ಕೆಟ್ಟದ್ದಾಗಿ ಸ್ತುತಿಸುವುದಾಗಲಿ ಬೇರೆಯವರೊಡನೆ ಜೊತೆಮಾಡಿ ಸ್ತುತಿಸುವುದಾಗಲಿ ಮಾಡೆವು. ನಮ್ಮ ಮಕ್ಕಳನ್ನು ನಿನ್ನ ಮದ್ದುಗಳಿಂದ ಪೋಷಿಸು; ಮದ್ದು ನೀಡುವವರಲ್ಲಿ ನೀನು ಅತಿಶ್ರೇಷ್ಠನೆಂದು ಕೇಳಿ ತಿಳಿದಿದ್ದೇನೆ (೪ : ಮಾ ತ್ವಾ ರುದ್ರ ಚುಕ್ರುಧಾಮಾ ನಮೋಭಿರ್ಮಾ ದುಷ್ಟುತೀ ವೃಷಭ ಮಾ ಸಹೂತೀ। ಉನ್ನೋ ವೀರಾನ್ ಅರ್ಪಯ ಭೇಷಜೇಭಿಃ ಭಿಷಕ್ತಮಂ ತ್ವಾ ಭಿಷಜಾಂ ಶೃಣೋಮಿ॥). ಯಾರು ರುದ್ರನನ್ನು ತುಷ್ಟೀಕರಿಸುತ್ತಾರೋ ಅವರು ಅವನನ್ನು ಇತರ ದೇವತೆಗಳಿಂದ ಭಿನ್ನೈಸುತ್ತಾರೆ. ಮೃದು ಉದರ ಹೊಂದಿರುವ ಅವನನ್ನು ಸುಲಭವಾಗಿ ತಣಿಸಬಹುದು; ಅವನು ಸುಂದರಾಂಗ. ಅವನು ನಮ್ಮನ್ನು ಎಳೆದೊಯ್ಯದಿರಲಿ (೫). (ಆರನೆಯ ಮಂತ್ರದಲ್ಲಿ ಇದೇ ಭಾವವನ್ನು ಮತ್ತೆ ಒತ್ತಿ ಹೇಳಲಾಗಿದೆ. ತಾಪಕ್ಕೆ ಗುರಿಯಾಗಿರುವವನಿಗೆ ನೆರಳು ನೀಡುವವನು ಅವನು : ಘೃಣೀವ ಛಾಯಾಂ ಅರಪಾಃ ಅಶೀಯ). ಹೇ ರುದ್ರ, ಸುಖವನ್ನು ನೀಡುವ ಔಷಧಿಗಳಿಂದ ತುಂಬಿದ ನಿನ್ನ ಆ ಕೈಗಳೆಲ್ಲಿ ? ಅವು ಎಲ್ಲರಿಗೂ ಮುದ ನೀಡುವಂಥವು. ನಮ್ಮ ಆಶಯಗಳನ್ನು ಪೂರೈಸಿ ಪಾಪಗಳನ್ನು ನಿವಾರಿಸುವ ಮಾನ್ಯ ನೀನು (೭ : ಕ್ವ ಸ್ಯ ತೇ ರುದ್ರ ಮೃಳಯಾಕುರ್ಹಸ್ತೋ ಯೋ ಅಸ್ತಿ ಭೇಷಜೋ ಜಲಾಷಃ। ಅವಭರ್ತಾ ರಪಸೋ ದೈವ್ಯಸ್ಯಾಭೀ ನು ಮಾ ವೃಷಭ ಚಕ್ಷಮೀಥಾಃ॥). ಆಶಯಗಳನ್ನು ಈಡೇರಿಸುವ ರುದ್ರನಿಗೆ ಅತಿ ಹೆಚ್ಚಿನ ಸ್ತುತಿಗಳನ್ನು ಹಾಡುತ್ತೇನೆ. ರುದ್ರನ ತೈಜಸ ಹೆಸರನ್ನು ನೆನೆಯುವೆ, ಆ ತೇಜಸ್ಸು ನನ್ನ ಮಲವನ್ನೆಲ್ಲಾ ತೊಳೆದುಹಾಕುತ್ತದೆ (೮ : ಪ್ರ ಬಭ್ರವೇ ವೃಷಭಾಯ ಶ್ವಿತೀಚೇ ಮಹೋ ಮಹೀಂ ಸುಷ್ಟುತಿಂ ಈರಯಾಮಿ। ನಮಸ್ಯಾ ಕಲ್ಮಲೀಕಿನಂ ನಮೋಭಿಃ ಗೃಣೀಮಸಿ ತ್ವೇಷಂ ರುದ್ರಸ್ಯ ನಾಮ॥). ಅವನ ದೃಢವಾದ ಅಂಗಗಳಿಂದ ಬಹುರೂಪಿ ರುದ್ರನು ಬೆಳಕಿನ ಕಿರಣಗಳಿಂದ ಶೋಭಿಸುತ್ತಾನೆ. ... (೯. ಬೆಳಕು ಮತ್ತು ಕತ್ತಲೆ ಎಂಬುವು ಜೀವ ಮತ್ತು ಸಾವುಗಳ ದ್ಯೋತಕಗಳೆಂಬ ಪ್ರಯೋಗವನ್ನು ಇಲ್ಲಿ ಗಮನಿಸಬೇಕು. ರುದ್ರನ ಜ್ವಲಂತ ತೇಜಸ್ಸು ಅವನ ವೈದ್ಯಕೀಯ ಶಕ್ತಿಯಾಗಿ ಪ್ರವಹಿಸುತ್ತದೆ. ಆ ಶಕ್ತಿಯು ಅವನಲ್ಲಿ ಎಂದೂ ಕುಂದುವುದಿಲ್ಲವೆಂಬ ಮಾತನ್ನು ಈ ಮಂತ್ರದಲ್ಲಿ ಕಾಣಬಹುದು. ಅವನ ಅಂಗಗಳು ಸ್ಥಿರವಾದಂಥವು; ಅವನು 'ಸ್ಥಿರೇಭಿರಂಗೈಃ ಪುರುರೂಪಃ' ಆಗಿರುವುದರಿಂದ ಕ್ಷೇಮವನ್ನು ಕಾಯುತ್ತಾನೆ. ಶಿವನು ವಿಶ್ವದ ಲಯಕ್ಕೆ ಕಾರಣನಾಗುವಂಥವನು ಎಂಬುದು ಋಗ್ವೇದದ ಉತ್ತರ ಕಾಲದಲ್ಲಿ ಮೂಡಿದ ಪುರಾಣ. ಋಗ್ವೇದದ ರುದ್ರನಾದರೋ ಶಕ್ತಿ ಮತ್ತು ಆರೋಗ್ಯ ನೀಡುವಂಥವನು). ರುದ್ರನಷ್ಟು ಬಲಿಷ್ಠನೂ ಓಜೋಯುಕ್ತನೂ ಬೇರೊಬ್ಬನಿಲ್ಲ; ಅವನ (ಭೈಷಜ್ಯ) ಆಯುಧ ಅಷ್ಟು ಪ್ರಕರ್ಷವಾದ್ದು. ಹಾಗಾಗಿ ಅವನು ಜಗದ್ರಕ್ಷಕ (೧೦: ಅರ್ಹನ್ ಬಿಭರ್ಷಿ ಸಾಯಕಾನಿ ಧನ್ವಾರ್ಹನ್ನಿಷ್ಕಂ ಯಜತಂ ವಿಶ್ವರೂಪಂ। ಅರ್ಹನ್ನಿದಂ ದಯಸೇ ವಿಶ್ವಮಬ್ವಂ ನ ವಾ ಓಜೀಯೋ ರುದ್ರ ತ್ವದಸ್ತಿ॥). ಆದ್ದರಿಂದ ನಿತ್ಯನೂತನನಾದ, ಯುವಕನೂ ಖ್ಯಾತನಾಮನೂ ಆದ ರುದ್ರನನ್ನು ಸ್ತುತಿಸಿ. ಎಲೈ ರುದ್ರ, ನಿನ್ನ ಭೈಷಜ್ಯ ಸೇನೆಯು ನಮ್ಮನ್ನು ಕಾಯಲಿ (೧೧ : ಸ್ತುಹಿ ಶ್ರುತಂ ಗರ್ತಸದಂ ಯುವಾನಂ ಮೃಗಂ ನ ಭೀಮಂ ಉಪಹತ್ನುಮುಗ್ರಂ। ಮೃಳಾ ಜರಿತ್ರೇ ರುದ್ರ ಸ್ತವಾನಃ ಅನ್ಯಂ ತೇ ಅಸ್ಮತ್ ನಿ ವಪಂತು ಸೇನಾಃ॥). ತಂದೆಗೆ ನಮಿಸಿ ಶುಭವನ್ನು ಪಡೆಯುವಂತೆ ರುದ್ರನಿಗೆ ನಮಿಸಿ ಸರ್ವಸ್ವವನ್ನೂ, ವಿಶೇಷವಾಗಿ ರೋಗನಿವಾರಕ ಭೇಷಜವನ್ನೂ, ಪಡೆಯುತ್ತೇನೆ (೧೨). ಮರುತ್ತುಗಳ ಬಳಿ ಯಾವ ಶ್ರೇಷ್ಠ ಔಷಧಿಗಳಿವೆಯೋ, ಯಾವುವು ಮರುತ್ತುಗಳಿಗೆ ಸುಖವನ್ನು ನೀಡುತ್ತವೆಯೋ, ಯಾವ ಔಷಧಿಗಳನ್ನು ಆದಿಕಾಲದಿಂದ ಮನುಜರು ಅಪೇಕ್ಷಿಸುತ್ತಾ ಬಂದಿದ್ದಾರೋ, ಅಂಥವನ್ನು ರುದ್ರನಿಂದ ಪಡೆಯಲು ಆಶಿಸುತ್ತೇನೆ (೧೩ : ಯಾ ವೋ ಭೇಷಜಾ ಮರುತಃ ಶುಚೀನಿ ಯಾ ಶಂತಮಾ ವೃಷಣೋ ಯಾ ಮಯೋಭು। ಯಾನಿ

ಮನುರವೃಣೀತಾ ಪಿತಾ ನಃ ತಾ ಶಂ ಚ ಯೋಶ್ಚ ರುದ್ರಸ್ಯ ವಶ್ಮಿ॥ – ಋಗ್ವೇದದಲ್ಲಿ 'ವೃಷಣಃ' ಎಂಬ ಪದವು ದೇವತೆಗಳ ಗುಣವಾಚಕವಾಗಿ ಅನೇಕ ಬಾರಿ ಬರುತ್ತದೆ. 'ಆಶಯಗಳನ್ನು ಪೂರೈಸುವವರು' ಎಂಬುದು ಅದರ ಸಾಮಾನ್ಯಾರ್ಥ. ಉತ್ತರೋತ್ತರ ಆ ಪದಕ್ಕೆ ಬೇರೆ ಅರ್ಥವು ಕೂಡಿಕೊಂಡಿದೆ. ನಂತರದ ಆ ಅರ್ಥವು ಋಗ್ವೇದದಲ್ಲಿಲ್ಲ). ರುದ್ರನ ಕಾಂತಿಯುತ ಆಯುಧವಾದ ಭೇಷಜವು ನಮ್ಮನ್ನಾವರಿಸಲಿ, ನಮ್ಮ ದುರ್ಮತಿಯು ತೊಲಗಲಿ. ನನ್ನ ಮಕ್ಕಳು–ಮೊಮ್ಮಕ್ಕಳು ರುದ್ರನ ಪರಿಣಾಮಕಾರಿ ಸಾಧನಗಳಿಂದ ರಕ್ಷಿಸಲ್ಪಡಲಿ (೧೪). ಇಂತಹ ಮಹಾಮಹಿಮನಾದ ರುದ್ರನೇ, ನೀನು ಎಲ್ಲವನ್ನೂ ತಿಳಿದವನು, ನೀನು ಕೋಪಗೊಳ್ಳುವುದಿಲ್ಲ – ಹಿಂಸಿಸುವುದಿಲ್ಲ. ನಮ್ಮ ಕೂಗಿಗೆ ಓಗೊಡು. ನಾವು ನಿನ್ನನ್ನು ಸದಾ ಸ್ತುತಿಸುತ್ತೇವೆ (೧೫: ಏವಾ ಬಭ್ರೋ ವೃಷಭ ಚೇಕಿತಾನ ಯಥಾ ದೇವ ನ ಹೃಣೀಷೇ ನ ಹಂಸಿ। ಹವನಶ್ರುತ್ ನಃ ರುದ್ರೇಹ ಬೋಧಿ ಬೃಹದ್ವದೇಮ ವಿದಥೇ ಸುವೀರಾಃ॥).

– ಇಡೀ ಸೂಕ್ತವನ್ನು ಹೀಗೆ ಪರಿಚಯಿಸಿ ಕೊಂಡಿದ್ದು ಒಂದು ಉದ್ದೇಶದಿಂದ: (ಅ) ಋಗ್ವೇದ ಸೂಕ್ತಗಳ ಸಾಧಾರಣ ಶೈಲಿ ಮತ್ತು ಆಶಯವನ್ನು ತಿಳಿಯುವುದು; (ಆ) ಋಗ್ವೇದದ ಕವಿಗಳ ದೈನ್ಯ ಭಾವವನ್ನು ಚೆನ್ನಾಗಿ ಮನದಟ್ಟು ಮಾಡಿಕೊಳ್ಳುವುದು; ಮತ್ತು (ಇ) ರಕ್ಷಣೆಗಾಗಿ ಮತ್ತು ಪೋಷಣೆಗಾಗಿ ಅವರು ಎಷ್ಟು ತಹತಹಿಸುತ್ತಿದ್ದರೆಂದು ತಿಳಿಯುವುದು. ತಮ್ಮ ಆಶಯಗಳಲ್ಲಿ ಮಕ್ಕಳನ್ನು ಹೊಂದುವುದೂ ಸೇರಿದೆ; "ಬೃಹದ್ವದೇಮ ವಿದಥೇ ಸುವೀರಾಃ" ಎಂಬ ಸಾಲು ಋಗ್ವೇದದಲ್ಲಿ ಹಲವು ಬಾರಿ ವ್ಯಕ್ತವಾಗಿದೆ; ಅಲ್ಲಿ ನೆಮ್ಮದಿ ಮತ್ತು ಸಂತಾನ, ಎರಡರ ಅಪೇಕ್ಷೆಯೂ ಇದೆ. ನಿಗೂಢವಾದ ಏನನ್ನೋ ಹೇಳಿದರೆ ಮಾತ್ರ ಅದು ಕಾವ್ಯವಾಗುತ್ತದೆಂದು ಭಾವಿಸುವುದಾಗಲಿ, ಋಗ್ವೇದದಲ್ಲಿ ಅಂತಹ ನಿಗೂಢತೆಯು ಸಾಂದ್ರವಾಗಿ ತುಂಬಿದೆಯೆಂದಾಗಲಿ, ಭಾವಿಸುವ ಅವಶ್ಯಕತೆ ಇಲ್ಲ. ಋಗ್ವೇದದ ಕವಿಯ ಆರ್ದ್ರತೆಯೇ ಕಾವ್ಯ ಲಕ್ಷಣವಾಗಿ ರಂಜಿಸುತ್ತದೆ.

ಮುಂದೆ ರುದ್ರನನ್ನು ಕುರಿತ ಇನ್ನೊಂದು ಸೂಕ್ತವನ್ನು (೧.೧೧೪) ಸಂಕ್ಷಿಪ್ತವಾಗಿ ಪರಿಚಯಿಸಿ ಕೊಳ್ಳೋಣ: ಅದು ಕುತ್ಸನು ರಚಿಸಿದ್ದೆಂದು ಹೇಳಲಾಗಿದೆ. ಅದರಲ್ಲಿ ಮೊದಲಿಗೆ ಎರಡು ಮತ್ತು ನಾಲ್ಕು ಕಾಲುಗಳುಳ್ಳ ಎಲ್ಲ ಜೀವಿಗಳೂ ಆರೋಗ್ಯ ದಿಂದಿದ್ದು ವರ್ಧಿಸುತ್ತಿರುವಂತೆ ಮಾಡಲು ರುದ್ರನನ್ನು ಸ್ತುತಿಸಲಾಗಿದೆ (೧.೧೧೪.೧: ಯಥಾ ಶಂ ಅಸತ್ ದ್ವಿಪದೇ ಚತುಷ್ಪದೇ ವಿಶ್ವಂ ಪುಷ್ಟಂ ಗ್ರಾಮೇ ಅಸ್ಮಿನ್ನ ನಾತುರಂ॥). 'ಅಸತ್' ಎಂಬುದು ತತ್ತ್ವಶಾಸ್ತ್ರದಲ್ಲಿ ಹೊಂದುವ ಅರ್ಥವನ್ನು ಇಲ್ಲಿ ಹೊಂದಿಲ್ಲ. ಅಲ್ಲಿ ಅದು ನಾಮಪದ, ಆದರೆ ಇಲ್ಲಿ ಕ್ರಿಯಾಪದ. 'ಆಗಲಿ' ಎಂಬುದು ಅದರರ್ಥ. ಗ್ರಾಮದಲ್ಲಿರುವ ಮನುಷ್ಯ ಮತ್ತು ಪ್ರಾಣಿಗಳು ದಷ್ಟಪುಷ್ಟವಾಗಿ ಮತ್ತು ರೋಗ ಮುಕ್ತವಾಗಿ ಇರಲು ರುದ್ರನ ಅಸಾಧಾರಣವಾದ ಭೈಷಜ್ಯದ ಅವಶ್ಯಕತೆ ಇದೆ. ತನಗೆ ಅಗತ್ಯವಾದ ಆರೋಗ್ಯವನ್ನು ಕಾಪಾಡಿಕೊಳ್ಳಲು ಮಾನವನು ಸುತ್ತಣ ಪ್ರಪಂಚದಲ್ಲಿ ದೊರಕುವ ಸಾಮಗ್ರಿಗಳನ್ನು ಆಶ್ರಯಿಸಿ ರೋಗವನ್ನು ಗುಣಪಡಿಸಿಕೊಳ್ಳುವ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುತ್ತಾ ಹೋಗುತ್ತಾನೆ. ಆ ಸಾಮರ್ಥ್ಯದ ಪ್ರತೀಕವಾಗಿ ರುದ್ರ, ಅಶ್ವಿನೀ ದೇವತೆಗಳು ಹಾಗೂ ಇನ್ನಿತರ ದೇವತೆಗಳು ಇರುತ್ತಾರೆ. ಆರೋಗ್ಯವನ್ನು ಗುಣಪಡಿಸುವುದು ದೇವತೆಗಳ ಸಾಮರ್ಥ್ಯವೆಂದು ಬಗೆದು ಮಾನವನು ತನ್ನಲ್ಲಿ ಆ ಸಾಮರ್ಥ್ಯವನ್ನು ಅಂಕುರಿಸಿಕೊಳ್ಳುವುದು ಮಾನವ ಜನಾಂಗದ ಇತಿಹಾಸದಲ್ಲಿ ಪ್ರಸಿದ್ಧವಾಗಿದೆ. ವಿವಿಧ ಕಾಲಘಟ್ಟಗಳಲ್ಲಿ ಎಲ್ಲ ಜನಾಂಗಗಳೂ ಒಬ್ಬ ಆರೋಗ್ಯ ದೇವತೆಯನ್ನು ಕಲ್ಪಿಸಿಕೊಂಡಿರುವುದು ಸುವಿದಿತ. ನಮ್ಮಲ್ಲಿ ರುದ್ರ, ಮತ್ತು ಅವನಿಗಿಂತಲೂ ವಿಶೇಷವಾಗಿ ಅಶ್ವಿನೀ ದೇವತೆಗಳು, ವೈದ್ಯಕೀಯವನ್ನು ಪ್ರತಿನಿಧಿಸುತ್ತಾರೆ. ಪ್ರಸ್ತುತ ಮಂತ್ರದಲ್ಲಿ "ಶಂ" ಎಂಬುದು 'ಶುಭ' ಎಂಬುದಕ್ಕಿಂತಲೂ ಹೆಚ್ಚಾಗಿ 'ಗುಣಪಡಿಸಬಹುದಾದ ರೋಗಗಳ ಉಪಶಮನ' ಎಂಬರ್ಥವನ್ನು ಹೊಂದಿದೆಯೆಂದು ಸಾಯಣ ವ್ಯಾಖ್ಯಾನಿಸಿದ್ದಾನೆ. ಅದಕ್ಕೆ ಅವನಿಗಿರುವ ಆಧಾರ ವೆಂದರೆ 'ಚರಕ ಸಂಹಿತೆ.' ಆ ಗ್ರಂಥದಲ್ಲಿ ರೋಗಗಳನ್ನು ಗುಣಪಡಿಸಬಹುದಾದಂಥವು ಮತ್ತು ಗುಣಪಡಿಸಲಾಗದಂಥವು ಎಂದು ಎರಡು ಭಾಗ ಗಳಾಗಿ ಪ್ರತ್ಯೇಕಿಸಲಾಗಿದೆ. ಪ್ರಸ್ತುತ ಮಂತ್ರದಲ್ಲಿ 'ಅನಾತುರಂ' ಎಂಬ ಶಬ್ದವು 'ಅನಾರೋಗ್ಯರಹಿತ' ಎಂಬರ್ಥದಲ್ಲಿ ಪ್ರಯೋಗವಾಗಿದೆ.

ಸಮಷ್ಟಿಯ ಹಿತದ ಕಾಳಜಿಯು ಸ್ಪಷ್ಟವಾಗಿ ನಿರೂಪಿತವಾಗಿರುವುದು ಇಲ್ಲಿ ಗಮನಾರ್ಹ. ಎರಡನೆಯ ಮಂತ್ರದಲ್ಲೂ ಇದೇ ಭಾವವನ್ನು ಪ್ರಕಟಿಸಲಾಗಿದೆ: "ಎಲೈ ರುದ್ರನೆ, ನಮಗೆ ಸುಖವನ್ನು ನೀಡು, ನಾವು ನಿನ್ನನ್ನು ನಮಿಸುತ್ತೇವೆ. ನಮ್ಮ ಭಯದ ನಿವಾರಣೆ ಮತ್ತು ಆರೋಗ್ಯ ರಕ್ಷಣೆಗೆ ನಿನ್ನನ್ನು ಆಶ್ರಯಿಸುತ್ತೇವೆ." ಐದನೆಯ ಮಂತ್ರದಲ್ಲಿ ರುದ್ರನ ಭೈಷಜ್ಯದ ಪ್ರಸ್ತಾಪವು ಮತ್ತೆ ಬಂದಿದೆ: "ನಿನ್ನ ಕೈಯಲ್ಲಿ ಭೈಷಜ್ಯಗಳನ್ನು (ಅಂದರೆ, ಮೂಲಿಕೆ ಗಳನ್ನು) ಹಿಡಿದು ಬಾ, ನಮಗೆ ವಸತಿ ಕಲ್ಪಿಸು, ಸುಖ ಕೊಡು" (೧.೧೧೪.೫: ಹಸ್ತೇ ಬಿಭ್ರತ್ ಭೇಷಜಾ ವಾರ್ಯಾಣಿ ಶರ್ಮ ವರ್ಮ ಚ್ಛರ್ದಿಃ ಅಸ್ಮಭ್ಯಂ ಯಂಸತ್॥). ಏಳನೆಯ ಮಂತ್ರದಲ್ಲಿ ಮುದುಕರು – ಮಕ್ಕಳು – ಯುವಕರು – ಗರ್ಭದಲ್ಲಿರುವವರು – ತಂದೆ–ತಾಯಿ, ಹೀಗೆ ಎಲ್ಲರನ್ನೂ ಕಾಪಾಡಬೇಕೆಂದು ರುದ್ರನಲ್ಲಿ ಮೊರೆಯಿಡಲಾಗಿದೆ. ಸ್ವಾರಸ್ಯವೆಂದರೆ, ಈ ಎಲ್ಲರೊಡನೆ ನಮಗೆ ಪ್ರಿಯವಾದ ಶರೀರಗಳನ್ನು ಸಹ ಹಿಂಸಿಸಬಾರದೆಂಬ ಆಶಯವು ಇಲ್ಲಿ ವ್ಯಕ್ತವಾಗಿದೆ (೧.೧೧೪.೭: ಮಾ ನೋ ಮಹಾಂತಂ ಉತ ಮಾ ನೋ ಅರ್ಭಕಂ ಮಾ ನ ಉಕ್ಷಂತಂ ಉತ ಮಾ ನ ಉಕ್ಷಿತಂ। ಮಾ ನೋ ವಧೀಃ ಪಿತರಂ ಮಾ ಉತ ಮಾತರಂ ಮಾ ನಃ ಪ್ರಿಯಾಸ್ತನ್ವೋ ರುದ್ರ ರೀರಿಷಃ॥). ನೆಂಟರಿಷ್ಟರನ್ನು ಹೆಸರಿಸಿದ ನಂತರ ಮುಂದಿನ ಮಂತ್ರದಲ್ಲಿ ಮಕ್ಕಳು – ಮೊಮ್ಮಕ್ಕಳ ಜೊತೆ ಮಾನವರನ್ನೆಲ್ಲಾ ಪೋಷಿಸಬೇಕೆಂಬ ಕೇಳಿಕೆ ಇದೆ; ಆದರೆ ಅವರೆಲ್ಲರೊಡನೆ ಹಸುಗಳು ಮತ್ತು ಕುದುರೆಗಳನ್ನೂ ಸೇರಿಸಲಾಗಿದೆ. ಕಡೆಗೆ, "ನಾವು ಸದಾ ನಿನ್ನನ್ನು ಸ್ವಾಗತಿಸುತ್ತೇವೆ" ಎನ್ನಲಾಗಿದೆ (೧.೧೧೪.೮: ಮಾ ನಸ್ತೋಕೇ ತನಯೇ ಮಾ ನ ಆಯೌ ಮಾ ನೋ ಗೋಷು ಮಾ ನೋ ಅಶ್ವೇಷು ರೀರಿಷಃ। ವೀರಾನ್ಮಾ ನೋ ರುದ್ರ ಭಾಮಿತೋ

ವಧೀಃ ಹವಿಷ್ಮಂತಃ ಸದಮಿತ್ತ್ವಾ ಹವಾಮಹೇ ॥). ಈ ಮಂತ್ರದ ಪ್ರಯೋಗವು ಗಮನಾರ್ಹವಾಗಿದೆ. ಯಾವ ಕಾಲದಲ್ಲಿ ಈ ಪ್ರಯೋಗವು ಆರಂಭಗೊಂಡಿತೋ ತಿಳಿಯದು, ಆದರೆ ಬ್ರಾಹ್ಮಣ ಸಮುದಾಯದವರೆನ್ನಲಾದ ಕೆಲವರು ಮೈಯ ವಿವಿಧ ಭಾಗಗಳಿಗೆ ವಿಭೂತಿ ಹಚ್ಚಿಕೊಳ್ಳುವಾಗ ಈ ಮಂತ್ರವನ್ನು ಹೇಳಿಕೊಳ್ಳುವ ಆಚರಣೆ ಇದೆ. ವಿಭೂತಿ ಹಚ್ಚಿಕೊಳ್ಳದ ಸಂಪ್ರದಾಯದವರು ಇದನ್ನು ಯಾವ ಆಚರಣೆಯ ಸಂದರ್ಭದಲ್ಲಿ ಹೇಳಿಕೊಳ್ಳುತ್ತಾರೋ ತಿಳಿಯದು. ಈ ಮಂತ್ರಕ್ಕೂ ವಿಭೂತಿಗೂ ಸಂಬಂಧ ಕಲ್ಪಿಸಿರುವುದು ಏಕೆ ? ರುದ್ರನು ನಮ್ಮನ್ನು ಕಾಪಾಡಬೇಕು; ಉತ್ತರ ಕಾಲದಲ್ಲಿ ರುದ್ರನು ಶಿವನಾದ; ಶಿವನಿಗೂ ಬೂದಿ–ವಿಭೂತಿಗಳಿಗೂ ಸಂಬಂಧವಿದೆ; ಶಿವಭಕ್ತನು ವಿಭೂತಿ ಹಚ್ಚಿಕೊಳ್ಳುತ್ತಾನೆ; ಅದರಿಂದಾಗಿ ಅವನಿಗೆ ರುದ್ರನ ಪೋಷಣೆ ಲಭ್ಯವಾಗುತ್ತದೆ, ಎಂಬ ಲಂಬಿತಾರ್ಥವನ್ನು ಊಹಿಸಿಕೊಳ್ಳ ಬಹುದೇನೊ ! ಸದ್ಯದಲ್ಲಿ ನಮಗೆ ಮುಖ್ಯವಾದ ಅಂಶವೆಂದರೆ ರುದ್ರನು ತನ್ನ ಭೈಷಜ್ಯ ಗಳಿಂದ ಜೀವಗಳನ್ನು ಸಂರಕ್ಷಿಸುತ್ತಾನೆ, ಎಂಬುದು. ಸೂಕ್ತದಲ್ಲಿ ಇನ್ನೂ ಮೂರು ಮಂತ್ರಗಳಿವೆ, ಆದರೆ ಅವನ್ನಿಲ್ಲಿ ಪ್ರಸ್ತುತಪಡಿಸಲಾಗುತ್ತಿಲ್ಲ. – ಬದಲಾಗಿ ಮುಂದೆ ಭೈಷಜ್ಯವನ್ನು ಕುರಿತಾದ ಋಗ್ವೇದದ ಒಂದು ಸೂಕ್ತವನ್ನು ಪರಿಚಯಿಸಲಾಗುತ್ತದೆ. ಅದಕ್ಕೆ ಮುನ್ನ ೧.೧೧೪.೫ರಲ್ಲಿ ಬಂದ 'ಶರ್ಮ' ಶಬ್ದದ ಬಗ್ಗೆ ಇನ್ನಷ್ಟು ತಿಳಿಯೋಣ. ಮೂಲತಃ ರುದ್ರನಿಂದ ಪಡೆಯಬಹುದಾದ ರಕ್ಷಣೆಯು ಆರೋಗ್ಯ ಸಂಬಂಧಿಯಾದುದು, ಆದರೆ ಇಲ್ಲಿ *ಶರ್ಮ*, *ವರ್ಮ* ಮತ್ತು *ಛರ್ದಿ*ಗಳನ್ನೂ ಅಪೇಕ್ಷಿಸಲಾಗಿದೆ. *ವರ್ಮ* ಎಂದರೆ ಕವಚ, ಅಂಗಿ ಎಂದೂ, *ಛರ್ದಿಃ* ಎಂದರೆ ಮನೆ ಎಂದೂ ಅರ್ಥಗಳಿವೆ. (ಬೇರೆಯಂತೆ '*ಛರ್ದಿಃ*' ಎಂದರೆ ವಾಂತಿ, ಅನಾರೋಗ್ಯ, ಎಂಬರ್ಥಗಳಿವೆ). *ಶರ್ಮ* ಎಂದರೂ ಮನೆ ಅಥವಾ ವಸತಿ ಎಂಬರ್ಥ ಇದೆ. ಹಾಗಿದ್ದರೆ *ಶರ್ಮ* ಮತ್ತು *ಛರ್ದಿಃ* ಎರಡನ್ನೂ ಒಂದೇ ಮಂತ್ರದಲ್ಲಿ ಬಯಸಿದಾಗ ಅವಕ್ಕೆ ಒಂದೇ ಅರ್ಥವಿರುವುದು ಅಸಂಭವವಲ್ಲವೆ ? ಹಾಗಿದ್ದರೆ, ಏನಿದು '*ಶರ್ಮ*', ಎಂಬ ಪ್ರಶ್ನೆಯು ಅಸಂಗತವಲ್ಲ.

ಪ್ರಸ್ತುತ ಲೇಖಕನು "ಋಗ್ವೇದದಲ್ಲಿ ಶರ್ಮನ್ ಎಂಬ ಪದ" ಎಂಬ ಶೀರ್ಷಿಕೆಯ ಪ್ರಬಂಧವನ್ನು ೧೯೬೬ರಲ್ಲಿ ಅಲಿಗಢದಲ್ಲಿ ಜರುಗಿದ್ದ ಅಖಿಲ ಭಾರತ ಪ್ರಾಚ್ಯವಿದ್ಯಾ ಸಮ್ಮೇಲನದಲ್ಲಿ ಮಂಡಿಸಿದ್ದು, ಅದು ಸಮ್ಮೇಲನದ ನಡಾವಳಿಗಳಲ್ಲಿ ೧೯೬೯ರಲ್ಲಿ ಪ್ರಕಟಗೊಂಡಿತ್ತು. ಪ್ರಬಂಧದ ಒಂದು ಭಾಗದಲ್ಲಿ ಸಾಯಣನು *ಶರ್ಮ* ಮತ್ತು *ವರ್ಮ* ಕುರಿತು ಹೇಳಿದ್ದನ್ನು ಉದ್ಧರಿಸಲಾಗಿತ್ತು. ಅವನ ಪ್ರಕಾರ ಅವು 'ಆರೋಗ್ಯ ಲಕ್ಷಣವಾದ ಸುಖ' ಮತ್ತು 'ಆಯುಧಗಳ (ಹೊಡೆತದ) ನಿವಾರಕ ಕವಚ' ಎಂಬರ್ಥ ಹೊಂದಿವೆ. ಅಂದರೆ, ಕವಿಯು ಸುಖ, ರಕ್ಷಣಾ ಕವಚ ಮತ್ತು ವಸತಿ, ಈ ಮೂರನ್ನೂ ಪಡೆಯುವ ಆಶಯವನ್ನು ಇರಿಸಿ ಕೊಂಡಿದ್ದಾನೆ. ಅದನ್ನು ಹಾಗೆ ಅರ್ಥೈಸಿಕೊಂಡ ನಂತರವೂ '*ಶರ್ಮನ್*' ಪದದ ವ್ಯಾಪ್ತಿಯು ಪೂರ್ಣಗೊಳ್ಳುವುದಿಲ್ಲ. ಏಕೆಂದರೆ, ಋಗ್ವೇದದಲ್ಲಿ ಅದನ್ನು ಅನೇಕಾರ್ಥಗಳಲ್ಲಿ ಬಳಸಲಾಗಿದೆ. ಅದರ ವ್ಯುತ್ಪತ್ತಿಯನ್ನು ಹೇಳುವಾಗ "ಹಿಂಸೆಯ ಹಿಮ್ಮೆಟ್ಟಿಸುವಿಕೆ" ಅಥವಾ "ಹಿಂಸೆಯಿಂದ ಪಾರಾಗುವಿಕೆ" ಎಂಬುದು ಅದರರ್ಥವೆಂದು ನಿರ್ವಚಿಸುತ್ತಾರೆ. ಆನಂದ, ಶಾತ, ಸುಖ, ಇವೆಲ್ಲಾ *ಶರ್ಮ* ಪದದ ಸಮಾನಾರ್ಥ ಪದಗಳೆಂದು ಅಮರಕೋಶವು ಹೇಳಿದೆ. ರಕ್ಷಣೆ, ಮನೆ, ಇವೆಲ್ಲಾ ಅದರ ವಿಸ್ತೃತ ಅರ್ಥಗಳು. ಲಿಥ್ವೇನಿಯಾ ಭಾಷೆಯಲ್ಲಿ ಮನೆ ಎಂಬುದಕ್ಕೆ *ಶ್ರೆತ್ಮಸ್* ಎಂಬ ಪದವಿದೆಯಂತೆ. ಸಂಸ್ಕೃತ ಮತ್ತು ಲಿಥ್ವೇನಿಯಾ ಎರಡೂ ಇಂಡೋ–ಯೂರೋಪಿಯನ್ ಭಾಷೆಗಳಾದ್ದರಿಂದ ಈ ರೀತಿಯ ಹೋಲಿಕೆಯ ಪದಗಳು ಹೇರಳವಾಗಿರುತ್ತವೆ. ರಕ್ಷಣೆ, ಮನೆ, ಸುಖ, ಇವೆಲ್ಲಾ ಒಂದರ್ಥದಲ್ಲಿ ಪೂರಕವಾದುವೆಂಬುದು ಸ್ಪಷ್ಟವಾಗಿದೆ. ಅರವಿಂದ ಘೋಷ್ ಪಂಥದವರು ಈ ಪದದ ಅರ್ಥವನ್ನು ಹಿಗ್ಗಿಸಿ ಅದು 'ಶಾಂತಿಯ ತಾಣ' ಅಥವಾ 'ದಿವ್ಯ ಗೃಹ' ಎಂಬುದನ್ನು ಸೂಚಿಸುತ್ತದೆಯೆನ್ನುತ್ತಾರೆ. ಕಪಾಲಿ ಶಾಸ್ತ್ರಿ ಹೇಳುವಂತೆ, ಅದು '*ಶರ್ಮ ಶರಣಂ ದಿವ್ಯಂ ಗೃಹಂ*' (ಋ.೧.೨೧.೬). ಮುಖ್ಯಾಂಶವೇನೆಂದರೆ ಸುಖವು ಕೇವಲ ಭೌತಿಕವಾದುದಲ್ಲ, ಅದಕ್ಕೆ ಬೇರೊಂದು ಆಯಾಮವೂ ಉಂಟು, ಅದು ಮಾನಸಿಕವಾದ್ದು, ನಿರಂತರ ಶಾಂತಿ ಭಾವನೆಯನ್ನು ಮೂಡಿಸುವಂಥದು. ದೇಹಾರೋಗ್ಯದಿಂದ ಮುಂದೆ ಹೋಗಿ ವೇದದ ಕವಿಯು ತುಮುಲರಹಿತವಾದ ಮಾನಸಿಕ ಶಾಂತಿಯನ್ನು ಸಹ ಅಪೇಕ್ಷಿಸುತ್ತಾನೆ. ಕಾಲಿದಾಸನ ಮಾತುಗಳಲ್ಲಿ ಹೇಳುವುದಾದರೆ, ಶರೀರದ ಧರ್ಮವನ್ನು ಸಾಧಿಸುವುದು ಧರ್ಮದ ಸಾಧನೆಯ



ಪ್ರಥಮ ಭಾಗ; ಅದನ್ನು ನಿರ್ಲಕ್ಷಿಸಿದರೆ ಬೇರಿನ್ನಾವುದರ ಸಾಧನೆಯೂ ಸಾಧ್ಯವಾಗುವುದಿಲ್ಲ. ಅದಕ್ಕೇ ಅವನು ಹೇಳಿದ್ದು, "ಶರೀರಂ ಆದ್ಯಂ ಖಲು ಧರ್ಮಸಾಧನಂ" ಎಂದು. ಪಾರ್ವತಿಯು ಮೊದಲು ತನ್ನ ಆರೋಗ್ಯ ಕಾಪಾಡಿಕೊಂಡರೆ ತಾನೆ ಆಮೇಲೆ ತಪಸ್ಸಿನಿಂದ ಶಿವನನ್ನು ಪಡೆಯುವುದು ಸಾಧ್ಯ ! ಭೌತಿಕ ಇರವು ಋಗ್ವೇದದ ಕವಿಗೆ ಗೌಣವಲ್ಲ. ಅವನು ಯಾವ ಅಳುಕೂ ಇಲ್ಲದೆ 'ನಮಗೆ ಆರೋಗ್ಯ ಕೊಡು, ಆಹಾರ ಕೊಡು, ಮನೆ ಕೊಡು, ಮಕ್ಕಳು ಕೊಡು, ಗೋವು ಕೊಡು, ಬೇರೆ ಸಂಪತ್ತು ಕೊಡು' ಎಂದೆಲ್ಲಾ ಪದೇ ಪದೇ ತನ್ನ ಕವನಗಳಲ್ಲಿ ಕೇಳಿಕೊಳ್ಳುತ್ತಾನೆ. ಹಾಗೆ ಕೇಳಿಕೊಂಡರೆ ಅವನ ಕೆಲಸ ಮುಗಿಯುವುದಿಲ್ಲ, ಏಕೆಂದರೆ ಅವನ್ನೆಲ್ಲಾ ಪಡೆಯಲು ತಾನೇ ಶ್ರಮಿಸಬೇಕು. ಅದಕ್ಕಾಗಿ ಪರಿಸರ ಮತ್ತು ಪ್ರಕೃತಿಯ ಬಗೆಗಿನ ಅವನ ಕುತೂಹಲವು ಕ್ರಿಯಾತ್ಮಕ ಸ್ವರೂಪವನ್ನು ಪಡೆಯಬೇಕು. ಅಂತಹ ಬೆಳವಣಿಗೆಯ ಒಂದು ಸೊಗಸಾದ ಫಲವೆಂದರೆ ಪ್ರಕೃತಿಯ ಮಡಿಲಲ್ಲಿ ಮಾತ್ರವೇ ದಕ್ಕಬಹುದಾದಂತಹ ಸಸ್ಯಗಳ ಬೇರು, ಕಾಂಡ, ಪುಷ್ಪ, ಫಲ, ಮುಂತಾದುವನ್ನು ರೋಗ ಪರಿಹಾರಕ ಸಾಧನಗಳನ್ನಾಗಿ ಪರಿವರ್ತಿಸುವುದು. ಚರಕ ಸಂಹಿತೆಯಂತಹ ಶ್ರೇಷ್ಠ ವೈದ್ಯಕೀಯ ಗ್ರಂಥವು ಬರಬೇಕಾದರೆ ಅದಕ್ಕೆ ಮುಂಚೆ ಅದೆಷ್ಟು ತಲೆಮಾರಿನವರು ಶ್ರಮಿಸಿರಬೇಕು ! ಋಗ್ವೇದದ ಕವಿಯೂ ಅದಕ್ಕೆ ತನ್ನ ಕಾಣಿಕೆ ನೀಡಿರುತ್ತಾನೆ. ರುದ್ರ ನಾಗಲಿ, ಅಶ್ವಿನೀದೇವತೆಗಳಾಗಲಿ, ಜನಸಮುದಾಯದ ಆರೋಗ್ಯ ಕಾಪಾಡ ಬೇಕಾದರೆ ಋಗ್ವೇದದ ಕವಿ ಮತ್ತು ಅವನ ಸಹಜೀವಿಗಳು ನೂರಾರು ಮೂಲಿಕೆಗಳನ್ನು ಅರಸಬೇಕು, ಅವುಗಳ ಲಕ್ಷಣ ಹಾಗೂ ಪ್ರಯೋಜನಗಳನ್ನು ಪ್ರಾಯೋಗಿಕವಾಗಿ ತಿಳಿಯಬೇಕು. ಜೀವರಸಾಯನಶಾಸ್ತ್ರದ ಸಹಾಯವಿಲ್ಲದೆಯೇ ಅವರು ಪ್ರತಿಯೊಂದು ಮೂಲಿಕೆಯ ಲಕ್ಷಣಗಳನ್ನೂ ತಿಳಿದುಕೊಳ್ಳಬೇಕಾದರೆ ಅವರಿಗೆ ಅವರೇ ವೈದ್ಯರು. ಮೂಲಿಕೆಗಳನ್ನು ತಮ್ಮ ಮೇಲೆ ಅಥವಾ ಇತರರ ಮೇಲೆ ಪ್ರಯೋಗಿಸಿ ಅವುಗಳ ಸಾಧಕ–ಬಾಧಕಗಳನ್ನು ಖಚಿತಪಡಿಸಿಕೊಳ್ಳಬೇಕು. "ಪರೀಕ್ಷೆಗೆ ಈಡು ಮಾಡು – ತಪ್ಪನ್ನು ತಿದ್ದಿಕೊ" ಎಂಬ ವಿಧಾನವು ಅವರಿಗೆ ಅನಿವಾರ್ಯವಾದದ್ದು ಈ ಕಾರಣದಿಂದ. ವಿಜ್ಞಾನದ ಇತಿಹಾಸದಲ್ಲಿ ಈ ಹಂತದ ವಿಧಾನವನ್ನು 'ಟ್ರಯಲ್ ಅಂಡ್ ಎರರ್ ಮೆಥಡ್' ಎನ್ನುತ್ತಾರೆ. ಋಗ್ವೇದದ ಕಾಲದ ಜನಸಮುದಾಯದ ಸಾಹಸವು ಎಷ್ಟು ಅಪ್ರತಿಮ, ಮತ್ತು ಮೂಲಿಕೆಗಳೆಂದರೆ ಅವರಿಗೆ ಅದೆಷ್ಟು ಆದರವಿದೆ ಎಂಬುದನ್ನು ನಾವು ಅಂತರ್ಗತ ಮಾಡಿಕೊಳ್ಳಬೇಕಾದರೆ ಈ ಪ್ರಾಗೈತಿಹಾಸಿಕ ಅಂಶದ ಅರಿವಿರಬೇಕು. ಮೂಲಿಕೆಗಳನ್ನು ಅವರು "ಓಷಧಿಗಳು" ಎಂದು ಕರೆದಿದ್ದಾರೆ ಮತ್ತು ಓಷಧಿಗಳ ಬಗೆಗಿನ ಅವರ ಭಾವನೆಗಳು ಓತಪ್ರೋತವಾಗಿ ಹರಿದಿದೆ. ಅವನ್ನು ದೇವತೆಯ ಮಟ್ಟಕ್ಕೇರಿಸಿ ಅವುಗಳನ್ನು ಹಾಡಿ ಹೊಗಳಿರುವ ಋಗ್ವೇದದ ಸೂಕ್ತಗಳ ಪೈಕಿ ಒಂದನ್ನು ಪರಿಚಯಿಸಿಕೊಳ್ಳುವುದು ಈ ಕಾರಣದಿಂದ ಸೂಕ್ತವೆನಿಸುತ್ತದೆ. ಓಷಧಿಗಳನ್ನು 'ವನಸ್ಪತಿ' ಎಂದೂ ಕರೆದಿದ್ದಾರೆ; ಅಂದರೆ ಅವು ಪ್ರಕೃತಿಯಲ್ಲಿ ಒಡೆಯನ ಸ್ಥಾನದಲ್ಲಿವೆ; ಅವನ್ನು ಬಳಸಿ ರೋಗಿಯನ್ನು ಗುಣಪಡಿಸುವವನು

'ಭಿಷಕ್', ಅಂದರೆ ವೈದ್ಯ. ಇತಿಹಾಸ ಮತ್ತು ಕವಿತ್ವ, ಎರಡು ದೃಷ್ಟಿಗಳಿಂದಲೂ ಓಷಧಿಗಳು ಮಹತ್ವವನ್ನು ಪಡೆದಿವೆ. ಆ ಪೈಕಿ ಋಗ್ವೇದದ ೧೦ನೆಯ ಮಂಡಲದ ೯೭ನೆಯ ಸೂಕ್ತವನ್ನು ಪರಿಚಯಿಸಿ ಕೊಳ್ಳೋಣ. ಅದಕ್ಕೆ ಪೂರ್ವಭಾವಿಯಾಗಿ ಸಾಂಪ್ರದಾಯಿಕ ವ್ಯವಸ್ಥೆ, ವಿಚಾರ ಮತ್ತು ಆಚರಣೆಗಳನ್ನು ಕುರಿತಂತೆ ಸ್ಥೂಲವಾಗಿ ಒಂದೆರಡು ಅಂಶಗಳ ಮನನ ಮಾಡಿ ಕೊಳ್ಳೋಣ; ಮುಂದೆ ಅಶ್ವಿನೀದೇವತೆಗಳ ಸ್ಥಾನ ಮತ್ತು ಕೊಡುಗೆಗಳನ್ನು ತಿಳಿದು ಕೊಳ್ಳುವಾಗ ಬೇರಿನ್ನೆಷ್ಟೋ ಅಂಶಗಳತ್ತ ಗಮನ ಹರಿಸೋಣ.




ಧರ್ಮಶಾಸ್ತ್ರ ಗ್ರಂಥಗಳು ತಮ್ಮ ಆಧಾರವೆಂದು ಸಾಮಾನ್ಯವಾಗಿ ವೇದಗಳನ್ನು ಹೆಸರಿಸುತ್ತವೆ. ಧರ್ಮವನ್ನು ತಿಳಿದವರ ಆಚಾರ ಮತ್ತು ವೇದಗಳು, ಇವೆರಡೂ ತಾನು ನಿರೂಪಿಸುವ ನಿಯಮಗಳಿಗೆ ಆಧಾರವೆಂದು ಆಪಸ್ತಂಬನು ಹೇಳಿರುವುದು ಅಂತಹ ಒಂದು ಉದಾಹರಣೆ (ಧರ್ಮಸೂತ್ರ ೧.೧.೨-೩). "ತಿಳಿದವರ ಆಚರಣೆ" ಎಂದಾಗ 'ಏನನ್ನು ತಿಳಿದವರು' ಎಂಬ ಪ್ರಶ್ನೆಗೆ ಬಹುಶಃ "ವೇದಗಳನ್ನು ತಿಳಿದವರು" ಎಂಬ ಉತ್ತರ ಬರುತ್ತದೆ. ಆದರೆ ವೇದಗಳು ಅಂತಹ ನಿಯಮ ಗಳನ್ನೇನೂ ಹೇಳಿಲ್ಲ. ಮೂಲತಃ ವೇದಗಳ ಕಾಲದ ಬುಡಕಟ್ಟು ಸಮಾಜದಲ್ಲಿ ವರ್ಣ ವಿಭಜನೆ ಇರಲಿಲ್ಲ, ಆದರೆ ಧರ್ಮಶಾಸ್ತ್ರಗಳು ಅಂತಹ ವಿಭಜನೆಯು ವ್ಯಾಪಕವಾಗಿರುವ ಸಮಾಜದ ಬಗ್ಗೆ ಹೇಳುತ್ತವೆ. "ವೇದದ ಕಾಲದಲ್ಲಿ ಬ್ರಾಹ್ಮಣರು ಮಾಂಸವನ್ನು ತಿನ್ನುತ್ತಿರಲಿಲ್ಲ" ಎಂಬ ಮಾತನ್ನು ಕೆಲವರು ಹೇಳುತ್ತಿರುತ್ತಾರೆ. ಇದು ಅರ್ಥವಿಲ್ಲದ ಮಾತು, ಏಕೆಂದರೆ 'ಬ್ರಾಹ್ಮಣರು' ಎಂಬ ನಿರ್ದಿಷ್ಟ ವರ್ಣದವರು ಋಗ್ವೇದದ ಆದಿ ಭಾಗದಲ್ಲಿ ಇರಲೇ ಇಲ್ಲ. ಎರಡನೆಯದಾಗಿ, ಋಗ್ವೇದದ ಕಾಲದ ಜನ ಮಾಂಸವನ್ನು ಚೆನ್ನಾಗಿ ತಿನ್ನುತ್ತಿದ್ದರು. (ಆ ಬಗ್ಗೆ ಬೇರೊಂದು ಕಂತಿನಲ್ಲಿ ಚರ್ಚಿಸೋಣ).

ಇದನ್ನು ಪ್ರಸ್ತಾಪಿಸುತ್ತಿರುವುದು ವೈದ್ಯಕೀಯವು ಬೆಳೆದು ಬಂದುದರ ಹಿನ್ನೆಲೆಯಲ್ಲಿ, ಆದ್ದರಿಂದ ಅತ್ತ ಮತ್ತೆ ಹೊರಳೋಣ. ವರ್ಣ ವಿಭಜನೆಯು ಬಹಳ ಘನಿಷ್ಠವಾಗಿ ನೆಲೆಗೊಂಡ ನಂತರವೂ ವೈದ್ಯಕೀಯವು ಅದನ್ನು ಗಂಭೀರವಾಗಿ ಗಣನೆಗೆ ತೆಗೆದುಕೊಳ್ಳಲಿಲ್ಲ. ತನಗೆ ರೋಗಮುಕ್ತ ವ್ಯಕ್ತಿಯು ಮುಖ್ಯವೇ ಹೊರತು ಆ ವ್ಯಕ್ತಿಯ ವರ್ಣವು ಮುಖ್ಯವಲ್ಲವೆಂಬುದು ಅದರ ಗಟ್ಟಿ ನಿಲುವು. ಧರ್ಮಶಾಸ್ತ್ರಕಾರರು ತಮ್ಮ ವೈಯಕ್ತಿಕ ಇಚ್ಛೆಯನ್ನು ಪ್ರಕಟಿಸಿದರೋ ಅಥವಾ ಸಮಾಜದಲ್ಲಿ ಆಚರಣೆಯಲ್ಲಿದ್ದ ನಿಯಮಗಳನ್ನು ದಾಖಲಿಸಿದರೋ ಎಂಬ ಪ್ರಶ್ನೆ ಆಗಾಗ್ಗೆ ಚರ್ಚೆಗೆ ಬಂದಿದೆ. ಯಾವನೋ ಶಾಸ್ತ್ರಕಾರ ಹೇಳಿಬಿಟ್ಟರೆ ಇಡೀ ಸಮಾಜವು ಅವನ ಮಾತಿನಂತೆ ನಡೆದುಕೊಳ್ಳುವುದು ಅಶಕ್ಯ. ನಮಗೆ ನಾವೇ ಕೊಟ್ಟುಕೊಂಡಿರುವ ಸಂವಿಧಾನವನ್ನು ನಾವೆಷ್ಟು ನಿಷ್ಠೆಯಿಂದ ಪಾಲಿಸುತ್ತಿದ್ದೇವೆ ಎಂಬುದು ಅದಕ್ಕೆ ಒಂದು ದೃಷ್ಟಾಂತ. ಧರ್ಮಶಾಸ್ತ್ರಕಾರರು ವೈದ್ಯಕೀಯದ ಫಲವನ್ನು ಸ್ವೀಕರಿಸಲು ಹಿಂಜರಿಯಲಿಲ್ಲ, ಆದರೆ ವೈದ್ಯರನ್ನು ನಿಕೃಷ್ಟರೆಂದು ತೆಗಳಿ ಅವರನ್ನು ಕೆಂಗಣ್ಣಿನಿಂದ ದಿಟ್ಟಿಸಿ ನೋಡಿದರು ಎಂಬುದಂತೂ ನಿಜ. ವೈದ್ಯರ ವರ್ಣನಿರಪೇಕ್ಷ ಆಚರಣೆಗಳು ಅವರಿಗೆ ಇರಿಸುಮುರಿಸನ್ನು ಉಂಟು ಮಾಡಿದ್ದವು. ಆದ್ದರಿಂದ ಉಚ್ಚವರ್ಣದವರು ಸ್ವತಃ ವೈದ್ಯರಾಗಕೂಡದೆಂದೂ, ವೈದ್ಯರಿಂದ ಔಷಧಿಯನ್ನು ಬಿಟ್ಟು ಬೇರೆ ಯಾವ ಆಹಾರವನ್ನೂ ಸ್ವೀಕರಿಸಕೂಡದೆಂದೂ ಆಗ್ರಹಿಸಿದರು. ವೈದ್ಯರಿಗೆ ಹೆಣ್ಣು ಕೊಡಬಾರದು, ಕಾರ್ಯನಿಮಿತ್ತ ಅಲ್ಲದೆ ಅವರೊಂದಿಗೆ ಬೆರೆಯಬಾರದು, ಎಂಬಿತ್ಯಾದಿ ನಿರ್ದೇಶನಗಳನ್ನು ಅವರು ನೀಡಿದರು. (ಈಗಿನ ಸಂದರ್ಭಕ್ಕೆ ಇದನ್ನು ಹೋಲಿಸಿ ನೋಡಿದರೆ ಧರ್ಮಶಾಸ್ತ್ರಕಾರರ ನಿಯಮವನ್ನು ಕಟ್ಟುನಿಟ್ಟಾಗಿ ತಿರಸ್ಕರಿಸಿರುವುದು ನಮ್ಮ ವಾಸ್ತವ ಸ್ಥಿತಿ). ಯಾರು ಯಾರಿಂದ ಆಹಾರ ಸ್ವೀಕರಿಸಬಾರದೆಂಬ ಆಪಸ್ತಂಬನ ಪಟ್ಟಿಯಲ್ಲಿ ವೈದ್ಯನನ್ನು ಬೇಡ, ಜಾರೆ ಮತ್ತು ಷಂಡನ ಜೊತೆ ಇರಿಸಲಾಗಿದೆ (೧.೬.೧೯.೧೫)! ಗೌತಮ ಮತ್ತು ವಸಿಷ್ಠ ಎಂಬ ಹೆಸರು ಹೊತ್ತ ಬೇರೆ ಧರ್ಮಶಾಸ್ತ್ರಕಾರರೂ ಅಂಥದನ್ನೇ ಹೇಳಿದ್ದಾರೆ. ಮನು ಇನ್ನೂ ಒಂದು ಹೆಜ್ಜೆ ಮುಂದಿಟ್ಟು ಹೇಳುತ್ತಾನೆ (೪.೨೨೦), "ವೈದ್ಯನು ನೀಡುವ ಆಹಾರವು ವರ್ಜ್ಯ, ಅದು ಗಾಯದ ಕೀವಿನಂತೆ" (ಪೂಯಂ ಚಿಕಿತ್ಸಕಸ್ಯ ಅನ್ನಂ), ಎಂದು! ವೈದ್ಯನಿಂದ ಆಹಾರ ಪಡೆಯುವುದಷ್ಟೇ ಅಲ್ಲ, ಅವನಿಗೆ ಕೊಡುವುದೂ ಸೂಕ್ತವಲ್ಲವೆನ್ನುತ್ತಾನೆ ಮನು. "ಅವನಿಗೆ ಕೊಟ್ಟ ಆಹಾರವು ಕೀವು ಮತ್ತು ರಕ್ತವಿದ್ದಂತೆ" (೩.೧೮೦ : ಭಿಷಜೇ ಪೂಯ ಶೋಣಿತಂ) ಎಂಬುದು ಅವನ ಕಟುಮಾತು. "ಮಾನವೀಯತೆ ಇಲ್ಲದವನು ಮನು" ಎಂದು ಪದದ ವ್ಯುತ್ಪತ್ತಿ ಹೇಳಬೇಕೋ ಏನೊ! ಯಜ್ಞಶಾಲೆಗೆ ಕೂಡ ವೈದ್ಯರನ್ನು ಬಿಟ್ಟುಕೊಳ್ಳಬಾರದಂತೆ, ಏಕೆಂದರೆ ಅವರು ಬಂದರೆ ಪಾವನತ್ವ ಹಾಳಾಗುತ್ತದೆ (೩.೧೫೨). ಬ್ರಾಹ್ಮಣನು ಕೈಗೊಳ್ಳಬಾರದ ವೃತ್ತಿಗಳ ಒಂದು ಪಟ್ಟಿಯನ್ನು ವಸಿಷ್ಠ ಕೊಟ್ಟಿದ್ದಾನೆ (೩.೩) : ವ್ಯಾಪಾರದಲ್ಲಿ ತೊಡಗಬಾರದು, ನಟನಾಗಬಾರದು, ಶೂದ್ರನ ಆಜ್ಞೆಗೆ ತಲೆಬಾಗು ವಂತಿರಬಾರದು, ಕಳ್ಳತನದಲ್ಲಿ ಜೀವಿಸಬಾರದು ಮತ್ತು ವೈದ್ಯವೃತ್ತಿಯಿಂದ ಹೊಟ್ಟೆ ಹೊರೆಯಬಾರದು.

ಇದೆಲ್ಲಾ ಋಗ್ವೇದದ ಕಾಲದ ಸುಮಾರು ೧೫೦೦ ವರ್ಷಗಳ ನಂತರದ ಅಸಹ್ಯ ಬೆಳವಣಿಗೆ. ಋಗ್ವೇದದ ಕಾಲದವರಿಗೆ ಇಂತಹ ಕಟ್ಟುಪಾಡುಗಳ ಯೋಚನೆಯೂ ಬರುವಂತಿರಲಿಲ್ಲ; ಅವರ ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯು ಸಮಷ್ಟಿಯ ನೆಲೆಯಲ್ಲಿದ್ದುದು ಅದಕ್ಕೆ ಕಾರಣ. ಕಾಡುಜನರ ನಡುವೆ ಹೋಗಿ ಅವರೊಡನೆ ಮೂಲಿಕೆಗಳನ್ನು ಅರಸುವುದು ಋಗ್ವೇದದ ಕಾಲಾನಂತರದಲ್ಲಿ ಸಹ ವೈದ್ಯಕೀಯ ವೃತ್ತಿಯವರು ಮಾಡಿದ್ದಾರೆ. ಹಾಗೆ ಮಾಡುವಾಗ ಧರ್ಮಶಾಸ್ತ್ರಕಾರರ ಆಣತಿಯನ್ನು ಕಾರ್ಯತಃ ತಿರಸ್ಕರಿಸಿದ್ದಾರೆ. ಅವರು 'ದ್ವಿಜ'ರಾಗಿರಲಿಲ್ಲ, ಅವರನ್ನು 'ಅಂಬಷ್ಠರು' ಎಂದು ಕರೆದಿದ್ದಾರೆ; ಅಂದರೆ, ಮಿಶ್ರವರ್ಣದವರು. ಚರಕ ಸಂಹಿತೆ ಮತ್ತು ಸುಶ್ರುತ ಸಂಹಿತೆ ಭಾರತದ ಪ್ರಾಚೀನ ವೈದ್ಯಕೀಯ ಶಾಸ್ತ್ರದ ಎರಡು ಪ್ರಮುಖ ಮತ್ತು ಶ್ರೇಷ್ಠ ಗ್ರಂಥಗಳು. ಸುಶ್ರುತ ಸಂಹಿತೆಯ ಒಂದು ಮಾತು ಹೀಗಿದೆ : "ದನ ಕಾಯುವವರು, ತಪಸ್ವಿಗಳು, ಬೇಡರು, ಕಾಡಿನಲ್ಲಿ ಸಂಚರಿಸತಕ್ಕ ಇತರ ಜನಗಳು, – ಇವರಿಗೆ ಮೂಲಾಹಾರಿಗಳು ಅಥವಾ ಭೇಷಜ ವ್ಯಕ್ತಿಗಳು ಎಂದು ಕರೆಯುತ್ತಾರೆ" (೧.೩೬.೮ : ಗೋಪಾಲಾಸ್ತಾಪಸಾ ವ್ಯಾಧಾ ಯೇ ಚಾನ್ಯೇ ವನಚಾರಿಣಃ। ಮೂಲಾಹಾರಾಶ್ಚ ಯೇ ತೇಭ್ಯೋ ಭೇಷಜ್ಯ ವ್ಯಕ್ತಿರಿಷ್ಯತೇ ॥). ಧರ್ಮಶಾಸ್ತ್ರಕಾರರಿಗೆ ಕಾಡಿನ ಜನ ಬೇಡ, ಅವರೊಡನೆ ಸಂಸರ್ಗ ಬೇಡ; ಆದರೆ ವೈದ್ಯಕೀಯಕ್ಕೆ ಅವರೇ ಸಂಪನ್ಮೂಲ ವ್ಯಕ್ತಿಗಳು. ಏಕೆಂದರೆ, ಮೂಲಿಕೆಗಳ ಬಗೆಗಿನ ತಿಳಿವಳಿಕೆ ಇರುವುದು ಅವರಲ್ಲಿ ಮತ್ತು ಮೂಲಿಕೆಗಳ ಸಂಗ್ರಹಕ್ಕೆ ಅವರೇ ಮಾರ್ಗದರ್ಶಕರು.

ಮೂಲಿಕೆಗಳ ಘನತೆಯನ್ನು ಋಗ್ವೇದವು ಅತಿಶಯವಾಗಿ ಎತ್ತಿಹಿಡಿಯುತ್ತದೆ ಮತ್ತು ಶ್ಲಾಘಿಸುತ್ತದೆ; ಅವನ್ನು 'ಓಷಧಿಗಳು' ಎಂದು ಕರೆದು ಅವಕ್ಕೆ ದೇವತಾ ಸ್ಥಾನವನ್ನು ಕಲ್ಪಿಸಿಕೊಡುತ್ತದೆ. ಮೂಲಿಕೆಗಳ ಸಂಗ್ರಾಹಕರನ್ನು ಧರ್ಮಶಾಸ್ತ್ರಕಾರರು ತುಚ್ಛವೆಂದೆಣಿಸಿ ಮೂದಲಿಸುತ್ತಾರೆ; ಆದಾಗ್ಯೂ 'ಧರ್ಮಶಾಸ್ತ್ರಕ್ಕೆ ವೇದಗಳೇ ಆಧಾರ' ಎಂದು ಹೇಳಿಕೊಳ್ಳುತ್ತಾರೆ. ಇದೆಂತಹ ವಿಪರ್ಯಾಸ! ಇಂದಿನ ಚರಿತ್ರಕಾರರಲ್ಲಿ ಅನೇಕ ಸಂಪ್ರದಾಯವಾದಿಗಳು ಈ ವಿಪರ್ಯಾಸವನ್ನು ಗುರುತಿಸುವ ಗೋಜಿಗೇ ಹೋಗುವುದಿಲ್ಲ. ಓಷಧಿಗಳು ಋಗ್ವೇದದ ಕವಿಗೆ ಮತ್ತು ಕವಿತ್ವಕ್ಕೆ ಮಹಾನ್ ಪ್ರೇರಣೆ ನೀಡುತ್ತವೆ. ನಾವೀಗ ನೇರವಾಗಿ ಋಗ್ವೇದದ ಓಷಧಿ ಸೂಕ್ತದ (೧೦.೯೭) ಪರಿಚಯ ಮತ್ತು ವಿಶ್ಲೇಷಣೆಗೆ ತೊಡಗಬಹುದು.

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

# ಸದಾ ಸಮಕಾಲೀನವಾಗುವ ಜಿ. ಎಸ್. ಎಸ್.

**ಡಾ॥** ಜಿ. ಎಸ್. ಶಿವರುದ್ರಪ್ಪನವರ ನೆನಪೆಂದರೆ ಕೆಲವು ಮುಖ್ಯ ಮಾದರಿಗಳ ಜೀವಶಕ್ತಿಯ ನೆನಪು. ಮೊಟ್ಟ ಮೊದಲ ಮಾದರಿಯೆಂದರೆ ಹಳ್ಳಿಗಾಡಿನಲ್ಲಿ ಹುಟ್ಟಿ ಬಡತನದಲ್ಲಿ ಬೆಳೆದು ಕೇವಲ ಶ್ರದ್ಧೆ, ಸಂಕಲ್ಪ ಮತ್ತು ಪ್ರತಿಭೆಯಿಂದಲೇ ಅಪೂರ್ವ ಸಾಧನೆ ಮಾಡಿದ್ದು. ೭.೨.೧೯೨೬ರಲ್ಲಿ ಜನಿಸಿದ ಶಿವರುದ್ರಪ್ಪನವರು ಕಷ್ಟಗಳ ನಡುವೆಯೇ ಇಷ್ಟದ ಹಾದಿ ಹಿಡಿದವರು. ಗುಮಾಸ್ತರ ಕೆಲಸ ಮಾಡಿ, ದುಡಿದು ಆನಂತರ ಎತ್ತರಕ್ಕೆ ಏರುವ ಸಾಧನೆ ಮಾಡಿದವರು. ತಾಯಿಯನ್ನು ಚಿಕ್ಕವಯಸ್ಸಿನಲ್ಲೇ ಕಳೆದುಕೊಂಡ ಇವರಿಗೆ ತಾಯ್ತನವೆನ್ನುವುದು ವಿವಿಧ ಹಂತದಲ್ಲಿ ಕಾಡಿಸುವ, ಕೂಡಿಸುವ ಮೌಲ್ಯ ಮಾದರಿಯಾದದ್ದು ಗಮನಿಸಬೇಕಾದ ಅಂಶವಾಗಿದೆ. ಒಳಗೆ ಕಾಡಿಸುವ ಏಕಾಂತದಲ್ಲಿ ತಾಯಿಯ ನೆನಪನ್ನು ತುಂಬಿಕೊಳ್ಳುತ್ತಲೇ ಬೆಳೆದ ಜಿ. ಎಸ್. ಎಸ್. ಹಳ್ಳಿಗಾಡಿನ ಆತ್ಮವಿಶ್ವಾಸಕ್ಕೆ ಸಾಹಿತ್ಯದ ಒಂದು ಮಾದರಿಯಾದದ್ದು ವಿಶೇಷ ಸಂಗತಿ.

ಅಧ್ಯಯನ, ಅಚ್ಚುಕಟ್ಟುತನ, ಸ್ಪಷ್ಟತೆ ಮತ್ತು ಸಮಚಿತ್ತತೆಯ ಬರವಣಿಗೆಗೆ ಸಾರ್ಥಕ ಮಾದರಿ ನಮ್ಮ ಜಿ. ಎಸ್. ಎಸ್. ಎಂದರೆ ಅತಿಶಯೋಕ್ತಿಯಲ್ಲವೇ ಅಲ್ಲ. ಯಾವ ವಿಷಯವನ್ನೇ ಆಗಲಿ, ಅಧ್ಯಯನಿಸದೆ ಅನಾವರಣಗೊಳಿಸುವ ಹುಸಿ ವಿದ್ವತ್ತು ಅವರದಲ್ಲ. ಮೊದಲು ಅಧ್ಯಯನ, ಟಿಪ್ಪಣಿ ಮಾಡಿಕೊಳ್ಳುವ ಕ್ರಮಬದ್ಧ ಅಚ್ಚುಕಟ್ಟುತನ, ಸ್ಪಷ್ಟ ಚಿಂತನೆ, ವೈಪರೀತ್ಯಕ್ಕೆಳೆಸದ ಸಮಚಿತ್ತ – ಇವುಗಳ ಮೂಲಕ ಅಕ್ಷರಾಭಿವ್ಯಕ್ತಿ – ಇದು ಜಿ. ಎಸ್. ಎಸ್. ಅವರ ಗದ್ಯದ ಮಾದರಿ. ಈ ಮಾದರಿಯೊಳಗೊಬ್ಬ ಅಧ್ಯಾಪಕ ಅಡಗಿರುತ್ತಿದ್ದು ಆತನೇ ನಿರ್ದೇಶಿಸುತ್ತಿದ್ದ ಎಂದರೂ ತಪ್ಪಾಗದು. ಈ ಅಧ್ಯಾಪಕ ಶಕ್ತಿಯ ಕಾರಣದಿಂದಲೇ ಜಿ. ಎಸ್. ಎಸ್. ಗದ್ಯದಲ್ಲಿ ಆರೋಪಿತ ಜಟಿಲತೆ ಇರುವುದಿಲ್ಲ. ಓದುಗನನ್ನು ಗೊಂದಲಕ್ಕೆ ತಳ್ಳುವುದಿಲ್ಲ. ಒಂದಾದ ಮೇಲೆ ಒಂದರಂತೆ ವಿಷಯಗಳನ್ನು ನಿರೂಪಿಸುತ್ತ ಸ್ಪಷ್ಟಪಡಿಸುತ್ತ 'ಅಹುದಹುದು' ಎನ್ನುವಂತೆ ಓದುಗರೊಳಗೊಂದಾಗುವ ಪರಿಯನ್ನು ಅವರ ಗದ್ಯವನ್ನು ಓದಿಯೇ ತಿಳಿಯಬೇಕು. ತುಂಬಾ ಸಂಕೀರ್ಣ ಸಂಗತಿಗಳನ್ನೂ ಸರಳ ನಿರೂಪಣೆಯ ಮೂಲಕ ಸ್ಪಷ್ಟಗೊಳಿಸುವ ವಿಸ್ಮಯವನ್ನು ಜಿ. ಎಸ್. ಎಸ್. ಬರವಣಿಗೆ ಒಳಗೊಂಡಿದೆ. ಅಧ್ಯಾಪಕ–ವಿಮರ್ಶಕ ಮತ್ತು ಮೀಮಾಂಸಕ – ಈ ಮೂರೂ ಶಕ್ತಿಗಳು ಒಂದಾದ ಸಾಹಿತ್ಯ ವ್ಯಕ್ತಿತ್ವಕ್ಕೆ ಜಿ. ಎಸ್. ಎಸ್. ಅಪರೂಪದ ಮಾದರಿ. ಇದರ ಫಲವೇ ಅವರ ಗದ್ಯದ ಸ್ಪಷ್ಟತೆ, ಸಮಚಿತ್ತತೆ, ಸಮಕಾಲೀನತೆ.

ಹಾಗೆ ನೋಡಿದರೆ ಜಿ. ಎಸ್. ಎಸ್. ಕಾವ್ಯವೂ ಜಟಿಲವಲ್ಲ. ಜಟಿಲಗೊಳಿಸುವ ಇರಾದೆಯೂ ಅವರದಲ್ಲ. ಮೂಲತಃ ನವೋದಯ ಕವಿಯಾಗಿ ಕಾವ್ಯಾಭಿವ್ಯಕ್ತಿಗೆ ತೊಡಗಿದ್ದೂ ಇದಕ್ಕೊಂದು ಕಾರಣವಿರಬಹುದು. ನವೋದಯ ಕಾವ್ಯವು ಮೂಲತಃ 'ರಮ್ಯ ಕಾವ್ಯ' ಎನ್ನಿಸಿಕೊಂಡರೂ ರಮ್ಯತೆಯನ್ನು ಮೀರಿ ಬೆಳೆದ ಸಾಧನೆ ನಮ್ಮ ಕಣ್ಣು ಮುಂದಿದೆ. ಕುವೆಂಪು, ಬೇಂದ್ರೆ, ಪು.ತಿ.ನ., ಮಧುರಚೆನ್ನ, ಕಣವಿ, ಕೆ.ಎಸ್.ನ. – ಮುಂತಾದ ಹಿರಿಯ ಕವಿಗಳ ಆರಂಭ ರಮ್ಯಸೆಳೆತವಾಗಿದ್ದರೂ ಆನಂತರ ಅದೊಂದು ರೂಪಕವಾದದ್ದು, ರಮ್ಯತೆಯನ್ನು ಮೀರಿದ ಸಾಮಾಜಿಕತೆಯಾದದ್ದು ಈಗ ಇತಿಹಾಸ. ಜಿ. ಎಸ್. ಎಸ್. ಅವರ ಕಾವ್ಯಕ್ಕೂ ಈ ಮಾತು ಅನ್ವಯಿಸುತ್ತದೆ. ವಿದ್ಯಾರ್ಥಿಯಾಗಿದ್ದಾಗಲೇ ಕವಿತೆ ಬರೆಯಲು ಆರಂಭಿಸಿದ ಜಿ. ಎಸ್. ಎಸ್. ಅವರಿಗೆ ಮೊದಲ ಕೇಳುಗರಾಗಿ ಉತ್ತೇಜನ ನೀಡಿದ ಗುರು – ಶ್ರೀ ತ. ಸು. ಶಾಮರಾಯರು. 'ಎದೆ ತುಂಬಿ ಹಾಡಿದೆನು ಅಂದು ನಾನು। ಮನವಿಟ್ಟು ಕೇಳಿದಿರಿ ಅಲ್ಲಿ ನೀವು। ಇಂದು ನಾ ಹಾಡಿದರು ಅಂದಿನಂತೆಯೆ ಕುಳಿತು। ಕೇಳುವಿರಿ ಸಾಕೆನಗೆ ಅದುವೆ ಬಹುಮಾನ। ಹಾಡು ಹಕ್ಕಿಗೆ ಬೇಕೆ ಬಿರುದು ಸನ್ಮಾನ?' ಎಂದು ಜಿ. ಎಸ್. ಎಸ್. ಅವರು ಬರೆದ ಕವಿತೆ ತ. ಸು. ಶಾಮರಾಯರನ್ನು ಕುರಿತದ್ದಾದರೂ ಬರಬರುತ್ತ ಅದು ಸಹೃದಯ ಸಮೂಹಕ್ಕೆ ಹೇಳಿದ ಕವಿತೆಯಾಗಿ ಅರ್ಥವಿಸ್ತಾರ ಮಾಡಿಕೊಂಡದ್ದು ಒಂದು ವಿಶೇಷವೇ ಸರಿ. ಈ ಕವಿತೆ ಜಿ. ಎಸ್. ಎಸ್. ಅವರ ಮೊದಲ ಸಂಕಲನ 'ಸಾಮಗಾನ'ದಲ್ಲಿದೆ. 'ಸಾಮಗಾನ'ವನ್ನು ಪ್ರಕಟಿಸಿದ್ದು ಗುರು ತ. ಸು. ಶಾಮರಾಯರು ಎಂಬುದನ್ನೂ ಇಲ್ಲಿ ನೆನೆಯಬೇಕು. ಈ ಗುರು–ಶಿಷ್ಯ ಸಂಬಂಧ ಒಂದು ಆದರ್ಶ ಮಾದರಿಯಾಗಿದೆ.

**ಪ್ರೊ॥ ಬರಗೂರು ರಾಮಚಂದ್ರಪ್ಪ**

ಮುಂದೆ ಕುವೆಂಪು ಅವರ ದಟ್ಟ ಪ್ರಭಾವಕ್ಕೆ ಒಳಗಾದ ಜಿ. ಎಸ್. ಎಸ್. ಅವರು ಕುವೆಂಪು ಮಾರ್ಗದರ್ಶನದಲ್ಲೇ ಪಿಎಚ್.ಡಿ. ಮಾಡಿದರು. 'ಸೌಂದರ್ಯ ಸಮೀಕ್ಷೆ' ಎಂಬ ಅಪೂರ್ವ ಮಹಾಪ್ರಬಂಧವನ್ನು ರಚಿಸಿದರು. ಸೌಂದರ್ಯ ಪರಿಕಲ್ಪನೆಯನ್ನು ಕುರಿತು ಇನ್ನೇನು ಬರೆಯುವುದಿದೆ ಎನ್ನುವಷ್ಟರಮಟ್ಟಿಗೆ ಸಮಗ್ರ ಸಮೀಪದ 'ಸೌಂದರ್ಯ ಸಮೀಕ್ಷೆ'ಯು ಇಂದಿಗೂ ಒಂದು ಅತ್ಯುತ್ತಮ ಆಕರ ಗ್ರಂಥ; ವ್ಯಾಖ್ಯಾನ ಗ್ರಂಥ. ಇಲ್ಲಿಯೇ 'ಕಾವ್ಯಾರ್ಥ ಚಿಂತನ' ಗ್ರಂಥವನ್ನೂ ನೆನೆಯಬೇಕು. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಈ ಗ್ರಂಥ ಜಿ. ಎಸ್. ಎಸ್. ಬರವಣಿಗೆಯ ಒಂದು ಉತ್ತಮ ಮಾದರಿಯಾಗಿದೆ. ಅಸಾಧಾರಣ ವಿಷಯಗಳನ್ನು ಸಾಧಾರಣ ಸಹೃದಯನಿಗೂ ತಲುಪುವಂತೆ ಗಂಭೀರವೂ ಸಂವಹನಶೀಲವೂ ಆದ ಗದ್ಯ ಗ್ರಂಥಗಳನ್ನು ಕೊಟ್ಟ ಜಿ. ಎಸ್. ಎಸ್. ತಮಗೆ ತಾವೇ ಮಾದರಿಯಾದರು. ಕುವೆಂಪು ಅವರ ಆಶಯಗಳ ದಟ್ಟ ಪ್ರಭಾವಕ್ಕೆ ಒಳಗಾಗಿದ್ದರೂ ಅಭಿವ್ಯಕ್ತಿ ವಿಧಾನದಲ್ಲಿ ತಮ್ಮದೇ ದಾರಿಯನ್ನು ಹುಡುಕಿಕೊಂಡರು. ಈ ಸ್ವಂತ ದಾರಿಯ ಶೋಧ ಒಂದು ಮುಖ್ಯ ಸಂಗತಿ. ಯಾಕೆಂದರೆ ಕುವೆಂಪು ಜಿ. ಎಸ್. ಎಸ್. ಅವರನ್ನು ಆವರಿಸಿಕೊಂಡ ರೀತಿ ಆರಾಧನೆಯ ಹಂತಕ್ಕೆ ವ್ಯಾಪಿಸಿತ್ತು. ಆರಾಧನೆಯಿಂದ ಅರಿವಿಗೆ ಬರುವ ದಾರಿ ಕಷ್ಟಕರವಾದುದು. ಆರಾಧನೆಯು ಗೌರವಾರ್ಪಣೆಯ ಹಂತದಲ್ಲಷ್ಟೇ ಉಳಿಯುವ ಸಂಭವ ಕಡಿಮೆ. ಆದರೆ ಜಿ. ಎಸ್. ಎಸ್. ಅವರಿಗೆ ಆರಾಧನೆಯನ್ನು ಮೀರಿದ ಅರ್ಥವಂತಿಕೆಯ ನೆಲೆ ಲಭ್ಯವಾದದ್ದು ಉಲ್ಲೇಖನೀಯ ಸಂಗತಿಯಾಗಿದೆ. ಇದು ಮುಖ್ಯವಾಗಿ ಜಿ. ಎಸ್. ಎಸ್. ಅವರ ಗದ್ಯಶೈಲಿಯಲ್ಲಿ ಕಾಣಿಸುತ್ತದೆ.

ಜಿ. ಎಸ್. ಎಸ್. ಅವರಿಗೆ ಕುವೆಂಪು ಅವರ ಮೇಲಿದ್ದ ಅಪಾರ ಗೌರವದ ಸಂಕೇತವಾಗಿ ಒಂದು ಉದಾಹರಣೆ ಕೊಡಬಹುದು. ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ಇವರು ವ್ಯವಸ್ಥೆಗೊಳಿಸಿದ ವಿಚಾರ ಸಂಕಿರಣಗಳ ಪ್ರಸಿದ್ಧಿ ಸಾಹಿತ್ಯಕ್ಷೇತ್ರಕ್ಕೆ ಸುಪರಿಚಿತ. ಬೇಂದ್ರೆ, ಕಾರಂತ, ಕುವೆಂಪು ಕುರಿತಾಗಿಯೂ ವಿಚಾರ ಸಂಕಿರಣಗಳನ್ನು ಜಿ. ಎಸ್. ಎಸ್. ಏರ್ಪಡಿಸಿದ್ದರು. ವಿಚಾರ ಸಂಕಿರಣದ ಪ್ರಬಂಧಗಳು ಪುಸ್ತಕ ರೂಪದಲ್ಲಿ ಅಚ್ಚುಕಟ್ಟಾಗಿ ಹೊರಬಂದವು. ಬೇಂದ್ರೆ, ಕಾರಂತರಿಗೆ ಬಳಸದೆ ಇರುವ 'ಶ್ರೀ' ಎಂಬ ವಾಚಕವನ್ನು ಕುವೆಂಪು ಅವರಿಗೆ ಮಾತ್ರ ಜಿ. ಎಸ್. ಎಸ್. ಬಳಸಿದ್ದರು. 'ಶ್ರೀ ಕುವೆಂಪು' ಎಂದು ಆಹ್ವಾನ ಪತ್ರಿಕೆ ಮತ್ತು ಪುಸ್ತಕದ ಶೀರ್ಷಿಕೆಯಲ್ಲಿ ಅಚ್ಚಾಗಿತ್ತು. ಬೇಂದ್ರೆ, ಕಾರಂತರಿಗೆ ಈ 'ಶ್ರೀ' ಭಾಗ್ಯ ಇರಲಿಲ್ಲ. ಹಾಗೆಂದು ಬೇಂದ್ರೆ, ಕಾರಂತರ ಬಗ್ಗೆ ಜಿ. ಎಸ್. ಎಸ್. ಅವರಿಗೆ ಅನಾದರ ಎಂದೇನೂ ಅಲ್ಲ. ಹಾಗಿದ್ದರೆ ಅವರ ಬಗ್ಗೆ ವಿಚಾರ ಸಂಕಿರಣವನ್ನೇ ಏರ್ಪಡಿಸುತ್ತಿರಲಿಲ್ಲ. ಬೇಂದ್ರೆ, ಕಾರಂತರ ಬಗ್ಗೆ ಗೌರವ, ಕುವೆಂಪು ಅವರ ಬಗ್ಗೆ ಆರಾಧನ ಭಾವ! ಆದರೆ ಜಿ. ಎಸ್. ಎಸ್. ಕೆಲ ವರ್ಷಗಳ ಹಿಂದೆ ಬರೆದ ಪುಸ್ತಕದ ಹೆಸರು 'ಕುವೆಂಪು: ಒಂದು ಪುನರಾಲೋಕನ' ಇಲ್ಲಿ 'ಶ್ರೀ' ಇರಲಿಲ್ಲ. ಜಿ. ಎಸ್. ಎಸ್. ಅವರ ಚಲನಶೀಲ ಗುಣಕ್ಕೆ ಇದೊಂದು ಉದಾಹರಣೆ.

ಕುವೆಂಪು ಅವರಂತೆಯೇ ಜಿ. ಎಸ್. ಎಸ್. ತಮ್ಮ ಕಾವ್ಯದಲ್ಲಿ ಸಾಕಷ್ಟು ನಿಸರ್ಗ ಚಿತ್ರಣಕ್ಕೆ ಆದ್ಯತೆ ನೀಡಿದ್ದರೂ ಸಾಮಾಜಿಕ ಆಶಯಗಳನ್ನು ಬಿಟ್ಟುಕೊಡಲಿಲ್ಲ. ನಮ್ಮ ಸಮಾಜದ ಅಸಮಾನತೆಯ ವಿರುದ್ಧ ತಮ್ಮದೇ ಕಾವ್ಯಶೈಲಿಯಲ್ಲಿ ಪ್ರತಿರೋಧ ಒಡ್ಡದೇ ಇರಲಿಲ್ಲ. ಇಲ್ಲಿಯೂ ಕುವೆಂಪು ರೀತಿಯ ಸಾಮಾಜಿಕ ಆಶಯಗಳಿವೆ; ಆದರೆ ಕುವೆಂಪು ರೀತಿಯ ಕಾವ್ಯಶೈಲಿ ಇಲ್ಲ. ಇದು ಜಿ. ಎಸ್. ಎಸ್. ಸ್ವಂತಿಕೆಯ ಗುಣಲಕ್ಷಣ. ಆಶಯಗಳಲ್ಲಿ ಕುವೆಂಪುವಾಗುತ್ತ ಅಭಿವ್ಯಕ್ತಿ ವಿಧಾನದಲ್ಲಿ ವಿಭಿನ್ನವಾಗುವುದು ಜಿ. ಎಸ್. ಎಸ್. ಮಾದರಿ.

ಕುವೆಂಪು ಆಶಯಕ್ಕೆ ಉದಾಹರಣೆಯಾಗಿ ದೇವರೆಲ್ಲಿದ್ದಾನೆ ಎಂಬ ಪ್ರಶ್ನೆಯನ್ನು ಗಮನಿಸಬಹುದು. ತಮ್ಮ 'ಜಲಗಾರ' ನಾಟಕದಲ್ಲಿ ಕುವೆಂಪು ಅವರು ದೀನದಲಿತರಲ್ಲಿ ದೇವರನ್ನು ಕಾಣುತ್ತಾರೆ. ಶಿವನ ಬಾಯಿಂದಲೇ ತಾನು ದಲಿತರ, ರೈತರ, ಬಡವರ ಎದೆಯಲ್ಲಿರುವುದಾಗಿ ಹೇಳಿಸುತ್ತಾರೆ. ಜಿ. ಎಸ್. ಎಸ್. ಅವರ ಮೊದಲ ಸಂಕಲನ 'ಸಾಮಗಾನ'ದಲ್ಲೂ ಇಂತಹ ಹೊಳಹು ಇದೆ. 'ಉಡುಗಣವೇಷ್ಟಿತ ಚಂದ್ರ ಸುಶೋಭಿತ ದಿವ್ಯಾಂಬರ ಸಂಚಾರಿ'ಯಾದ 'ದೇವರು' ಇರುವುದು ಎಲ್ಲಿ? 'ದೀನ ಅನಾಥರ ದುಃಖಿ ದರಿದ್ರರ ಮುರುಕು ಗುಡಿಸಲಲಿ ಉಪವಾಸಿ'ಯಾಗಿರುತ್ತಾನೆ. 'ಉಳುತಿಹ ರೈತನ ನೇಗಿಲ ಕಾಲಿನ ಮಣ್ಣಿನ ರೇಖಾಪಥಗಾಮಿ'ಯಾಗಿಯೂ ಇರುತ್ತಾನೆ. ಕುವೆಂಪು ಅವರು ದೇವರನ್ನು ದೀನದಲಿತರಲ್ಲಿ ಮಾತ್ರವಲ್ಲದೆ ನಿಸರ್ಗದಲ್ಲೂ ಕಾಣುತ್ತಾರೆ. 'ಸೂರ್ಯೋದಯ ಚಂದ್ರೋದಯ ದೇವರ ದಯ ಕಾಣ' ಎನ್ನುತ್ತಾರೆ. ಜಿ. ಎಸ್. ಎಸ್. ದೇವರನ್ನು ಕುವೆಂಪು ಅವರಂತೆಯೇ ದೀನದಲಿತರಲ್ಲಿ ಕಾಣುತ್ತ 'ಪ್ರೀತಿ–ಸ್ನೇಹಗಳ ಸಂಬಂಧ'ದಲ್ಲೂ ಕಾಣುತ್ತಾರೆ: ಹೀಗಾಗಿ 'ಎಲ್ಲೋ ಹುಡುಕಿದೆ ಇಲ್ಲದ ದೇವರ। ಕಲ್ಲು ಮಣ್ಣುಗಳ ಗುಡಿಯೊಳಗೆ। ಇಲ್ಲೇ ಇರುವ ಪ್ರೀತಿ–ಸ್ನೇಹಗಳ। ಗುರುತಿಸದಾದೆನು ನಮ್ಮೊಳಗೆ।' ಎಂದು ಹಾಡುತ್ತಾರೆ.

ಜಿ. ಎಸ್. ಎಸ್. ಅವರು ಸಮಾಜದ ವಿಷಮ ಸನ್ನಿವೇಶಗಳಿಗೆ ಸದಾ ಪ್ರತಿಕ್ರಿಯಿಸಿದ್ದಾರೆ; ವಿಷಾದಿಸಿದ್ದಾರೆ; ವಿರೋಧಿಸಿದ್ದಾರೆ. ಒಂದು ಉದಾಹರಣೆಯಾಗಿ 'ಗಾಂಧಿ ಶತಮಾನೋತ್ಸವ' ಕವಿತೆಯ ಈ ಸಾಲುಗಳನ್ನು ನೋಡಬಹುದು :

*ಹಾದಿಯುದ್ದಕ್ಕೂ ಹಾಳುಬಿದ್ದಿರುವ ಹೂವಿನ ತೋಟ*
*ಇನ್ನೂ ಹೊಗೆಯಾಡುತ್ತಿರುವ ಬೆಂಕಿ,*
*ಕಾಲಿನ ಕೆಳಗೆ ರಕ್ತದ ಕೆಸರು,*
*ಕೋಟೆ ಬಿರುಕುಗಳಲ್ಲಿ ಯಾರದೋ ನಿಟ್ಟುಸಿರು*
*ಗೆದ್ದಲಡರುತ್ತಿರುವ ಕಂಬಗಳ ಮುರುಕು ಮಹಲು*
*ಹೊಸದಾಗಿ ರಿಪೇರಿ ಮಾಡಿರುವ ರಸ್ತೆಗಳ ಮೇಲೆ*
*ನಾಯಿಗಳ ಕಚ್ಚಾಟ,*
*ಈ ಎಲ್ಲದರ ನಡುವೆ ಕೇಳುತ್ತಲಿದೆ*
*ಹಬ್ಬಿರುವ ಮಬ್ಬಿನೊಳಗೊಬ್ಬನೇ ಮುದುಕ*
*ಕೋಲೂರಿ ನಡೆಯುವ ಸದ್ದು*

– ಗಾಂಧಿಯುಗದ ಮೌಲ್ಯಗಳ ಅಧಃಪತನವನ್ನಷ್ಟೇ ಈ ಸಾಲುಗಳು ಹೇಳುವುದಿಲ್ಲ. ನಮ್ಮ ದೇಶದಲ್ಲಿರುವ ಅಸಹನೆ, ಅಸಮತೆಗಳ ಪರಿಣಾಮವನ್ನು ದಟ್ಟ ವಿಷಾದದಲ್ಲಿ ರೂಪಕಾತ್ಮಕವಾಗಿ ಕಟ್ಟಿಕೊಡುವ ಕವಿತೆಯ ಸಾಲುಗಳು ಜಿ. ಎಸ್. ಎಸ್. ಕಾವ್ಯದ ಸಾಮಾಜಿಕ ಕಳಕಳಿಗೆ ಸಂಕೇತವಾಗಿವೆ. ಇಂತಹ ಎಷ್ಟೋ ಕವಿತೆಗಳನ್ನು ಜಿ. ಎಸ್. ಎಸ್. ಬರೆದು ಸಾಮಾಜಿಕ ಹಾಗೂ ಸಮಕಾಲೀನ ವಿವೇಕಕ್ಕೆ ಸಾಕ್ಷಿಯಾಗಿದ್ದಾರೆ.

ಹಾಗೆ ನೋಡಿದರೆ, ಸದಾ ಸಮಕಾಲೀನವಾಗುವುದೇ ಜಿ. ಎಸ್. ಎಸ್. ವಿಶಿಷ್ಟತೆ. ಸದಾ ಹೊಸದಕ್ಕೆ ತೆರೆದುಕೊಳ್ಳುವ ಸ್ಪಂದಿಸುವ ಅವರ ಗುಣವೇ ಅವರನ್ನು ಕನ್ನಡ ಸಾಹಿತ್ಯದ ಎಲ್ಲ ಧಾರೆಗಳಲ್ಲೂ ಜೀವಂತವಾಗಿರಿಸಿದೆ. 'ದಾರಿ ನೂರಾರಿವೆ ಬೆಳಕಿನರಮನೆಗೆ' ಎಂದು ನಂಬಿದ ಜಿ. ಎಸ್. ಎಸ್. ಎಲ್ಲ ಬೆಳಕಿನ ದಾರಿಗಳಿಗೂ ಕಣ್ಣು ತೆರೆದು ಕೂತವರು; ಸದಾ ಬೆಳಕನ್ನು ಅರಸಿದವರು. ಎಲ್ಲ ದಾರಿಗಳಲ್ಲಿರುವ ಬೆಳಕಿನಲ್ಲಿ ಸರಿ ಎನ್ನಿಸಿದ್ದನ್ನು ಸ್ವೀಕರಿಸಿ ತಮ್ಮದೇ 'ಹಣತೆ'ಗೆ ಎಣ್ಣೆಯಾಗಿಸಿಕೊಂಡವರು :

*ಬೇಡ ನನಗೆ ಸಿದ್ಧಾಂತಗಳ ರಾದ್ಧಾಂತ*
*ನನಗಿಲ್ಲ ಇದೇ ಸರಿ, ಇಷ್ಟೇ ಸರಿ ಎನುವ ಪಂತ*
*ನಾ ಬಲ್ಲೆ ಇವು ಎಲ್ಲ ಏರುವೆಯ ಒಂದೊಂದು ಹಂತ*
*ನೂರಾರು ಭಾವದ ಬಾವಿ, ಎತ್ತಿಕೋ*
*ನಿನಗೆ ಬೇಕಾದಷ್ಟು ಸಿಹಿ ನೀರ*
*ಪಾತ್ರೆಯಾಕಾರಗಳ ಕುರಿತು ಏತಕೆ ಜಗಳ?*
*ನಮಗೆ ಬೇಕಾದದ್ದು ದಾಹ ಪರಿಹಾರ*

(ದೀಪದ ಹೆಜ್ಜೆ – ಸಂಕಲನ)

ನಿಜ; ಸಿದ್ಧಾಂತಗಳು ರಾದ್ಧಾಂತವಾದಾಗ ಅವು ಅನಾರೋಗ್ಯಕರವಾಗುತ್ತವೆ. ಆದರೆ ಸಮಾಜವನ್ನು ಅರ್ಥಮಾಡಿಕೊಳ್ಳಲು ಸಿದ್ಧಾಂತಗಳೂ ಪ್ರೇರಕವಾಗಬಲ್ಲವು ಎನ್ನುವುದು ನನ್ನ ತಿಳುವಳಿಕೆ. ಯಾವ ಸಿದ್ಧಾಂತವೂ ಬೇಡ ಎನ್ನುವುದೇ ಒಂದು ಸಿದ್ಧಾಂತವಾದೀತೆ ಎಂಬ ಅನುಮಾನವೂ ಇದೆ. ಅದೇನೇ ಇರಲಿ, ಯಾವುದೇ ಸಿದ್ಧಾಂತ ಸಂಕೋಲೆಯಾಗಬಾರದು. ಸದಾ ಸೃಜನಶೀಲವಾಗಬೇಕು; ಸಮಕಾಲೀನ ಸಕಾರಾತ್ಮಕತೆಯನ್ನು ಪಡೆದುಕೊಳ್ಳಬೇಕು. ಇಲ್ಲಿ, ಜಿ. ಎಸ್. ಎಸ್. ಅವರು ಯಾವುದೇ ಸಿದ್ಧಾಂತಕ್ಕೆ ಕಟ್ಟುಬೀಳದೆ ಎಲ್ಲದರ ಒಳಿತನ್ನು ಸ್ವೀಕರಿಸುವ ಉದಾರವಾದಿ ನಿಲುವನ್ನು ತಳೆದಿದ್ದಾರೆ. ಈ ಉದಾರವಾದಿ ನಿಲುವು ಅವರ ಸಾಹಿತ್ಯ ದೃಷ್ಟಿಯಲ್ಲೂ ಇದೆ; ಸಾಮಾಜಿಕ ದೃಷ್ಟಿಯಲ್ಲೂ ಇದೆ. ಹೀಗಾಗಿ ಅವರು ಆರೋಗ್ಯಕರ ಸಾಮಾಜಿಕ ಆಶಯಗಳನ್ನು ಪ್ರತಿಪಾದಿಸಿದ್ದಾರೆ. ಸಾಹಿತ್ಯದ ಸಮಸ್ತ ಧಾರೆಗಳಿಗೂ

ಸ್ಪಂದಿಸಿದ್ದಾರೆ. ಈ ಮೂಲಕ ನವೋದಯ, ನವ್ಯ, ಪ್ರಗತಿಶೀಲ, ದಲಿತ, ಬಂಡಾಯ ಸಾಹಿತ್ಯ ಮತ್ತು ಸಾಹಿತಿಗಳ ಒಡನಾಟವನ್ನು ಸಾಧ್ಯವಾಗಿಸಿಕೊಂಡಿದ್ದಾರೆ. ಇದು ಜಿ. ಎಸ್. ಎಸ್. ತಾವಾಗಿ ಕಂಡುಕೊಂಡ ಹಣತೆಯ ಹಾದಿ; ದೀಪದ ಹೆಜ್ಜೆ.

ಹೀಗೆ, ಕನ್ನಡ ಸಾಹಿತ್ಯದ ಯಾವ ಧಾರೆಯನ್ನೂ ಕುರುಡು ನಿರಾಕರಣೆಗೆ ಒಳಪಡಿಸದೆ, ಸದಾ ಸಮಕಾಲೀನವಾಗುವ ಸ್ಪಂದನ ಗುಣದಿಂದಲೇ ಜಿ. ಎಸ್. ಎಸ್. ಸ್ವಂತ ಛಾಪಿನ ವ್ಯಕ್ತಿತ್ವವಾದರು; ಸಮಸ್ತ ಸಾಹಿತ್ಯ ಸಂದರ್ಭಗಳೊಂದಿಗೆ ಸ್ನೇಹಾನುಸಂಧಾನ ನಡೆಸಿದರು; ಎಲ್ಲ ಧಾರೆಯವರಿಗೂ ಸಮೀಪವಾದರು. ಹಾಗೆಂದು 'ಅಂದರಿಕು ಮಂಚಿವಾಡು' ಆಗಲಿಲ್ಲ ಸ್ನೇಹಾನುಸಂಧಾನದ ಮೂಲಕವೇ ಒಳಿತು–ಕೆಡುಕುಗಳನ್ನು ವಿಂಗಡಿಸಿದರು; ವಿಶ್ಲೇಷಿಸಿದರು. ಈ ವಿಶ್ಲೇಷಣಾ ವಿವೇಕವನ್ನು ಅವರ ವಿಮರ್ಶೆ ಮತ್ತು ಮೀಮಾಂಸೆಗಳಲ್ಲಿ ಕಾಣಬಹುದು.

ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ಅವರು ಕಾರ್ಯನಿರ್ವಹಿಸಿದ ಕ್ರಮದಲ್ಲೂ ಸಾಹಿತ್ಯಧಾರೆಗಳ ಸ್ನೇಹಾನುಸಂಧಾನ ಮತ್ತು ಸದಾ ಸಮಕಾಲೀನವಾದ ಸ್ಪಂದನಗಳು ಮುಖ್ಯವಾಗಿವೆ. ಜಿ. ಎಸ್. ಎಸ್. ಅವರು ನಡೆಸಿದ ವಿಚಾರ ಸಂಕಿರಣಗಳ ಸ್ವರೂಪವೇ ನನ್ನ ಈ ಮಾತನ್ನು ಸಮರ್ಥಿಸುತ್ತದೆ. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಕ್ರಿಯಾಸ್ವರೂಪವನ್ನು ಇತರೆ ವಿಶ್ವವಿದ್ಯಾಲಯಗಳ ಕನ್ನಡ ವಿಭಾಗಗಳ ಕ್ರಿಯಾಸ್ವರೂಪಕ್ಕೆ ಹೋಲಿಸಿ ನೋಡಿದವರು ಸಹಜವಾಗಿಯೇ ಜಿ. ಎಸ್. ಎಸ್. ಕೆಲಸದಲ್ಲಿ ಸಮಕಾಲೀನ ವಿವೇಕವನ್ನು ಕಂಡರು. ಇದಕ್ಕೆ ಸಮರ್ಥನೆಯೆಂಬಂತೆ ಜಿ. ಎಸ್. ಎಸ್. ಅವರು ಅಂದು ವಿಶ್ವವಿದ್ಯಾಲಯಗಳು ಅನುಮಾನ ಮತ್ತು ಅಸಹನೆಯಿಂದ ನೋಡುತ್ತಿದ್ದ ನವ್ಯಸಾಹಿತಿಗಳನ್ನೂ ಆಹ್ವಾನಿಸಿದರು; ತೊಡಗಿಸಿದರು. ಹಾಗೆಂದು ನವೋದಯದವರನ್ನು ಕಡೆಗಣಿಸಲಿಲ್ಲ; ಯುವಕರನ್ನು ನಿರ್ಲಕ್ಷಿಸಲಿಲ್ಲ. ಆಯಾ ವಿಷಯಕ್ಕೆ ಸಂಬಂಧಿಸಿದ ವಿದ್ವಾಂಸರನ್ನು ದೂರ ಮಾಡಲಿಲ್ಲ. ಎಲ್ಲರನ್ನೂ ಒಳಗೊಂಡು ಚರ್ಚೆಗಳನ್ನು ಸಾಧ್ಯವಾಗಿಸಿದರು. ಇದರ ಫಲವಾಗಿ ಜಿ. ಎಸ್. ಎಸ್. ವ್ಯಕ್ತಿತ್ವವೇ ದೀಪದ ಹೆಜ್ಜೆಯಾಯಿತು. ಜಿ. ಎಸ್. ಎಸ್. ಅವರು ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ಗಳಿಸಿದ ಯಶಸ್ಸಿಗೆ ಅವರ ದೂರದೃಷ್ಟಿ, ಕಾರ್ಯಕ್ಷಮತೆ, ಅಚ್ಚುಕಟ್ಟುತನಗಳು ಬಹುಪಾಲು ಕಾರಣವಾದಂತೆ ಇನ್ನೆರಡು ಪೂರಕ ಅಂಶಗಳನ್ನು ಇಲ್ಲಿ ನೆನೆಯಬೇಕು. ಒಂದು – ಅಂದು ಕುಲಪತಿಗಳಾಗಿದ್ದ ಡಾ|| ಎಚ್. ನರಸಿಂಹಯ್ಯನವರ ಪ್ರೋತ್ಸಾಹ; ಬೆಂಬಲ. ಜಿ. ಎಸ್. ಎಸ್. ಅವರ ಈ ಎಲ್ಲ ಕೆಲಸಗಳಿಗೆ ನೈತಿಕವಾಗಿ, ಆರ್ಥಿಕವಾಗಿ ಬೆಂಬಲ ನೀಡಿದ ಡಾ|| ಎಚ್ಚೆನ್ ಅವರ ನಿಲುವು ಸಹ ಇಲ್ಲಿ ಸ್ಮರಣೀಯ. ಎರಡು – ಕನ್ನಡ ಅಧ್ಯಯನ ಕೇಂದ್ರದ ಅಧ್ಯಾಪಕರಲ್ಲಿದ್ದ ಸಾಹಿತ್ಯ ಹಾಗೂ ಸಾಮಾಜಿಕ ವ್ಯಕ್ತಿತ್ವ. ಸ್ವತಃ ಆಧುನಿಕ ಆಲೋಚನೆಯ ಅನೇಕ ಅಧ್ಯಾಪಕರೂ ಸಂಶೋಧಕರೂ ಇದ್ದ ಕನ್ನಡ ಅಧ್ಯಯನ ಕೇಂದ್ರ ಸಹಜವಾಗಿಯೇ ಜಿ. ಎಸ್. ಎಸ್. ಅವರ ನೇತೃತ್ವದಲ್ಲಿ ಕ್ರಿಯಾಶೀಲವಾಯಿತು. ಜೊತೆಗೆ ಇಲ್ಲಿದ್ದ ಬಹುಪಾಲು ಅಧ್ಯಾಪಕರು ಜಿ. ಎಸ್. ಎಸ್. ಅವರ ವಿದ್ಯಾರ್ಥಿಗಳಾಗಿದ್ದರು. ಹಾಗೆಂದು ಜಿ. ಎಸ್. ಎಸ್. ಪಾಳೇಗಾರಿಕೆ ನಡೆಸಲಿಲ್ಲ. ಅದು ಸಾಧ್ಯವೂ ಇರಲಿಲ್ಲ. ಸ್ವಭಾವತಃ ಪ್ರಜಾಪ್ರಭುತ್ವವಾದಿಯಾದ ಜಿ. ಎಸ್. ಎಸ್. ಎಲ್ಲರನ್ನೂ ಜೊತೆಗೆ ಕೊಂಡೊಯ್ದು ಚಲನಶೀಲ ಕೇಂದ್ರವನ್ನು ಕಟ್ಟಿದರು. ಒಂದು ವಿಶಿಷ್ಟ ಮಾದರಿಯಾದರು. ಹಾಗೆಂದು ನಮ್ಮ ಕನ್ನಡ ಅಧ್ಯಯನ ಕೇಂದ್ರದಲ್ಲಿ ಭಿನ್ನಾಭಿಪ್ರಾಯಗಳು ಇರಲೇ ಇಲ್ಲವೆಂದಲ್ಲ. ಸಾಹಿತ್ಯ ತತ್ವಗಳ ಭಿನ್ನ ನೆಲೆಗಳ ಆರೋಗ್ಯಕರ ವಾತಾವರಣದ ಜೊತೆಗೆ ಆಗಾಗ್ಗೆ ಅನಾರೋಗ್ಯಕರ ಜಗಳಗಳೂ ನಡೆಯುತ್ತಿದ್ದವು. ಜಿ. ಎಸ್. ಎಸ್. ಅವರೂ ಇವುಗಳ ಭಾಗವಾಗಿದ್ದರು. ಒಳಗುಂಪುಗಳ ರಾಜಕೀಯ ಎಲ್ಲ ವಿಶ್ವವಿದ್ಯಾಲಯಗಳಲ್ಲೂ ಇದ್ದದ್ದೇ ಎಂದು ಸಮಾಧಾನಪಟ್ಟುಕೊಳ್ಳಬಹುದು! ಆದರೆ ಈ ಎಲ್ಲ ಅನಪೇಕ್ಷಿತ ಬೆಳವಣಿಗೆಗಳನ್ನೂ ಮೀರಿ ಜಿ. ಎಸ್. ಎಸ್. ವ್ಯಕ್ತಿತ್ವ ಬೆಳೆದು ಬೆಳಗಿತು ಎನ್ನುವುದು ನನಗೆ ಮುಖ್ಯ. ಕೆಲವೊಮ್ಮೆ ಮುಖಾಮುಖಿಯಾಗುತ್ತ, ಮೀರುತ್ತ, ಚಲನಶೀಲವಾಗುತ್ತ, ಚಲನಶೀಲವಾಗಿಸುತ್ತ ಬೆಳೆದ, ಬೆಳೆಸಿದ ಜಿ. ಎಸ್. ಎಸ್. ಅವರು ನಮ್ಮ ಸಾಂಸ್ಕೃತಿಕ ಕ್ಷೇತ್ರದ ದೀಪದ ಹೆಜ್ಜೆಯಾಗಿ ಸದಾ ಉಳಿಯುತ್ತಾರೆ; ಸಾವಿಲ್ಲದ ಸಮಕಾಲೀನ ವಿವೇಕದ ಸಂಕೇತವಾಗಿ ನಮ್ಮೊಳಗೆ ಬದುಕಿರುತ್ತಾರೆ.

**ಪ್ರೊ|| ಬರಗೂರು ರಾಮಚಂದ್ರಪ್ಪ**
'ಸಂವೇದನೆ', ನಂ. ೨೭೫, ೧೧ನೇ 'ಬಿ' ಅಡ್ಡರಸ್ತೆ, ೧೪ನೇ ಮುಖ್ಯರಸ್ತೆ
ವಿ.ಇ.ಟಿ. ಪಾಲಿಟೆಕ್ನಿಕ್ ಹತ್ತಿರ, ಜೆ. ಪಿ. ನಗರ ೨ನೇ ಫೇಸ್
ಬೆಂಗಳೂರು – ೫೬೦ ೦೭೮

# ಭಾವದೀಪ

**(ರಾಷ್ಟ್ರಕವಿ ಡಾ|| ಜಿ. ಎಸ್. ಶಿವರುದ್ರಪ್ಪ ಅವರನ್ನು ನೆನೆದು)**

ಹರಿವ ಮಾತಿನ ತೊರೆ ಪಾತ್ರದಿಕ್ಕೆಲವ
ಸೂಸಿ ಮುತ್ತಿಕ್ಕುವೊಲು ಗಮಿಸುತ್ತ
ಆಳಕ್ಕೂ ಮುಳುಮುಳುಗಿ
ಮುತ್ತು ರತ್ನಗಳ ಕಾಣಿಸಿದವರು.

ಮಗ್ಗದ ಹಾಸುಹೊಕ್ಕಿನ ಎಳೆಯು
ನೇಯುವನ ಕೈಚಳಕದಿಂದ
ಬಟ್ಟೆಯಾಗುವ ಹಾಗೆ;
ತಿಗರಿ ಮೇಲಿನ ಮಣ್ಣಮುದ್ದೆ
ಕುಂಬಾರನ ಕುಶಲತೆಯಿಂದ
ಮಡಕೆಯಾಗುವ ಹಾಗೆ
ಬಟ್ಟೆಯಾದಿರಿ ನಮಗೆ.

'ತೇರನೆಳೆವರು ನಾವು ಎಲ್ಲಿದ್ದರೇನೆಂ'ದು
ಕನ್ನಡದ ಕೈಂಕರ್ಯಕೆಲ್ಲರನಿಗೊಳಿಸಿದಿರಿ;
ಜ್ಞಾನಪೀಠಕೂ ಮಿಗಿಲು
ಎಲ್ಲರ ಹೃದಯ ಪೀಠದಲಿ ನೆಲೆಸಿಹಿರಿ ನೀವು.

ಬಂದ ಹಾದಿಯ ನೆನಪು
ಮುಂದು ಹಾದಿಯ ಕನಸುಗಳನೆರಡನೂ
ಬಿಟ್ಟು 'ವ್ಯಕ್ತ ಮಧ್ಯ'ದ ಬಗೆಗೆ
ಹುಡುಕುಗಣ್ಣನು ಹರಿಸಿದವರು.
ಚಕ್ರಗತಿ ಬದುಕಲ್ಲಿ ದೇವಶಿಲ್ಪವ ಕಡೆದು
ಸಾಮಗಾನದ ಚೆಲುವ ಕಂಡು
ಕಾಣಿಸಿದವರು
'ಪ್ರೀತಿ ಇಲ್ಲದ ಮೇಲೆ ಹೂವು ಅರಳೀತು ಹೇಗೆಂ'ದು
ಜೀವದ್ರವ್ಯವ ಸಾರಿದವರು.

ಈ ಕಡೆ ಕಾರ್ತೀಕವೆಂದರೆ ಹಣತೆ
ನಮಗೆ ಹಣತೆಯೆಂದರೆ ನೀವೆ.

ದೀಪಾವಳಿಯಲ್ಲಿ ಹಚ್ಚುತ್ತಾರೆ ಎಲ್ಲರೂ
ಮನೆ ಮನೆಯ ಮುಂದೆ ನೂರಾರು ಹಣತೆ.
ನೀವು ಹಚ್ಚಿದಿರಿ ಎಲ್ಲರೆದೆಯಲ್ಲಿ
ಭಾವ ತಿಳಿವಿನ ಹಣತೆ.
ನಡೆದ ಹಾದಿಯಗುಂಟ ಹರಿಸಿ ಮುಗುಗಣ್ಣು
ಎದೆ ತುಂಬಿ ಹಾಡಿದಿರಿ;
ಹೆಕ್ಕಿದಿರಿ ಮಲ್ಲಿಗೆ, ಸಂಪಿಗೆ, ಸೇವಂತಿಗೆ
ನಗರ ಜಾತಕ ಬರೆದು ಒಡ್ಡಿದಿರಿ ಕನ್ನಡಿಯ.

ಜೋತು ಬೀಳದೆ ಯಾವ ಮರದ ಕೊಂಬೆಗೂ
ಅಮರವಾಗುವ ತೆಂಗಿನ ಹಾಗೆ
ಎತ್ತರೆತ್ತರ ಬೆಳೆದರೂ
ಸುತ್ತೆಲ್ಲ ಹೂ ಹಣ್ಣು ಗಿಡಗಳ ಬೆಳೆಸಿದಿರಿ.
ಬಾಳೆ ಬತ್ತದ ಫಸಲು ತೆಗೆದಿರಿ.

ಗಡಿಯಾರದ ಮುಳ್ಳು ಚಲಿಸುತ್ತಲೇ ಇದೆ
ತನಗೆ ತಾನೇ;
ದಿನದಿನವೂ ಬರುತ್ತಲೇ ಇರುತ್ತಾನೆ
ಬಂಗಾರ ಮೋರೆಯ ಕುವರ
ದೇಹಸಿರಿ ಮುಡಿಪಿದರೂ
ಭಾವಸಿರಿ ಅಮರ, ಅಮರ.

**ಡಾ|| ಬಿ. ಜಿ. ಕನಕೇಶಮೂರ್ತಿ**
ಕನ್ನಡ ಸಹ ಪ್ರಾಧ್ಯಾಪಕ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೊಸಪೇಟೆ – ೫೮೩ ೨೦೧

# ಕ್ಷ - ಕಿರಣ

ಪ್ರಕಾಶ್ ಎಸ್.












ಸ್ವಾತಂತ್ರ್ಯಾನಂತರದ ಭಾರತ – ೧

# ಪಂಚವಾರ್ಷಿಕ ಯೋಜನೆ, ಮಹಾಚುನಾವಣೆಗಳು



ದೇಶದ ವಿಭಜನೆಯ ಪರಿಣಾಮವಾಗಿ ಭಾರತ ಎದುರಿಸಬೇಕಾಗಿ ಬಂದ ಸವಾಲುಗಳು ಹಲವು. ಭುಗಿಲೆದ್ದ ಕೋಮು ದಳ್ಳುರಿಯಲ್ಲಿ ಲಕ್ಷಾಂತರ ಮಂದಿ ಅಮಾಯಕರು ಸಾವಿಗೀಡಾದರು. ನೂರಾರು ಲಕ್ಷ ಜನ ನಿರ್ಗತಿಕರಾಗಿ ನಿರಾಶ್ರಿತರಾದರು. ಕಾಶ್ಮೀರದ ಗಡಿಯಲ್ಲಿ ಅತಿಕ್ರಮಣ ನಡೆಸಿದ ಪಾಕಿಸ್ತಾನದ ಸೇನೆಯನ್ನು ಭಾರತ ಎದುರಿಸಬೇಕಾಯಿತು. ಅದು ಭಾರತ–ಪಾಕಿಸ್ತಾನಗಳ ನಡುವಣ ಮೊದಲ ಯುದ್ಧ. ಕಾಶ್ಮೀರದ ಕೆಲಭಾಗಗಳು ಈಗಲೂ ಪಾಕಿಸ್ತಾನದ ವಶದಲ್ಲಿಯೇ ಇವೆ. ಅಂದು ಉದ್ಭವಿಸಿದ ವಿವಾದ ಇಂದಿಗೂ ಬಗೆಹರಿಯದೆ ಇದೆ. ಸುಮಾರು ಐದುನೂರು ಚಿಲ್ಲರೆ ದೇಸೀ ಸಂಸ್ಥಾನಗಳ ವಿಲೀನ, ನಿಜಾಮರ ಆಳ್ವಿಕೆಯಲ್ಲಿದ್ದ ಹೈದರಾಬಾದ್ ಸಂಸ್ಥಾನದ ಸೇರ್ಪಡೆಗಾಗಿ ನಡೆಸಿದ ಸೇನಾ ಕಾರ್ಯಾಚರಣೆ ಮುಂತಾದವೆಲ್ಲ ಈಗ ಇತಿಹಾಸ. ಇವೆಲ್ಲದರ ಜೊತೆಗೆ ನಡೆದದ್ದು ಮಹಾತ್ಮಾ ಗಾಂಧಿ ಕೊಲೆ. ಹಿಂದು ಮತಾಂಧನಿಂದ ನಡೆದ ಈ ಹತ್ಯೆ ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಪಿತೂರಿಯಿಂದ ನಡೆಯಿತು. ಆಗ ಹಿನ್ನಡೆ ಅನುಭವಿಸಿದ ಈ ಹಿಂದುತ್ವ ಸಂಘಟನೆ ಆರೆಸ್ಸೆಸ್ ಇಂದು ಸಾಕಷ್ಟು ಪ್ರಬಲಗೊಂಡಿದೆ. ವಿಶ್ವ ಹಿಂದೂ ಪರಿಷತ್, ಭಜರಂಗದಳ, ಶ್ರೀರಾಮಸೇನೆ, ಹಿಂದೂ ಜಾಗರಣ ಸಮಿತಿ ಹೀಗೆ ಹಲವು ಸಂಘಟನೆಗಳು ಕ್ರಿಯಾಶೀಲವಾಗಿದ್ದು ಸಂಘಪರಿವಾರವಾಗಿದೆ. ಆರೆಸ್ಸೆಸ್‌ನ ರಾಜಕೀಯ ವಿಭಾಗ ಭಾರತೀಯ ಜನತಾ ಪಕ್ಷ ಪ್ರಬಲವಾಗಿ ಇಂದು ಕೇಂದ್ರದಲ್ಲಿ ಮತ್ತೆ ಅಧಿಕಾರ ಗ್ರಹಣ ಮಾಡುವ ಕನಸು ಕಾಣುತ್ತಿದೆ. ದೇಶದಲ್ಲಿ ಐದಾರು ರಾಜ್ಯಗಳಲ್ಲಿ ಅಧಿಕಾರದ ಚುಕ್ಕಾಣಿ ಹಿಡಿದಿರುವ ಈ ಪಕ್ಷ ಅಧಿಕಾರದಲ್ಲಿರುವ ಕಾಂಗ್ರೆಸ್ ಪಕ್ಷಕ್ಕೆ ಸವಾಲಾಗಿದೆ. ಮುಂದೆ ಈ ಪಕ್ಷದ ಬೆಳವಣಿಗೆಯ ವಿವರಗಳನ್ನು ಪರಿಶೀಲಿಸೋಣ.

---

**ಸ್ವಾತಂತ್ರ್ಯಾನಂತರ ಭಾರತದೊಂದಿಗೆ ರಾಯಭಾರಿ ಸಂಬಂಧಗಳನ್ನು ಸ್ಥಾಪಿಸಿದ ಮೊದಲ ದೇಶ ಸೋವಿಯೆತ್ ಒಕ್ಕೂಟ. ಮುಂದೆ ಈ ಮೈತ್ರಿ ಸಾಕಷ್ಟು ದೃಢವಾಗಿ ಬೆಳೆಯಿತಲ್ಲದೆ, ಇಂದೂ ಕೂಡ ರಷ್ಯದೊಂದಿಗೆ ಸಂಬಂಧಗಳು ವರ್ಧಿಸುತ್ತಿವೆ. ಐವತ್ತರ ದಶಕದಲ್ಲಿ ಅಮೆರಿಕ–ಬ್ರಿಟನ್ ನಾಯಕತ್ವದಲ್ಲಿ ಸ್ಥಾಪನೆಗೊಂಡ ಸೈನಿಕಕೂಟಗಳಿಂದ ಭಾರತ ದೂರ ಉಳಿಯಿತು. ಈ ನಿರ್ಧಾರದಿಂದ ಅದು ಆ ದೇಶಗಳ ಅವಕೃಪೆಗೆ ಒಳಗಾಯಿತು. ವಿಶ್ವಸಂಸ್ಥೆಯೊಳಗೂ ಮತ್ತು ಹೊರಗೂ ಭಾರತ ವಸಾಹತುಶಾಹಿ ಆಡಳಿತದ ಅಂತ್ಯಕ್ಕಾಗಿ, ದಕ್ಷಿಣ ಆಫ್ರಿಕದಲ್ಲಿನ ಸರಕಾರ ಪಾಲಿಸುತ್ತಿದ್ದ ವರ್ಣಭೇದನೀತಿಯ ವಿರುದ್ಧವಾಗಿ ನಿರಂತರವಾಗಿ ಶ್ರಮಿಸಿತು. ಹೊಸದಾಗಿ ಸ್ವತಂತ್ರಗೊಂಡ ಏಷಿಯ, ಆಫ್ರಿಕ ಮತ್ತು ಲ್ಯಾಟಿನ್ ಅಮೆರಿಕ ದೇಶಗಳೊಂದಿಗೆ ಮೈತ್ರಿಯನ್ನು ಬೆಳೆಸಿದ ಭಾರತ ಅವನ್ನು ಒಟ್ಟುಗೂಡಿಸಲು ಕ್ರಮ ಕೈಗೊಂಡಿತು.**

ಸ್ವಾತಂತ್ರ್ಯಾನಂತರದ ಮೊದಲ ದಶಕವನ್ನು ಪ್ರಜಾಪ್ರಭುತ್ವಕ್ಕೆ ಬುನಾದಿ ನಿರ್ಮಿಸಿದ ಕಾಲ ಎನ್ನಬಹುದು. ಸಂವಿಧಾನದ ಅಂಗೀಕಾರ, ವಯಸ್ಕರ ಮತದಾನ ಪದ್ಧತಿಯ ಆಧಾರದ ಮೇಲೆ ಶಾಸಕಾಂಗಕ್ಕೆ ನಡೆದ ಚುನಾವಣೆಗಳು, ಯೋಜನಾಬದ್ಧವಾದ ಅರ್ಥವ್ಯವಸ್ಥೆಯ ಪ್ರಾರಂಭ, ಭೂಸುಧಾರಣೆಗಳಿಗಾಗಿ, ಭಾಷೆ ಆಧಾರದ ಮೇಲೆ ರಾಜ್ಯ ಪುನರ್ವಿಂಗಡನೆಗಾಗಿ, ಪೋರ್ಚುಗೀಸ್ ಸ್ವಾಸ್ಥ್ಯಗಳಾದ ಗೋವಾ, ಡಿಯು, ದಾಮನ್‌ಗಳ ವಿಮೋಚನೆಗಾಗಿ ಹೋರಾಟ ಮುಂತಾದವು ಪ್ರಮುಖ ಘಟನೆಗಳು. ಯಾವ ಬಣಕ್ಕೂ ಸೇರದೆ, ಸೈನಿಕ ಕೂಟಗಳಿಂದ ದೂರವಾಗಿದ್ದು ವಿದೇಶಾಂಗ ವ್ಯವಹಾರಗಳಲ್ಲಿ ಎಲ್ಲ ದೇಶಗಳೊಂದಿಗೆ ಸಮಾನತೆಯ ಆಧಾರದ ಮೇಲೆ ಸಂಬಂಧಗಳ ಸ್ಥಾಪನೆಗಾಗಿ, ಶಾಂತಿಗಾಗಿ ಶ್ರಮಿಸುವ ಅಲಿಪ್ತ ನೀತಿಗೆ ಬುನಾದಿ ನಿರ್ಮಿಸಲಾಯಿತು. ಪ್ರಧಾನಿ ಪಂಡಿತ ಜವಹರಲಾಲ್ ನೆಹರು ರೂಪಿಸಿದ ಈ ವಿದೇಶೀ ನೀತಿಗೆ ಪಕ್ಷಾತೀತವಾಗಿ ಎಲ್ಲರ ಬೆಂಬಲವೂ ಇದ್ದುದು ವಿಶೇಷ. ದೇಶದ ಆರ್ಥಿಕ ಪರಿಸ್ಥಿತಿ ಚಿಂತಾಜನಕವಾಗಿತ್ತು. ವಿದೇಶೀ ವಿನಿಮಯದ ಕೊರತೆ ತೀವ್ರವಾಗಿತ್ತು. ಮುಖ್ಯವಾಗಿ ಆಹಾರದ ಕೊರತೆ ವಿಪರೀತವಾಗಿತ್ತು. ಯುದ್ಧಕಾಲದಲ್ಲಿ ಬ್ರಿಟಿಷರು ಜಾರಿಗೆ ತಂದಿದ್ದ ಪಡಿತರ ವ್ಯವಸ್ಥೆ ಮುಂದುವರಿದಿತ್ತು. ಅಮೆರಿಕದಿಂದ ಗೋಧಿ ಆಮದು ಮಾಡಿಕೊಳ್ಳಲು ಪಿಎಲ್–೪೮೦ ಎಂಬ ಯೋಜನೆಯ ಅಡಿಯಲ್ಲಿ ಒಪ್ಪಂದ ಮಾಡಿಕೊಳ್ಳಲಾಗಿತ್ತು. ಈ ಯೋಜನೆಯ ಪ್ರಕಾರ ವಿದೇಶೀ ವಿನಿಮಯದ ಕೊರತೆಯನ್ನು ಅನುಭವಿಸುತ್ತಿದ್ದ ಭಾರತ ಸರಕಾರ ಅಮೆರಿಕಾಗೆ ಹಣವನ್ನು ರೂಪಾಯಿ ನಾಣ್ಯದಲ್ಲೇ ಪಾವತಿ ಮಾಡಲು ಅವಕಾಶ ಕಲ್ಪಿಸಲಾಗಿತ್ತು. ಈ ರೂಪಾಯಿಗಳನ್ನು ಅಮೆರಿಕ ತನ್ನ ರಾಯಭಾರಿ ಕಛೇರಿಯ ವೆಚ್ಚಗಳಿಗಾಗಿ, ಕೆಲವು ನಿರ್ಬಂಧಗಳಿಗೆ ಒಳಪಟ್ಟಂತೆ ಇತರ ಬಾಬತ್ತುಗಳಿಗೆ ವಿನಿಯೋಗಿಸಬಹುದಾಗಿತ್ತು. ಕೆಲವರ್ಷಗಳಲ್ಲಿ ಅಮೆರಿಕದ ಬಳಿ ಸಂಗ್ರಹವಾಗಿದ್ದ

**ಸಿ. ಆರ್. ಕೃಷ್ಣರಾವ್**



ರೂಪಾಯಿಗಳ ಮೊತ್ತ ಭಾರತದ ನಿವ್ವಳ ಆದಾಯವನ್ನು ಮೀರುವ ಘಟ್ಟ ತಲುಪಿ ದೊಡ್ಡ ಸಮಸ್ಯೆಯೇ ಉದ್ಭವಿಸಿತ್ತು. ಹಸಿರು ಕ್ರಾಂತಿಯ ಪರಿಣಾಮವಾಗಿ ಕೆಲವೇ ವರ್ಷಗಳಲ್ಲಿ ಆಹಾರ ಧಾನ್ಯಗಳ ಪೂರೈಕೆಯಾಗುತ್ತಿದ್ದಂತೆಯೇ ಅಮೆರಿಕದಿಂದ ಗೋಧಿ ಆಮದು ನಿಂತಿತು. ರೂಪಾಯಿ ಸಂಗ್ರಹದ ಸಮಸ್ಯೆಯನ್ನು ಅಮೆರಿಕದ ಜೊತೆ ಬಗೆಹರಿಸಿಕೊಳ್ಳಲು ಸಾಕಷ್ಟು ಕಾಲ ಹಿಡಿಯಿತು. ಕ್ರಮೇಣ ಪಡಿತರ ವ್ಯವಸ್ಥೆಯ ಮೇಲೆ ಅವಲಂಬನೆ ಕೂಡ ಕಡಿಮೆಯಾಯಿತು.

ದೇಶದ ಅವಶ್ಯಕತೆಗೆ ಅನುಗುಣವಾಗಿ ಬಿ. ಆರ್. ಅಂಬೇಡ್ಕರ್, ಎನ್. ಗೋಪಾಲಸ್ವಾಮಿ ಐಯ್ಯಂಗಾರ್, ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ್ ಮುಂತಾದವರು ರಚಿಸಿದ ಕರಡು ಸಂವಿಧಾನವನ್ನು ರಾಜ್ಯಾಂಗ ಸಭೆ ೧೯೪೯ರ ನವೆಂಬರ್ ೨೬ರಂದು ಅಂಗೀಕರಿಸಿತು. ೧೯೫೦ರ ಜನವರಿ ೨೬ರಂದು ಸಂವಿಧಾನ ಜಾರಿಗೆ ಬಂದಿತು. ಸಂವಿಧಾನದ ಆಶಯಗಳು ಈಡೇರುವ ಭರವಸೆ ನೀಡಲಾಗುತ್ತಿದೆಯೇ ಹೊರತು ಕಾರ್ಯರೂಪದಲ್ಲಿ ಆಚರಣೆಗೆ ಬರುವ ಸೂಚನೆ ಇಲ್ಲ. ಜಾತಿಮತ ಭೇದ ವಿಲ್ಲದೆ ಉದ್ಯೋಗಾವಕಾಶ ಮತ್ತು ನ್ಯಾಯ; ವಾಕ್ ಸ್ವಾತಂತ್ರ್ಯ, ಶಾಂತಿಯುತವಾಗಿ ಸಭೆ ಸೇರುವ ಮತ್ತು ಐಚ್ಛಿಕ ಕೆಲಸವನ್ನು ಮಾಡುವ ಸ್ವಾತಂತ್ರ್ಯ; ಶೋಷಣೆಯಿಂದ ರಕ್ಷಣೆ; ವಾಸ ಮತ್ತು ಸಂಚಾರ ಸ್ವಾತಂತ್ರ್ಯ; ಆಸ್ತಿ ಸಂಪಾದಿಸುವ, ಇರಿಸಿಕೊಳ್ಳುವ ಅಥವಾ ಮಾರುವ ಸ್ವಾತಂತ್ರ್ಯ; ಕಸಬು, ಉದ್ಯಮ ಅಥವಾ ವ್ಯಾಪಾರ ನಡೆಸುವ ಸ್ವಾತಂತ್ರ್ಯ ಮತ್ತು ಧರ್ಮ ಹಾಗೂ ಮತ ಸ್ವಾತಂತ್ರ್ಯ – ಇವು ಮೂಲಭೂತ ಹಕ್ಕುಗಳು. ಇದಲ್ಲದೆ ಸಂವಿಧಾನದಲ್ಲಿ ಎಲ್ಲ ಪ್ರಜೆಗಳಿಗೂ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ವ್ಯವಹಾರಗಳಲ್ಲಿ ನ್ಯಾಯ, ಸಮಾನ ಅವಕಾಶಗಳನ್ನು ನೀಡಿದೆ. ಸಂವಿಧಾನಕ್ಕೆ ಹಲವು ತಿದ್ದುಪಡಿಗಳಾಗಿವೆ. ಜಗತ್ತಿನ ಎಲ್ಲ ಸಂವಿಧಾನ ಗಳಿಗಿಂತ ಭಾರತ ಸಂವಿಧಾನ ಗಾತ್ರದಲ್ಲಿ ಹಿರಿದು. ಉದ್ದೇಶಗಳು ಎಷ್ಟೇ ಉದಾತ್ತ ವಾದದ್ದಾಗಿದ್ದರೂ ಅವನ್ನು ಜನಪರವಾಗಿ ಕಾರ್ಯಗತ ಮಾಡುವ ವ್ಯವಸ್ಥೆ ಮಾತ್ರ ಇಲ್ಲವಾಗಿದೆ. ಸಂವಿಧಾನದ ಆಶಯಗಳು ಈಡೇರುವ ಭರವಸೆ ಮಾತ್ರ ಈಗಿನ ಆಡಳಿತ ವ್ಯವಸ್ಥೆಯಲ್ಲಿಲ್ಲ.



ಸ್ವಾತಂತ್ರ್ಯೋತ್ತರ ಭಾರತದ ಮೊದಲ ವರ್ಷಗಳಲ್ಲಿ ನಡೆದ ಪ್ರಮುಖ ಹೋರಾಟ ಎಂದರೆ ಭೂ ಸುಧಾರಣೆ ಗಳಿಗಾಗಿ ರೈತರು ನಡೆಸಿದ ಆಂದೋಲನ. ದೇಶಾದ್ಯಂತವೂ ಭೂಮಾಲಿಕರ, ಜಮೀನುದಾರರ ವಿರುದ್ಧ ರೈತರು 'ಉಳುವವನಿಗೇ ಭೂಮಿ' ಎಂಬ ಘೋಷಣೆಯಡಿ ಹೋರಾಟ ನಡೆಸಿದರು. ಮುಖ್ಯವಾಗಿ ಹೈದರಾಬಾದ್ ಸಂಸ್ಥಾನದ ತೆಲಂಗಾಣದಲ್ಲಿ, ಹಾಗೂ ಇತರ ಕೆಲವೆಡೆಗಳಲ್ಲಿ ನಡೆದ ಸಶಸ್ತ್ರ ಸಂಗ್ರಾಮ ಭೂಸುಧಾರಣೆಗಳ ಜರೂರು ಅವಶ್ಯಕತೆಯನ್ನು ಎತ್ತಿ ತೋರಿಸಿತು. ಸ್ವಾತಂತ್ರ್ಯ ಚಳವಳಿಯ ಮುಂಚೂಣಿಯಲ್ಲಿದ್ದು ಆಡಳಿತದಲ್ಲಿದ್ದ ಕಾಂಗ್ರೆಸ್ ಪಕ್ಷ ಅರೆಮನಸ್ಸಿನಿಂದ ಭೂ ಸುಧಾರಣೆಯನ್ನು ಜಾರಿಗೆ ತರಲು ಮುಂದಾಯಿತು. ಈ ಸಂದರ್ಭದಲ್ಲಿ ಆಚಾರ್ಯ ವಿನೋಬಾ ಭಾವೆ ಮತ್ತು ಸಮಾಜವಾದಿ ನಾಯಕ ಜಯಪ್ರಕಾಶ್ ನಾರಾಯಣ್ ನಡೆಸಿದ ಭೂದಾನ ಚಳವಳಿಯನ್ನು ಇಲ್ಲಿ ಸ್ಮರಿಸಬಹುದು. ಮೂಲತಃ ಜಮೀನುದಾರರು, ಭೂಮಾಲೀಕರು ಮತ್ತು ಬಂಡವಳಿಗರ ಪಕ್ಷ ಕಾಂಗ್ರೆಸ್ ಭೂ ಸುಧಾರಣೆಗಳ ಕುರಿತು ಕಾಯಿದೆಯನ್ನು ತಂದಿತಾದರೂ, ಅದು ಪೂರ್ಣವಾಗಿ ಎಲ್ಲೂ ಕಾರ್ಯಗತವಾಗಲಿಲ್ಲ. ದೇಶದ ಒಂದೊಂದು ಪ್ರದೇಶದಲ್ಲೂ ಭೂಒಡೆತನ ವಿಶಿಷ್ಟ ರೀತಿಯದು. ಕಾಯಿದೆಗಳೂ ಕೂಡ ವೈವಿಧ್ಯಪೂರ್ಣ. ಚಾಣಾಕ್ಷರಾಗಿದ್ದ ಭೂಮಾಲೀಕರು ಕಾನೂನನ್ನು ನಿರರ್ಥಕ ಗೊಳಿಸಲು ಕ್ರಮಗಳನ್ನು ಕೈಗೊಂಡರು. ಇದರಿಂದಾಗಿ ರೈತರಿಗೆ ಅಂಥ ಪ್ರಯೋಜನವೇನೂ ಆಗಲಿಲ್ಲ. ಅಲ್ಲಿ ಇಲ್ಲಿ ಗೇಣಿದಾರರಿಗೆ ಸ್ವಲ್ಪಮಟ್ಟಿಗೆ ಜಮೀನಿನ ಒಡೆತನ ಲಭ್ಯವಾಯಿತು. ಸಾಮಾನ್ಯವಾಗಿ ಸರಕಾರ ತಂದ ಕಾಯಿದೆಗಳು ಎಷ್ಟೇ ಉತ್ತಮ ಉದ್ದೇಶಗಳಿಂದ ಕೂಡಿದ್ದಾಗ್ಯೂ, ಅವು ಅಮಲಿಗೆ ಬಂದಿರುವುದು ಅಪರೂಪ. ಭೂಸುಧಾರಣೆಗಳ ಗತಿಯೂ ಹಾಗೆಯೇ ನಿರರ್ಥಕ. ಈಗ ಭೂ ಸುಧಾರಣೆಗಳ ವಿಚಾರವೇ ಇಲ್ಲ. ಅದಕ್ಕೆ ಪ್ರತಿಯಾಗಿ ಈಗ ನಗರ ಪ್ರದೇಶಗಳು ಬಡಾಯಿಸಿದ್ದು, ಹೆದ್ದಾರಿಗಳ ಅಗಲೀಕರಣವಾಗಿ ಭೂ ಕಬಳಿಕೆಯಾಗುತ್ತಿದೆ. ರೈತರ ದಾರುಣ ಸ್ಥಿತಿ ಮಾತ್ರ ಹಿಂದಿಗಿಂತಲೂ ಹೆಚ್ಚು ಕಠೋರವಾಗಿದೆ. ಸಾಲ ಸೋಲಗಳಲ್ಲಿ ಮುಳುಗಿ, ಫಸಲಿಗೆ ಸರಿಯಾದ ಬೆಲೆ ಬಾರದೆ ರೈತರ ಹೆಚ್ಚುತ್ತಿರುವ ಆತ್ಮಹತ್ಯೆ ಪ್ರಕರಣಗಳೇ ಅದಕ್ಕೆ ಸಾಕ್ಷಿ. ಕೃಷಿ ಕ್ಷೇತ್ರಕ್ಕೆ ಕಾರ್ಪೊರೇಟ್ ವಲಯ ಪ್ರವೇಶಿಸುತ್ತಿರುವುದು ಗಮನಿಸಬೇಕಾದ ಸಂಗತಿ. ಕಳೆದ ಮೂರು–ನಾಲ್ಕು ದಶಕಗಳಿಂದ ಈ ಪ್ರವೃತ್ತಿ ಹೆಚ್ಚು ಹೆಚ್ಚಾಗಿ ಕಾಣಿಸಿಕೊಳ್ಳುತ್ತಿದೆ.

ದೇಶದ ಅಭಿವೃದ್ಧಿ ಸಾಧನೆಗೆ ಮುಂದಾಗಿದ್ದ ಸರಕಾರ ಯೋಜನಾಬದ್ಧವಾದ ಆರ್ಥಿಕ ವ್ಯವಸ್ಥೆ ರೂಪಿಸಲು ನಿರ್ಧರಿಸಿತು. ಸೋವಿಯೆತ್ ಒಕ್ಕೂಟದೊಂದಿಗೆ ಉತ್ತಮವಾದ ಸಂಬಂಧಗಳನ್ನು ಸ್ಥಾಪಿಸಿಕೊಂಡಿದ್ದ ಭಾರತಕ್ಕೆ ಅದು ಹೊಂದಿದ್ದ ಪಂಚವಾರ್ಷಿಕ ಯೋಜನೆಗಳೇ ಪ್ರೇರಣೆ. ೧೯೫೦ರಲ್ಲಿ ಸರಕಾರ ಯೋಜನಾ ಆಯೋಗವನ್ನು ಸ್ಥಾಪಿಸಿತು. ಯೋಜನೆಗೆ ಅಗತ್ಯವಾದ ನೆರವು ಪಡೆದುಕೊಳ್ಳಲು ಕೈಚಾಚಿದ್ದು ಬಂಡವಾಳಶಾಹಿ ದೇಶಗಳ ಕಡೆಗೇ. ಮೊದಲ ಪಂಚವಾರ್ಷಿಕ ಯೋಜನೆ ಹೆಚ್ಚು ಕಡಿಮೆ ಪೂರ್ಣವಾಗಿ ಕೃಷಿ ಕ್ಷೇತ್ರದ ಅಭಿವೃದ್ಧಿಗೆ ಸೀಮಿತವಾಗಿತ್ತು. ಇದಕ್ಕೆ ಅಮೆರಿಕದ ಒತ್ತಡವೂ ಇದ್ದುದರಲ್ಲಿ ಅಚ್ಚರಿ ಏನಿಲ್ಲ. ಮೊದಲ ಪಂಚವಾರ್ಷಿಕ ಯೋಜನೆ (೧೯೫೧–೧೯೫೬)ಯ ಗಾತ್ರ ರೂ. ೨೩೫೬ ಕೋಟಿಯಾಗಿತ್ತು. ಅಧಿಕವಾಗಿ ಈ ಯೋಜನೆ ನೀರಾವರಿ ವ್ಯವಸ್ಥೆಗೆ, ಕೃಷಿ ಅಭಿವೃದ್ಧಿಗೆ ಹೆಚ್ಚು ಪ್ರಾಶಸ್ತ್ಯ ನೀಡಿತು. ನಂತರದ ಯೋಜನೆಗಳು ಕೈಗಾರಿಕಾಭಿವೃದ್ಧಿಗೆ ಪ್ರಾಮುಖ್ಯತೆ ನೀಡಿದವು.

ಭಾರತದಲ್ಲಿ ವಯಸ್ಕರ ಮತದಾನ ಪದ್ಧತಿಯ ಮೇಲೆ ಮೊದಲ ಚುನಾವಣೆ ನಡೆದದ್ದು ೧೯೫೨ರಲ್ಲಿ. ಆಗ ದೇಶದಲ್ಲಿ ಇದ್ದ ರಾಜಕೀಯ ಪಕ್ಷಗಳು ಕಾಂಗ್ರೆಸ್, ಕಮ್ಯುನಿಸ್ಟ್ ಪಾರ್ಟಿ, ಸೋಷಲಿಸ್ಟ್ ಪಾರ್ಟಿ, ಕಿಸಾನ್ ಮಜ್ದೂರ್ ಪ್ರಜಾ ಪಾರ್ಟಿ ಮತ್ತು ಭಾರತೀಯ ಜನಸಂಘ. ಆಗ ಕಾಂಗ್ರೆಸ್ಸಿಗೆ ಪ್ರಬಲವಾದ ಎದುರಾಳಿಯೇ ಇಲ್ಲವೇನೋ ಎನ್ನುವ ಸ್ಥಿತಿ ಇತ್ತು. ಸ್ವಾತಂತ್ರ್ಯಾನಂತರ ೧೯೪೮–೫೦ರಲ್ಲಿ ಭಾರತ ಕಮ್ಯುನಿಸ್ಟ್ ಪಾರ್ಟಿ ಕಾಂಗ್ರೆಸ್ ಸರಕಾರದ ಅವಕೃಪೆಗೆ ಈಡಾಗಿತ್ತು. ಸಶಸ್ತ್ರ ಆಂದೋಳನದ ಮೂಲಕವಾಗಿ ಸರಕಾರವನ್ನು ಉರುಳಿಸಲು ಸಂಚು ನಡೆಸುತ್ತಿದ್ದಾರೆ ಎಂಬ ಅಪಾದನೆಯ ಮೇಲೆ ದೇಶಾದ್ಯಂತ ಕಮ್ಯುನಿಸ್ಟ್ ಪಕ್ಷದ ಮೇಲೆ ಸರಕಾರ ಹರಿಹಾಯ್ದಿತು. ಅದರ ನಾಯಕರು ಗಳನ್ನು ಬಂಧಿಸಿತು. ಪಶ್ಚಿಮಬಂಗಾಳ ಮತ್ತು ಅಂದಿನ ಮದರಾಸು ಪ್ರಾಂತದಲ್ಲಿ ಪಕ್ಷವನ್ನು ನಿಷೇಧಿಸಲಾಯಿತು. ಈ ಎರಡೂ ಪ್ರಾಂತಗಳಲ್ಲಿ ಪಾರ್ಟಿ ಸಾಕಷ್ಟು ರಾಜಕೀಯ ಪ್ರಾಬಲ್ಯ ಹೊಂದಿತ್ತು. ಸರಕಾರದ ದಬ್ಬಾಳಿಕೆ ಯಿಂದಾಗಿ ಬಹುತೇಕ ಕಮ್ಯುನಿಸ್ಟ್ ನಾಯಕರು ಭೂಗತರಾಗಿ ಕಾರ್ಯ ನಿರ್ವಹಿಸಬೇಕಾಯಿತು. ಎರಡು ವರ್ಷಗಳಾದ ಮೇಲೆ ಬಂಧನದಲ್ಲಿದ್ದ ಕಮ್ಯುನಿಸ್ಟ್ ನಾಯಕರನ್ನು ಬಿಡುಗಡೆ ಮಾಡಲಾಯಿತು. ವಾರಂಟ್‌ಗಳನ್ನು ಹಿಂತೆಗೆದುಕೊಂಡು ದರಿಂದ ಭೂಗತರಾಗಿದ್ದ ಕಮ್ಯುನಿಸ್ಟರು ಹೊರಬಂದು ಮತ್ತೆ ಪಾರ್ಟಿ ಕಟ್ಟುವ ಕಾರ್ಯದಲ್ಲಿ ನಿರತರಾದರು. ಪಾರ್ಟಿಯನ್ನು ನಿಷೇಧಿಸಿದ್ದ ಪ್ರಾಂತಗಳಲ್ಲಿ ಅದನ್ನು ರದ್ದುಗೊಳಿಸಲಾಯಿತು. ಎರಡು ವರ್ಷಗಳ ದಬ್ಬಾಳಿಕೆಯಿಂದಾಗಿ ಕಮ್ಯುನಿಸ್ಟ್ ಪಾರ್ಟಿ ಸಾಕಷ್ಟು ಕಳೆದುಕೊಂಡು ದುರ್ಬಲವಾಗಿತ್ತು. ಆದರೂ ಅದು ಕಾಂಗ್ರೆಸ್ ಸರಕಾರದ ಜನವಿರೋಧಿನೀತಿಗಳನ್ನು ವಿರೋಧಿಸುವ ಚಳವಳಿಯಲ್ಲಿ ಮುಂಚೂಣಿ ಯಲ್ಲಿತ್ತು. ಇದ್ದುದರಲ್ಲಿಯೇ ಕಮ್ಯುನಿಸ್ಟ್ ಪಾರ್ಟಿ ದೇಶದ ಮೊದಲ ಸಾರ್ವತ್ರಿಕ ಚುನಾವಣೆಗಳಿಗೆ ಸಜ್ಜಾಯಿತು. ೧೯೫೨ರಲ್ಲಿ ಜರುಗಿದ ಮಹಾಚುನಾವಣೆಯಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷ ಪಾರ್ಲಿಮೆಂಟಿನಲ್ಲಿ ಪ್ರಮುಖ ವಿರೋಧಪಕ್ಷವಾಗಿ ಹೊರಹೊಮ್ಮಿದ್ದು ವಿಶೇಷ. ಅಂದಿನ ಚುನಾವಣಾ ಫಲಿತಾಂಶಗಳು ಮುಂದೆ ಕಾಂಗ್ರೆಸ್ಸಿಗೆ ಪರ್ಯಾಯ ಕಮ್ಯುನಿಸ್ಟ್ ಪಾರ್ಟಿಯೇ ಎನ್ನುವಂತಿದ್ದುವು. ಅಧಿಕೃತವಾಗಿ ಮನ್ನಣೆ ಪಡೆಯದಿದ್ದರೂ ಕಮ್ಯುನಿಸ್ಟ್ ಪಾರ್ಟಿ ಸಾಕಷ್ಟು ಸ್ಥಾನಗಳನ್ನು ಪಡೆದುಕೊಂಡು ಪ್ರಬಲ ವಿರೋಧಪಕ್ಷವಾಗಿತ್ತು. ಮುಂದಿನ ಎರಡು ಮಹಾಚುನಾವಣೆ ಗಳಲ್ಲೂ ಕಮ್ಯುನಿಸ್ಟ್ ಪಾರ್ಟಿ ಅದೇ ಸ್ಥಾನವನ್ನು ಉಳಿಸಿಕೊಂಡಿತ್ತು. ಈಗ ಪರಿಸ್ಥಿತಿ ಬೇರೆಯೇ ಆಗಿದೆ. ಬಲಪಂಥೀಯ ಕೋಮುವಾದಿ ಹಿಂದುತ್ವ ಪಕ್ಷ ಭಾರತೀಯ

ಜನತಾ ಪಾರ್ಟಿ ಕಾಂಗ್ರೆಸ್ಸಿಗೆ ಪರ್ಯಾಯವಾಗಿ ಬೆಳೆದಿದೆ. ಸ್ವಾತಂತ್ರ್ಯಾನಂತರದಲ್ಲಿ ಸುಮಾರು ಐದು ದಶಕಗಳ ಕಾಲ ಕೇಂದ್ರದಲ್ಲಿ ಅಧಿಕಾರ ನಡೆಸಿದ ಕಾಂಗ್ರೆಸ್ ಪಕ್ಷ ಈಗ ಸಮ್ಮಿಶ್ರ ಸರಕಾರದ ನೇತೃತ್ವ ವಹಿಸಿದೆ. ಭಾರತದಲ್ಲಿ ಈಗ ಸಮ್ಮಿಶ್ರ ಸರಕಾರದ ಯುಗ. ಕಾಂಗ್ರೆಸ್ ನೇತೃತ್ವದಲ್ಲಿರುವ ಯುಪಿಎ ಮತ್ತು ಭಾಜಪ ನಾಯಕತ್ವದಲ್ಲಿ ಇರುವ ಎನ್‌ಡಿಎ ಮಧ್ಯೆ ಸೆಣಸಾಟ. ಇದಕ್ಕೆ ಪರ್ಯಾಯವಾಗಿ ಬೇರೊಂದು ರಂಗ ಇನ್ನು ರೂಪುಗೊಳ್ಳಬೇಕಿದೆ.

ಭಾಷೆಯ ಆಧಾರದ ಮೇಲೆ ಪ್ರಾಂತಗಳನ್ನು ಪುನಾರಚಿಸುವ ವಿಚಾರವನ್ನು ಕಾಂಗ್ರೆಸ್ ತನ್ನ ಅಧಿವೇಶನದಲ್ಲಿ ಸ್ವಾತಂತ್ರ್ಯಪೂರ್ವದಲ್ಲೇ ಅಂಗೀಕರಿಸಿದ್ದರೂ ಅಧಿಕಾರಕ್ಕೆ ಬಂದ ಮೇಲೆ ಅದನ್ನು ಜಾರಿಗೆ ತರಲಿಲ್ಲ. ಅದಕ್ಕಾಗಿ ದೊಡ್ಡ ಹೋರಾಟವೇ ನಡೆಯಬೇಕಾಗಿ ಬಂತು. ಕನ್ನಡ ಮಾತಾಡುವ ಕರ್ನಾಟಕದ ಜನ ಹರಿದುಹಂಚಿಹೋಗಿದ್ದರು. ಹಾಗೆಯೇ ದಕ್ಷಿಣ ಭಾರತದಲ್ಲಿ ಮದರಾಸು ಪ್ರಾಂತದಲ್ಲಿ ತೆಲುಗು–ತಮಿಳು–ಮಲೆಯಾಳ ಭಾಷೆ ಮಾತಾಡುವ ಜನರಿದ್ದರು. ಮುಂಬಯಿ ಪ್ರಾಂತದಲ್ಲಿ ಮರಾಠಿ ಮತ್ತು ಗುಜರಾತಿ ಮಾತನಾಡುವ ಜನರಿದ್ದ ಪ್ರದೇಶಗಳಿದ್ದುವು. ಇದರ ಮೇಲೆ ದೇಸೀ ಸಂಸ್ಥಾನಗಳು ಪ್ರತ್ಯೇಕ ರಾಜ್ಯಗಳಾಗಿದ್ದುವು. ಉದಾಹರಣೆಗೆ ಹಳೆಯ ಮೈಸೂರು ಸಂಸ್ಥಾನ, ಹೈದರಾಬಾದ್ ಸಂಸ್ಥಾನ ಮತ್ತು ತಿರುವಾಂಕೂರು – ಕೊಚ್ಚಿ ರಾಜ್ಯ. ಕರ್ನಾಟಕದಲ್ಲಿ ಅಖಂಡ ಕರ್ನಾಟಕ ಏಕೀಕರಣ ಸಮಿತಿ ನೇತೃತ್ವದಲ್ಲಿ ಐವತ್ತರ ದಶಕದಲ್ಲಿ ಏಕೀಕರಣ ಹೋರಾಟ ನಡೆಯಿತು. ತೆಲುಗು ಭಾಷಿಕರು ಆಂಧ್ರಪ್ರದೇಶದ ಸ್ಥಾಪನೆಗಾಗಿ ನಡೆಸಿದ ಹೋರಾಟ ಉಗ್ರಸ್ವರೂಪ ಪಡೆದುಕೊಂಡದ್ದು ಆಮರಣಾಂತ ಉಪವಾಸ ಕೈಗೊಂಡಿದ್ದ ಪೊಟ್ಟಿ ಶ್ರೀರಾಮುಲು ನಿಧನಹೊಂದಿದ ಮೇಲೆ. ಈ ಹೋರಾಟಗಳಿಂದಾಗಿ ಎಚ್ಚೆತ್ತ ಕೇಂದ್ರ ಸರಕಾರ ರಾಜ್ಯ ಪುನರ್ ವಿಂಗಡನೆಗಾಗಿ ಆಯೋಗವನ್ನು ರಚಿಸಿತು. ತೆಲುಗು ಮಾತನಾಡುವ ಪ್ರದೇಶಗಳನ್ನು ಹೈದರಾಬಾದ್ ಸಂಸ್ಥಾನವನ್ನು ಸೇರಿಸಿ ಅಸ್ತಿತ್ವಕ್ಕೆ ಬಂದ ಆಂಧ್ರಪ್ರದೇಶ ಮೊದಲ ಭಾಷಾವಾರು ಪ್ರಾಂತ. ಅನಂತರ ೧೯೫೬ರ ನವೆಂಬರ್ ೧ರಂದು ಅಸ್ತಿತ್ವಕ್ಕೆ ಬಂದದ್ದು ಕರ್ನಾಟಕ, ತಮಿಳುನಾಡು ಮತ್ತು ಕೇರಳ. ಹಳೆಯ ಮೈಸೂರು ಸಂಸ್ಥಾನ, ಮುಂಬಯಿ ಪ್ರಾಂತದಲ್ಲಿದ್ದ ಉತ್ತರ ಕರ್ನಾಟಕದ ಜಿಲ್ಲೆಗಳು, ಮದರಾಸು ಪ್ರಾಂತದಲ್ಲಿದ್ದ ಮಂಗಳೂರು ಮತ್ತು ಬಳ್ಳಾರಿ, ಕೊಡಗು ಸೇರಿ ಕರ್ನಾಟಕ ರಾಜ್ಯ ಸ್ಥಾಪನೆಯಿಂದ ಕನ್ನಡಿಗರ ಬಹುದಿನದ ಕನಸು ನನಸಾಯಿತು. ಪ್ರಾರಂಭದಲ್ಲಿ ಹಳೆಮೈಸೂರಿನ ಕೆಲ ವಿಭಾಗದ ಜನರ ವಿರೋಧವಿದ್ದಾಗ್ಯೂ ಕರ್ನಾಟಕ ರಾಜ್ಯ ಅಸ್ತಿತ್ವಕ್ಕೆ ಬಂದಿತು. ರಾಜಧಾನಿ ಬೆಂಗಳೂರಿನಲ್ಲಿ ಆ ಹೊತ್ತಿಗೆ ಭವ್ಯವಾದ ವಿಧಾನಸೌಧ ಕಟ್ಟಡವೂ ಸಜ್ಜಾಯಿತು. ಈಗ ಇದರ ಜೊತೆಗೆ ವಿಕಾಸಸೌಧವೂ ಸೇರಿ, ಸರಕಾರದ ಹಲವು ಕಟ್ಟಡಗಳು ಅಸ್ತಿತ್ವಕ್ಕೆ ಬಂದಿವೆ.

ಭಾಷಾವಾರು ಪ್ರಾಂತಗಳು ರಚನೆಯಾದರೂ ಪ್ರಾದೇಶಿಕ ಅಸಮತೆ ನೀಗಲಿಲ್ಲ. ಅಭಿವೃದ್ಧಿಯನ್ನು ಕಾಣದ ಪ್ರದೇಶಗಳಲ್ಲಿ ಪ್ರತ್ಯೇಕತೆಯ ಕೂಗು ಎದ್ದಿರುವುದು ಗಮನಿಸಬೇಕಾದ ಸಂಗತಿ. ಅರ್ಧ ಶತಮಾನದ ನಂತರ ಆಂಧ್ರಪ್ರದೇಶ ಒಡೆದು ತೆಲಂಗಾಣ ರಾಜ್ಯ ಸ್ಥಾಪನೆಯಾಗುತ್ತಿದೆ. ಈ ಬಗ್ಗೆ ಕೇಂದ್ರ ಸರಕಾರ ಈಗಾಗಲೇ ನಿರ್ಧಾರ ಕೈಗೊಂಡಿದೆ. ತೆಲಂಗಾಣ ರಾಜ್ಯ ಸ್ಥಾಪನೆಯಾದರೆ ಪ್ರತ್ಯೇಕ ರಾಜ್ಯಗಳ ಸ್ಥಾಪನೆಗೆ ಸರಣಿ ಪ್ರತಿಕ್ರಿಯೆಯ ಸಂಭವ ಅಧಿಕವಾಗಿದೆ. ಅಂಥ ಸಂಭವವನ್ನು ತಪ್ಪಿಸುವುದು ಅಗತ್ಯ. ಆಡಳಿತ ನಡೆಸುವವರು ಹಿಂದುಳಿದ ಪ್ರದೇಶಗಳ ಅಭಿವೃದ್ಧಿಗೆ ಗಮನಕೊಡಬೇಕಾದ್ದು ಅನಿವಾರ್ಯ.

ಸ್ವಾತಂತ್ರ್ಯಪೂರ್ವ ಕಾಲದಲ್ಲಿ ದೇಶದಲ್ಲಿ ಕಾರ್ಮಿಕ ಚಳವಳಿಯನ್ನು ಸಂಘಟಿಸಿ, ಬೆಳೆಸಿದ ಏಕೈಕ ಸಂಸ್ಥೆ ೧೯೨೦ರಲ್ಲಿ ಸ್ಥಾಪನೆಯಾದ ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್. ಇದರಲ್ಲಿ ಕಾಂಗ್ರೆಸ್ಸಿಗರು, ಕಮ್ಯುನಿಸ್ಟರು–ಸೋಷಲಿಸ್ಟರು, ಇತರರೂ ಇದ್ದರು. ಸ್ವಾತಂತ್ರ್ಯಾನಂತರದಲ್ಲಿ ಕಾರ್ಮಿಕ ಚಳವಳಿಯಲ್ಲಿ ಒಡಕುಂಟಾದುದು ಕಾರ್ಮಿಕರ ಐಕ್ಯತೆಗೆ ಹಿನ್ನಡೆ. ೧೯೪೭ರಲ್ಲಿ ಕಾಂಗ್ರೆಸ್ ನೇತೃತ್ವದಲ್ಲಿ ಇಂಡಿಯನ್ ನ್ಯಾಷನಲ್ ಟ್ರೇಡ್ ಯೂನಿಯನ್ ಕಾಂಗ್ರೆಸ್ ಸ್ಥಾಪನೆಯಾಯಿತಾದರೆ, ೧೯೪೮ರಲ್ಲಿ ಸೋಷಲಿಸ್ಟ್ ಪಾರ್ಟಿ ನೇತೃತ್ವದಲ್ಲಿ ಹಿಂದ್ ಮಜ್ದೂರ್ ಸಭೆ ಸ್ಥಾಪನೆಯಾಯಿತು. ಈಗ ಎಲ್ಲ ರಾಜಕೀಯ ಪಕ್ಷಗಳೂ ತಮ್ಮದೇ ಆದ ಕಾರ್ಮಿಕ ಸಂಘಟನೆಗಳನ್ನು ಕಟ್ಟಿಕೊಂಡಿವೆ. ಸಂಘಟಿತ ಟ್ರೇಡ್ ಯೂನಿಯನ್ನುಗಳ ಒತ್ತಾಯದ ಮೇರೆಗೆ ೧೯೪೮ರಲ್ಲಿ ಕೈಗಾರಿಕಾ ವಿವಾದ ಕಾಯಿದೆ ಹಾಗೂ ಕಾರ್ಮಿಕರ ಹಿತರಕ್ಷಣೆಗಾಗಿ ಇತರ ಕಾನೂನುಗಳೂ ಅಮಲಿಗೆ ಬಂದುವು. ಆದರೆ ಇಂದು ಟ್ರೇಡ್ ಯೂನಿಯನ್ ಚಳವಳಿಯ ಚಹರೆಯೇ ಬದಲಾಗಿದೆ. ದೇಶದಲ್ಲಿ ಕೈಗಾರಿಕೆಗಳು ಅಭಿವೃದ್ಧಿಗೊಂಡಂತೆ ಕಾರ್ಮಿಕರು ಸಂಘಟಿತರಾಗಿದ್ದರೂ, ಅಸಂಘಟಿತ ಕಾರ್ಮಿಕರ ಸಮೂಹ ಅಧಿಕಗೊಂಡಿದೆ. ಕಾರ್ಮಿಕ ವಿವಾದಗಳು ನ್ಯಾಯಾಲಯದ ಮೆಟ್ಟಿಲು ಏರಿದ ಮೇಲೆ, ದೀರ್ಘಾವಧಿ ಒಪ್ಪಂದಗಳಾದ ಮೇಲೆ ಹೋರಾಟದ ಮೊನಚು ಕಡಿಮೆಯಾಗುತ್ತಿದೆ. ರಾಜಕೀಯ ಹೋರಾಟದಲ್ಲಿ ಕಾರ್ಮಿಕರ ಭಾಗವಹಿಸುವಿಕೆ ನಗಣ್ಯವಾಗುತ್ತಿದೆ.

## ತಿದ್ದುಪಡಿ

೨೦೧೪ರ ವಿಶೇಷ ಸಂಚಿಕೆಯ ೨೧೩ನೇ ಪುಟದಲ್ಲಿನ ಕೆ. ಎಸ್. ಪಾರ್ಥಸಾರಥಿ ಅವರ ‘ಮತ್ತೊಂದು ಗಣರಾಜ್ಯದಿನ ಒಂದಷ್ಟು ಚಿಂತೆ ಚಿಂತನೆಗಳು’ ಎಂಬ ಲೇಖನದ ಮೊದಲ ಪ್ಯಾರಾದಲ್ಲಿ *ಒಕ್ಕೂಟವಾಗಿರುವ ಈ ರಾಷ್ಟ್ರಕ್ಕೆ ಶ್ರೇಷ್ಠವೆನಿಸಿಕೊಳ್ಳುವ ಸಾಮರ್ಥ್ಯ* ತರುವುದಿಲ್ಲ ಎಂದಿದೆ. ಅದನ್ನು ‘ಒಕ್ಕೂಟವಾಗಿರುವ ಈ ರಾಷ್ಟ್ರಕ್ಕೆ ರಾಷ್ಟ್ರವೆನಿಸಿಕೊಳ್ಳುವ ಸಾಮರ್ಥ್ಯ ತರುವುದಿಲ್ಲ’ ಎಂದು ಓದಿಕೊಳ್ಳಲು ಲೇಖಕರು ವಿನಂತಿಸಿದ್ದಾರೆ.

ಭಾರತ ಸ್ವತಂತ್ರಗೊಂಡಾಗ ಶೀತಯುದ್ಧ ತೀವ್ರಗೊಂಡಿತ್ತು. ಸೋವಿಯೆತ್ ಒಕ್ಕೂಟ ಮತ್ತು ಪೂರ್ವ ಯೂರೋಪಿನ ಕಮ್ಯುನಿಸ್ಟ್ ರಾಷ್ಟ್ರಗಳು ಒಂದು ಕಡೆಯಾದರೆ, ಅಮೆರಿಕದ ನೇತೃತ್ವದಲ್ಲಿ ಬ್ರಿಟನ್, ಪಶ್ಚಿಮ ಯೂರೋಪು ಮತ್ತು ಇತರ ಬಂಡವಾಳಶಾಹಿ ದೇಶಗಳಿದ್ದವು. ಇಂಥ ಪರಿಸ್ಥಿತಿಯಲ್ಲಿ ಭಾರತ ಬ್ರಿಟಿಷರು ಸ್ಥಾಪಿಸಿದ್ದ ಕಾಮನ್‌ವೆಲ್ತ್ ಕೂಟದ ಸದಸ್ಯನಾಗಿದ್ದರೂ, ಯಾವ ಬಣಕ್ಕೂ ಸೇರದೆ ಸ್ವತಂತ್ರವಾದ ಧೋರಣೆ ಅನುಸರಿಸಿದ್ದು ಸ್ವಾಗತಾರ್ಹ. ಸ್ವಾತಂತ್ರ್ಯಪೂರ್ವದಲ್ಲಿಯೇ ಅಂದರೆ ೧೯೪೬ರಲ್ಲಿ ಜವಹರಲಾಲ್ ನೇತೃತ್ವದಲ್ಲಿ ಭಾರತ–ಸೋವಿಯೆತ್ ಸಂಬಂಧಗಳು ಬೆಳೆಯತೊಡಗಿದ್ದುವು. ಸ್ವಾತಂತ್ರ್ಯಾನಂತರ ಭಾರತದೊಂದಿಗೆ ರಾಯಭಾರಿ ಸಂಬಂಧಗಳನ್ನು ಸ್ಥಾಪಿಸಿದ ಮೊದಲ ದೇಶ ಸೋವಿಯೆತ್ ಒಕ್ಕೂಟ. ಮುಂದೆ ಈ ಮೈತ್ರಿ ಸಾಕಷ್ಟು ದೃಢವಾಗಿ ಬೆಳೆಯಿತಲ್ಲದೆ, ಇಂದೂ ಕೂಡ ರಷ್ಯದೊಂದಿಗೆ ಸಂಬಂಧಗಳು ವರ್ಧಿಸುತ್ತಿವೆ. ಐವತ್ತರ ದಶಕದಲ್ಲಿ ಅಮೆರಿಕ–ಬ್ರಿಟನ್ ನಾಯಕತ್ವದಲ್ಲಿ ಸ್ಥಾಪನೆಗೊಂಡ ಸೈನಿಕಕೂಟಗಳಿಂದ ಭಾರತ ದೂರ ಉಳಿಯಿತು. ಈ ನಿರ್ಧಾರದಿಂದ ಅದು ಆ ದೇಶಗಳ ಅವಕೃಪೆಗೆ ಒಳಗಾಯಿತು. ವಿಶ್ವಸಂಸ್ಥೆಯೊಳಗೂ ಮತ್ತು ಹೊರಗೂ ಭಾರತ ವಸಾಹತುಶಾಹಿ ಆಡಳಿತದ ಅಂತ್ಯಕ್ಕಾಗಿ, ದಕ್ಷಿಣ ಆಫ್ರಿಕದಲ್ಲಿನ ಸರಕಾರ ಪಾಲಿಸುತ್ತಿದ್ದ ವರ್ಣಭೇದನೀತಿಯ ವಿರುದ್ಧವಾಗಿ ನಿರಂತರವಾಗಿ ಶ್ರಮಿಸಿತು. ಹೊಸದಾಗಿ ಸ್ವತಂತ್ರಗೊಂಡ ಏಷಿಯ, ಆಫ್ರಿಕ ಮತ್ತು ಲ್ಯಾಟಿನ್ ಅಮೆರಿಕ ದೇಶಗಳೊಂದಿಗೆ ಮೈತ್ರಿಯನ್ನು ಬೆಳೆಸಿದ ಭಾರತ ಅವನ್ನು ಒಟ್ಟುಗೂಡಿಸಲು ಕ್ರಮ ಕೈಗೊಂಡಿತು. ಮುಂದೆ ಅದು ಅಲಿಪ್ತ ಚಳವಳಿಯಾಗಿ ರೂಪುಗೊಂಡಿತು. ಈ ಚಳವಳಿ ಜಾಗತಿಕ ವ್ಯವಹಾರಗಳಲ್ಲಿ ಅಂದಿನ ದಿನಗಳಲ್ಲಿ ಪ್ರಾಮುಖ್ಯವಾದ ಪಾತ್ರವಹಿಸಿತು. ನೂರಕ್ಕೂ ಹೆಚ್ಚು ರಾಷ್ಟ್ರಗಳ ಸದಸ್ಯತ್ವವನ್ನು ಹೊಂದಿದ್ದ ಅಲಿಪ್ತ ಚಳವಳಿಯನ್ನು ಅಮೆರಿಕ ಎಂದೂ ಸಹಿಸಲಿಲ್ಲ. ಅಲಿಪ್ತ ನೀತಿಯನ್ನು ಅದು ಅನೀತಿ ಎಂದು ಪರಿಗಣಿಸಿತ್ತು, ಆದರೂ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಅಲಿಪ್ತ ಚಳವಳಿ ವಹಿಸಿದ ಪಾತ್ರ ಗಣನೀಯ. ಸೋವಿಯೆತ್ ಒಕ್ಕೂಟದ ವಿಭಜನೆಯ ನಂತರ ಈ ಚಳವಳಿ ದುರ್ಬಲಗೊಂಡಿದೆ. ಈಗ ಹೆಸರಿಗೆ ಮಾತ್ರ ಈ ಸಂಘಟನೆ ಉಳಿದುಕೊಂಡಿದೆ. ಏಕಕೇಂದ್ರೀಯ ವ್ಯವಸ್ಥೆಯಲ್ಲಿ ಭಾರತ ಸರಕಾರ ಈಚಿನ ವರ್ಷಗಳಲ್ಲಿ ಸ್ವತಂತ್ರ ವಿದೇಶೀ ನೀತಿಯ ವಿಚಾರವನ್ನು ತ್ಯಜಿಸಿ, ಹೆಚ್ಚು ಹೆಚ್ಚಾಗಿ ಅಮೆರಿಕದ ಕಡೆಗೆ ವಾಲುತ್ತಿರುವುದೀಗ ಒಳ್ಳೆಯ ಬೆಳವಣಿಗೆಯಲ್ಲ. ಇದು ನಮ್ಮ ಸ್ವಾತಂತ್ರ್ಯ ಮತ್ತು ಸಾರ್ವಭೌಮತ್ವಗಳಿಗೆ ಚ್ಯುತಿ ತರುವಂಥ ಧೋರಣೆಯಾಗಿದೆ.

(ಮುಂದುವರಿಯುವುದು)

ಸಿ. ಆರ್. ಕೃಷ್ಣರಾವ್
‘ಚೌಬೀನ’, ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ
ಬೆಂಗಳೂರು – ೮೫

## ಬಂಗ್ಲಾದೇಶ : ಅನಿಶ್ಚಿತತೆಯ ಮುಂದುವರಿಕೆ

ನೆರೆಯ ಬಂಗ್ಲಾದೇಶದಲ್ಲಿ ವಿರೋಧ ಪಕ್ಷಗಳ ಭಾಗವಹಿಸುವಿಕೆ ಇಲ್ಲದೆಯೇ ಚುನಾವಣೆಗಳು ಜರುಗಿ ಶೇಕ್ ಹಸೀನಾ ನಾಯಕತ್ವದಲ್ಲಿರುವ ಅವಾಮಿ ಲೀಗ್ ಮತ್ತೆ ಅಧಿಕಾರಕ್ಕೆ ಬಂದಿದೆ. ಮೂರನೆಯ ಬಾರಿಗೆ ಪ್ರಧಾನಿಯಾಗಿ ಶೇಕ್ ಹಸೀನಾ ಪ್ರಮಾಣವಚನ ಸ್ವೀಕರಿಸಿದ್ದಾರೆ. ಆದರೆ ಹಿಂಸಾಚಾರ ಮುಂದುವರಿದಿದೆ. ಚುನಾವಣೆಯ ನಂತರ ಅಲ್ಪಸಂಖ್ಯಾತರ ಮೇಲೆ ದಾಳಿ ನಡೆದಿರುವುದೀಗ ಆತಂಕಕಾರಿ. ಚುನಾವಣೆಗಳನ್ನು ಜನವರಿ ೫ರಂದು ನಡೆಸಲು ಘೋಷಣೆಯಾದಾಗಲೇ ಬಂಗ್ಲಾದೇಶದ ಪ್ರಮುಖ ಪ್ರತಿಪಕ್ಷವಾದ ಬೇಗಂ ಖಲೀದ ನಾಯಕತ್ವದ ಬಂಗ್ಲಾದೇಶ ರಾಷ್ಟ್ರೀಯ ಪಕ್ಷ ಹಾಗೂ ಅದರ ಜೊತೆಗಿರುವ ಇತರ ಹದಿನೆಂಟು ಬಲಂಥೀಯ ಹಾಗೂ ಇಸ್ಲಾಮಿಕ್ ಪಕ್ಷಗಳು ಚುನಾವಣೆ ಬಹಿಷ್ಕರಿಸಲು ನಿರ್ಧರಿಸಿದ್ದುವು. ಪ್ರತಿಪಕ್ಷಗಳ ಬೇಡಿಕೆ ಚುನಾವಣೆಗಳನ್ನು ಹಂಗಾಮಿ ತಟಸ್ಥ ಸರಕಾರವೊಂದರ ಮೇಲ್ವಿಚಾರಣೆಯಲ್ಲಿ ನಡೆಸಬೇಕು ಎಂಬುದಾಗಿತ್ತು. ಆಡಳಿತದಲ್ಲಿದ್ದ ಅವಾಮಿ ಲೀಗ್ ಪಕ್ಷ ಇದಕ್ಕೆ ಪ್ರತಿಯಾಗಿ ಎಲ್ಲ ಪಕ್ಷಗಳನ್ನು ಒಳಗೊಂಡ ರಾಷ್ಟ್ರೀಯ ಸರಕಾರದ ಅಡಿಯಲ್ಲಿ ಚುನಾವಣೆ ನಡೆಸುವ ಸೂಚನೆ ಮಂಡಿಸಿತು. ಇದಕ್ಕೆ ಪ್ರತಿಪಕ್ಷಗಳು ಸಮ್ಮತಿಸಲಿಲ್ಲ, ಹಾಗಾಗಿ ಪ್ರತಿಪಕ್ಷಗಳು ಚುನಾವಣೆಯನ್ನು ಬಹಿಷ್ಕರಿಸಲು ತೀರ್ಮಾನಿಸಿದುವು.

ಚುನಾವಣೆಗಳನ್ನು ವಿರೋಧಿಸಲು ಬಂಗ್ಲಾದೇಶ ರಾಷ್ಟ್ರೀಯ ಪಕ್ಷ ಜನವರಿ ೧ರಿಂದ ರಸ್ತೆ ತಡೆ, ರೈಲ್ವೆ ಮತ್ತು ಜಲಮಾರ್ಗಗಳ ಬಂದ್‌ಗೆ ಕರೆ ನೀಡಿತು. ಇದರಿಂದಾಗಿ ಚುನಾವಣೆಗಳು ಹಿಂಸಾಚಾರ ಹಾಗೂ ಗಲಭೆಗಳಲ್ಲಿ ಮುಗಿಯಿತು. ಪ್ರತಿ ಪಕ್ಷಗಳಿಂದ ಚುನಾವಣೆಯ ಬಹಿಷ್ಕಾರದ ಪರಿಣಾಮವಾಗಿ ೧೫೩ ಮಂದಿ ಅವಾಮಿ ಲೀಗ್ ಪಕ್ಷದ ಅಭ್ಯರ್ಥಿಗಳು ಅವಿರೋಧವಾಗಿ ಆಯ್ಕೆಗೊಂಡರು. ಉಳಿದ ೧೪೭ ಸ್ಥಾನಗಳಿಗೆ ಮಾತ್ರ ಚುನಾವಣೆ ನಡೆಯಿತು. ಅವಾಮಿ ಲೀಗ್ ಪಕ್ಷ ದೇಶದ ಪಾರ್ಲಿಯಮೆಂಟಿನಲ್ಲಿ ಈಗ ಮೂರನೇ ಎರಡರಷ್ಟು ಬಹುಮತವನ್ನು ಹೊಂದಿದೆ. ಆದರೆ ಪ್ರತಿಪಕ್ಷಗಳು ತಮ್ಮ ಹೋರಾಟ ಮುಂದುವರಿಸಿರುವುದರಿಂದ ದೇಶದಲ್ಲಿ ಹಿಂಸಾಚಾರ ಹಾಗೂ ಅನಿಶ್ಚಿತತೆ ಇದೆ. ಚುನಾವಣೆಯ ಸಂದರ್ಭದಲ್ಲಿ ನಡೆದ ಗಲಭೆಗಳಲ್ಲಿ ಕನಿಷ್ಠ ೨೦ ಮಂದಿ ಸಾವಿಗೀಡಾಗಿದ್ದಾರೆ.

ರಾಜಕೀಯ ಅಸ್ಥಿರತೆ ಬಂಗ್ಲಾದೇಶಕ್ಕೆ ಹೊಸದೇನಲ್ಲ. ನಾಲ್ಕು ದಶಕಗಳ ಹಿಂದೆ ೧೯೭೧ರಲ್ಲಿ ಅಸ್ತಿತ್ವಕ್ಕೆ ಬಂದಾಗಿನಿಂದ ಈ ದೇಶದಲ್ಲಿ ಹಿಂಸಾಚಾರ ನಡೆದಿದೆ. ಬಂಗ್ಲಾದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಅವಾಮಿ ಲೀಗ್‌ನ ನಾಯಕ ಶೇಕ್ ಮುಜಿಬುರ್ ರೆಹ್ಮಾನ್ ಅಧಿಕಾರದಲ್ಲಿದ್ದುದು ಅಲ್ಪಕಾಲ ಮಾತ್ರ. ಅವರ ಕಗ್ಗೊಲೆಯ ನಂತರ ಅಸ್ಥಿರತೆ, ಮಿಲಿಟರಿ ಸರ್ವಾಧಿಕಾರ. ಕೆಲ ಕಾಲಾನಂತರ ಚುನಾಯಿತ ಸರಕಾರ ಅಧಿಕಾರಕ್ಕೆ. ಈ ಮಧ್ಯೆ ಭಾರತ–ಬಂಗ್ಲಾದೇಶದ ನಡುವೆ ಸಂಬಂಧಗಳು ಅಷ್ಟೇನೂ ಸೌಹಾರ್ದಯುತವಾಗಿರಲಿಲ್ಲ. ವಿದೇಶದಲ್ಲಿ ನೆಲೆಸಿದ್ದ ಶೇಕ್ ಹಸೀನ ದೇಶಕ್ಕೆ ಹಿಂದಿರುಗಿ ಅವಾಮಿ ಲೀಗ್ ಪಕ್ಷವನ್ನು ಪುನರುಜ್ಜೀವನಗೊಳಿಸಿ ಅಧಿಕಾರಕ್ಕೆ ಬಂದ ಮೇಲೆ ಭಾರತ–ಬಂಗ್ಲಾದೇಶ ಸಂಬಂಧಗಳು ಸುಧಾರಿಸಿದುವು. ಪಾಕಿಸ್ತಾನದ ಭಾಗವಾಗಿದ್ದ ಈ ಭೂಭಾಗ ಪ್ರತ್ಯೇಕಗೊಂಡದ್ದು ಅಭಿವೃದ್ಧಿ ವಂಚಿತವಾಗಿದ್ದುದರಿಂದ ಹಾಗೂ ರಾಜಕೀಯ ಮೇಲಾಟದಿಂದ. ಈಗಲೂ ಬಂಗ್ಲಾದೇಶ ಅಸ್ಥಿರತೆಯಿಂದಾಗಿ ಹಿಂದುಳಿದ ದೇಶವಾಗಿಯೇ ಉಳಿದಿದೆ, ಹೆಚ್ಚಿನ ಅಭಿವೃದ್ಧಿಯನ್ನು ಕಾಣದೆ ಇದೆ.

ಅಮೆರಿಕ ಬಂಗ್ಲಾದೇಶದ ಅಸ್ಥಿರತೆಯ ಲಾಭ ಪಡೆದುಕೊಳ್ಳಲು ನೋಡುತ್ತಿದೆ. ಈಚೆಗೆ ನಡೆದ ಚುನಾವಣೆಗಳಲ್ಲಿ ಪ್ರತಿಪಕ್ಷಗಳು ಭಾಗವಹಿಸದೇ ಇದ್ದುದರಿಂದ ಅಧಿಕಾರಾರೂಢ ಪಕ್ಷದ ವಿಜಯ ಅಕ್ರಮ ಎಂದು ಅದು ಅಭಿಪ್ರಾಯಪಟ್ಟಿದೆ. ಮರು ಚುನಾವಣೆಗೆ ಅಮೆರಿಕ ಆಗ್ರಹಿಸಿದೆ. ಆಡಳಿತಪಕ್ಷ ಮತ್ತು ಪ್ರತಿಪಕ್ಷಗಳು ಮಾತುಕತೆ ನಡೆಸಿ ಬಂಗ್ಲಾದೇಶದ ಜನರ ಆದೇಶ ಪಡೆಯಲು ಮರುಚುನಾವಣೆ ನಡೆಸಲು ಸಿದ್ಧತೆ ಮಾಡಬೇಕೆಂದು ಸೂಚಿಸಿದೆ. ಭಾರತ ಸರಕಾರದ ನಿಲುವು ಅಮೆರಿಕದ ನಿಲುವಿಗೆ ವಿರುದ್ಧವಾಗಿದೆ. ಅಧಿಕಾರದಲ್ಲಿರುವ ಪಕ್ಷ ಚುನಾವಣೆಗಳನ್ನು ಕ್ರಮಬದ್ಧವಾಗಿ ನಡೆಸಲಾಗಿದೆ ಎಂಬುದಾಗಿದೆ. ಅಧಿಕಾರ ವಹಿಸಿಕೊಂಡಿರುವ ಪ್ರಧಾನಿ ಶೇಕ್ ಹಸೀನಾ ಶಾಂತಿ ಸ್ಥಾಪನೆಗಾಗಿ ಕ್ರಮಕೈಗೊಂಡಿದ್ದಾರೆ. ದೇಶದಲ್ಲಿ ಪ್ರಜಾಪ್ರಭುತ್ವವನ್ನು ಕಾಪಾಡಲು ಎಲ್ಲ ಪ್ರಯತ್ನಗಳನ್ನು ಮಾಡುವ ಭರವಸೆ ನೀಡಿದ್ದಾರೆ. ಬಂಗ್ಲಾದೇಶದ ಆಂತರಿಕ ವ್ಯವಹಾರಗಳಲ್ಲಿ ತಲೆಹಾಕದಂತೆ ಅಮೆರಿಕದ ಮೇಲೆ ಒತ್ತಾಯ ತರುವುದು ಎಲ್ಲ ಪ್ರಜಾಪ್ರಭುತ್ವ ಸಂಸ್ಥೆಗಳ ಕರ್ತವ್ಯವಾಗಿದೆ.



ಪ್ರಧಾನಿ ಶೇಕ್ ಹಸೀನಾ

## ದಕ್ಷಿಣ ಸುಡಾನ್ : ಆಂತರ್ಯುದ್ಧದ ಮಡುವಿನಲ್ಲಿ

ದಕ್ಷಿಣ ಸುಡಾನ್ ಸ್ವತಂತ್ರ ರಾಷ್ಟ್ರವಾಗಿ ಉದಯಿಸಿ ಎರಡೂವರೆ ವರ್ಷವಾಗಿದೆ ಅಷ್ಟೆ. ಸಾಕಷ್ಟು ಹಿಂಸಾಚಾರಗಳನ್ನು, ಸಶಸ್ತ್ರ ಘರ್ಷಣೆಗಳನ್ನು ಸುಮಾರು ನಾಲ್ಕು ದಶಕಗಳ ಕಾಲ ಅನುಭವಿಸಿದ ಈ ದೇಶದಲ್ಲಿ ಮತ್ತೆ ಆಂತರ್ಯುದ್ಧದ ಪರಿಸ್ಥಿತಿ ಉಂಟಾಗಿದೆ. ಅಧ್ಯಕ್ಷ ಸಾಲ್ವಕೀಯಿರ್ ಮತ್ತು ಮಾಜಿ ಉಪಾಧ್ಯಕ್ಷ ರೀಕ್‌ಮಚಾರ್ ನಡುವಣ ವೈಷಮ್ಯ ಈಗಾಗಲೇ ಸಹಸ್ರಾರು ಜನರನ್ನು ಆಹುತಿ ತೆಗೆದುಕೊಂಡಿದೆ. ಅಧ್ಯಕ್ಷ ಕೀಯಿರ್ ಡಿಂಕಾ ಎಂಬ ಜನಾಂಗಕ್ಕೆ ಸೇರಿದವರಾಗಿದ್ದರೆ, ಮಚಾರ್ ನ್ಯೂರ್ ಎಂಬುದಕ್ಕೆ ಸೇರಿದ್ದಾರೆ. ತೈಲ ರಾಜಕಾರಣದ ಹಿನ್ನೆಲೆಯಲ್ಲಿ ಭುಗಿಲೆದ್ದಿರುವ ಈ ಜನಾಂಗ ಸಂಘರ್ಷ ಅಂತರ್ಯುದ್ಧದ ಹಂತ ತಲಪಿದೆ. ಡಿಸೆಂಬರ್ ಮಧ್ಯದಲ್ಲಿ ಪ್ರಾರಂಭವಾದ ಈ ಘರ್ಷಣೆಗಳಲ್ಲಿ ೮೧ ಸಾವಿರ ಮಂದಿ ತಮ್ಮ ಆಸ್ತಿಪಾಸ್ತಿ ಕಳೆದುಕೊಂಡಿದ್ದಾರೆ, ಸುಮಾರು ೫೦ ಸಾವಿರ ಮಂದಿ ವಿಶ್ವಸಂಸ್ಥೆಯ ನಿರಾಶ್ರಿತ ಶಿಬಿರಗಳಲ್ಲಿ ಆಶ್ರಯ ಪಡೆದಿದ್ದಾರೆ. ವಿಶ್ವಸಂಸ್ಥೆಯ ಶಾಂತಿ ಪಡೆಯ ಉಪಸ್ಥಿತಿಯಲ್ಲಿಯೂ ಈ ಹತ್ಯಾಕಾಂಡ ಜರುಗಿದೆ. ಈ ಶಾಂತಿ ಪಡೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾರತೀಯ ಯೋಧರೇ ಇದ್ದು ಇಬ್ಬರು ಭಾರತೀಯ ಯೋಧರು ಅಸುನೀಗಿದ್ದಾರೆ. ಈ ಬೆಳವಣಿಗೆಗಳು ಆಫ್ರಿಕ ಖಂಡದ ಈ ಪ್ರದೇಶದಲ್ಲಿ ಆತಂಕ ಮೂಡಿಸಿದೆ. ವಿಶ್ವಸಂಸ್ಥೆ ಶಾಂತಿಪಾಲನಾ ಪಡೆಯ ಸಂಖ್ಯೆಯನ್ನು ಹೆಚ್ಚಿಸಲು ನಿರ್ಧರಿಸಿದೆ. ಅಮೆರಿಕ ಸೇನೆಯನ್ನು ರವಾನಿಸಲು ತುದಿಗಾಲ ಮೇಲೆ ನಿಂತಿದೆ. ಬರಾಕ್ ಒಬಾಮಾ ಆಡಳಿತೆ ಆರು ಗಂಟೆಗಳ ಅವಧಿಯಲ್ಲಿ ಸೇನೆ ಕಳಿಸಲು ಸಿದ್ಧ ಎಂದು ಹೇಳಿದೆ. ಅಮೆರಿಕದ ಆಸಕ್ತಿ ಇರುವುದು ದಕ್ಷಿಣ ಸುಡಾನ್‌ನ ತೈಲಸಂಪತ್ತಿನ ಮೇಲೆ.

ಸ್ವತಂತ್ರ ರಾಷ್ಟ್ರವಾಗಿ ೧೯೫೬ರಲ್ಲಿ ಸ್ವಾತಂತ್ರ್ಯ ಪಡೆದುಕೊಂಡ ಸುಡಾನ್ ಉದ್ದಕ್ಕೂ ಅಸ್ಥಿರತೆ, ಮಿಲಿಟರಿ ಸರ್ವಾಧಿಕಾರ, ಆಂತರಿಕ ಘರ್ಷಣೆಗಳಲ್ಲಿ ಮುಳುಗಿದೆ. ಇದರ ಮೇಲೆ ಪ್ರಕೃತಿ ವಿಕೋಪದಿಂದಲೂ ಸಾಕಷ್ಟು ನಷ್ಟವನ್ನು, ಸಾವು–ನೋವುಗಳನ್ನು ಕಂಡಿದೆ. ಅತ್ಯಂತ ಕಡಿಮೆ ವ್ಯವಸಾಯಯೋಗ್ಯ ಭೂಮಿ ಹೊಂದಿರುವ ಈ ದೇಶಕ್ಕೆ ವರಮಾನ ತೈಲದ ಮಾರಾಟದಿಂದ ಮಾತ್ರ. ದೇಶದ ಉತ್ತರ ಭಾಗದಲ್ಲಿ ಮುಸ್ಲಿಮರೇ ಹೆಚ್ಚಾಗಿದ್ದು ದಕ್ಷಿಣದಲ್ಲಿ ಕ್ರಿಶ್ಚಿಯನ್ನರ ಪ್ರಾಬಲ್ಯ. ಎರಡೂ ಭಾಗಗಳಲ್ಲಿರುವ ವಿವಿಧ ಜನಾಂಗಗಳು, ಬುಡಕಟ್ಟುಗಳ ಮಧ್ಯೆ ನಿರಂತರ ಸಂಘರ್ಷ. ಇದು ಈ ದೇಶದ ಪರಿಸ್ಥಿತಿ. ೧೯೭೨ರಿಂದ ನಡೆದ ಅಂತಃಕಲಹಗಳಲ್ಲಿ ಹತ್ತಾರು ಲಕ್ಷ ಮಂದಿ ಹತರಾಗಿದ್ದಾರೆಂದು ಅಂದಾಜು. ೨೦೧೧ರ ಜುಲೈನಲ್ಲಿ ದಕ್ಷಿಣ ಸುಡಾನ್ ಅಸ್ತಿತ್ವಕ್ಕೆ ಬಂತು. ಈಗ ಅದು ಅಂತಃಕಲಹದಲ್ಲಿ ಮತ್ತೆ ಮುಳುಗಿದೆ.

**ಸೀಯಾರ್ಕೆ**

'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫



# ಜನಪದ ಸಾಹಿತ್ಯದಲ್ಲಿ ಕಥನ ಕವನ

ಕಥನ ಕವನ "ಕಥನ ಮತ್ತು ಕವನ" ಎಂಬೆರಡು ಪದಗಳಿಂದ ಕಥನ ಕಾವ್ಯವಾಗಿದೆ. ಕವನವು ಕಥೆಯನ್ನು ಒಳಗೊಂಡಿದೆ. ಕಥೆಯನ್ನು ಒಳಗೊಂಡ ಪದ್ಯಕಾವ್ಯ ಕಥನಕವನವು ಆಕರ್ಷಕ ಕಥೆ ಮತ್ತು ಪಾತ್ರವನ್ನು ಒಳಗೊಂಡಿರುತ್ತದೆ. ಕವಿತೆಯ ರೂಪದಲ್ಲಿ ಕಥೆಯನ್ನು ಕಣ್ಣಿಗೆ ಕಟ್ಟುವಂತೆ ಪಾತ್ರ, ದೃಶ್ಯಾವಳಿಗಳನ್ನು ಚಿತ್ರಿಸುವುದು ಇದರ ಮುಖ್ಯ ಉದ್ದೇಶ ಮತ್ತು ಸ್ವರೂಪವಾಗಿದೆ. ಕಥನ ಕವನದಲ್ಲಿ ಗಂಭೀರವಾದ ವಿಷಯ ಒಳಗೊಂಡಿರುತ್ತದೆ. ತೀವ್ರವಾದ ಭಾವಗಳನ್ನು ಒಳಗೊಂಡಿರುತ್ತದೆ. ಕಥನ ಕವನ ಹೆಚ್ಚಾಗಿ ಕರುಣರಸ ಪ್ರಧಾನವಾಗಿರುತ್ತದೆ. ಲೋಕದ ಬದುಕನ್ನು ಒಳಗೊಂಡಿರುತ್ತದೆ. ವ್ಯಕ್ತಿಗತವಾಗಿ ಬೆಳೆಯುತ್ತಾ ಇಡೀ ಸಮಾಜ, ಕಾಲದ ಪರಿಸ್ಥಿತಿಯನ್ನು ಚಿತ್ರಿಸುವುದು. ಕಥನ ಕವನ ದಲ್ಲಿ ಸಂಭಾಷಣ ಶೈಲಿಯಿಂದ ಹೆಣೆಯಲ್ಪಟ್ಟಿರುತ್ತದೆ. ಕಾವ್ಯರೂಪದಲ್ಲಿ ಒಂದು ಕಥೆಯನ್ನು ಹೇಳುವ ಹೊಣೆಗಾರಿಕೆಯನ್ನು ಹೊತ್ತಿರುತ್ತದೆ. "ನಾಟಕೀಯತೆ ಮತ್ತು ಸಂಭಾಷಣೆ" ಕಥನ ಕವನದ ಜೀವಾಳವಾಗಿದೆ.

"ಕನ್ನಡ ನೆಲದ ಮೂಲಸಾಹಿತ್ಯವಾದ ಜನಪದ ಸಾಹಿತ್ಯದಲ್ಲಿ ಕಥನ ಕವನಗಳಿಗೆ ಮಹತ್ವದ ಸ್ಥಾನವಿದೆ. ಕೊಣವೆಗೌಡ, ಡೊಂಬರ, ಚೆನ್ನಿ, ಲಕ್ಕಣ್ಣ, ಈರಣ್ಣ, ಕೆರಗೆಹಾರ ಮುಂತಾದವು ಪ್ರಸಿದ್ಧ ಜನಪದ ಕಥನ ಗೀತೆಗಳಾಗಿವೆ. ಲಾವಣಿ ಪ್ರಕಾರವು ಕೂಡಾ ಕಥೆಗಳನ್ನು ಒಳಗೊಂಡಿದ್ದು, ಕಥನ ಗೀತೆಗಳಲ್ಲಿಯೇ ಸೇರಿಸಬಹುದಾದ ಸಾಹಿತ್ಯ ಪ್ರಕಾರವಾಗಿದೆ. ಸುಪ್ರಸಿದ್ಧವಾದ "ಗೋವಿನ ಕಥೆ" ಸೊಗಸಾದ ಕಥನ ಕವನಕ್ಕೊಂದು ನಿದರ್ಶನವಾದೀತು" ಎಂದು ಡಾ॥ ಜಿ. ವರದರಾಜರವರು ಹೇಳಿದ್ದಾರೆ.

ಕಥನ ಗೀತೆಗಳು ವಸ್ತುನಿಷ್ಠ ಭಾವವನ್ನು ಒಳಗೊಂಡಿರುತ್ತವೆ. ಪುರಾಣ, ಪವಾಡ, ಚರಿತ್ರೆ, ಪರಾಕ್ರಮ, ಶೌರ್ಯ, ತ್ಯಾಗ, ಬಲಿದಾನ, ಬರಗಾಲ, ಅಪವಾದ, ಕಾಮ, ಬಡತನದ ದುರಂತ ಚಿತ್ರಣ ಮೊದಲಾದ ಘಟನಾವಳಿಗಳನ್ನು ಒಳಗೊಂಡ ಹಾಡಿನ ರೂಪದ ಕಥಾನಕಗಳನ್ನು ಜನಪದ ಕಥನ ಗೀತೆಗಳೆಂದು ಕರೆಯಲಾಗಿದೆ. ಇವು ಸಮಾಜದ ಜೀವಂತ ಕನ್ನಡಿಗಳಾಗಿವೆ. ಇಲ್ಲಿ ಮೂಡಿಬಂದ ಘಟನೆಗಳು ವಾಸ್ತವದಲ್ಲಿ ಜಾಗತೀಕರಣದ ಮೂಸೆಯಲ್ಲಿ ನಾವು ಬದುಕುತ್ತಿದ್ದರೂ ಈ ಕಥನದ ವಸ್ತು, ಕಥೆಗಳು ನಮ್ಮ ಹೃದಯ ಮುಟ್ಟದೇ ಇರಲಾರವು. ಹೃದಯಸ್ಪರ್ಶಿ ಗೀತೆಗಳೇ ಜನಪದ ಕಥನ ಕವನಗಳು.

ಕನ್ನಡ ನಾಡಿನ ಬೇರೆ ಬೇರೆ ಪ್ರದೇಶಗಳಲ್ಲಿ ಕಥನ ಕವನಗಳು ಹುಟ್ಟಿಕೊಂಡಿವೆ. ಹಾಗೆಯೇ ಜಾನಪದ ಸಂಶೋಧನಾ ಸಂಸ್ಥೆಗಳು, ವಿಶ್ವವಿದ್ಯಾಲಯಗಳು, ಜಾನಪದ ವಿಶ್ವವಿದ್ಯಾಲಯಗಳು ಇವುಗಳ ಸಂಗ್ರಹ ಕಾರ್ಯವನ್ನು ಮಾಡುತ್ತಾ ಬಂದಿವೆ. ಜನಪದ ಪ್ರಸಿದ್ಧ ಕಥನ ಕವನಗಳಾದ "ಗೋವಿನ ಹಾಡು, ಕೆರೆಗೆ ಹಾರ, ಉತ್ತರದೇವಿ, ನೀಲಗಂಗಾನ ಹಾಡು, ಗಂಗಿಗೌರಿ ಹಾಡು, ಕಲಿಯುಗದ ಬಾಲೆ, ಈರೋಬಿ, ಕಾಶೀಬಾಯಿ ಹಾಡು, ಕೊಂತ್ಯಮ್ಮ ಬರೆದ ಹಾಡು, ವಾಳೀಹಾಡು, ಸಂಗವಮಾಡ್ಯಾಳ ನಿಮತಂಗಿ, ಸಿರಿಕವಲಿ, ಹಲಗಲಿ ಬೇಡರು, ಗ್ವಾಲಣ್ಣನ ವೀರಗಾಥಾ, ನಿನ ಮಕವ ಸಿಗಲಿಲ್ಲ, ಚಿಕ್ಕಿ ಉಂಗುರಕ ನಾರಿ ಮನಸೋತಳೋ, ಬಣ್ಣದ ಗುಬ್ಬಾರು ಮುಂತಾದವು ಜನಪ್ರಿಯವಾದ ಕಥನಗೀತೆಗಳೆನಿಸಿವೆ." ಎಂದು ಶಂಭು ಬಳಿಗಾರ ಅವರು ಕಥನಕವನಗಳನ್ನು ಗುರುತಿಸುತ್ತಾರೆ. ಈ ಜನಪದ ಕಥನ ಕವನಗಳಲ್ಲಿ "ಆಕಾಶ, ಸೂರ್ಯ, ಚಂದ್ರ, ನಕ್ಷತ್ರ, ಗ್ರಹ, ಮೋಡ, ಮಳೆ, ಮಕ್ಕಳು, ಹಸಿವು ಇತ್ಯಾದಿ ವಿಷಯಗಳ ಹಿಂದೆ" ಇರುವ ಒಟ್ಟು ಕಥನ ಕವನದಲ್ಲಿ ಬಿಂಬಿತ ವಾಗುವ ಆಶಯ ಸಾಮಾಜಿಕ ಕಾಳಜಿಯನ್ನು ಎತ್ತಿಹಿಡಿದು ಪ್ರತಿಪಾದಿತವಾಗುತ್ತ ಹೋಗುವುದು. ಬಹುಜನ ಒಪ್ಪಿತವಾದ ಸಾಮಾಜಿಕ ಮೌಲ್ಯಕ್ಕೆ ಜಯವಾಗುವುದನ್ನು ನಾವು ಕಾಣುತ್ತೇವೆ. ಜನಪದಿಗರು ಇಚ್ಛಿಸುವಂತೆ ವೈಯಕ್ತಿಕ ಮೌಲ್ಯಗಳ ಸಾಧನೆಗಿಂತ ಸಾಮಾಜಿಕ ಮೌಲ್ಯಗಳ ಸಾಧನೆಯೇ ಮಹತ್ವದ್ದಾಗಿರುತ್ತದೆ. ವೈಯಕ್ತಿಕ ಮೌಲ್ಯಗಳ ತ್ಯಾಗವನ್ನೇ ಜನಪದರು ಆಶಿಸುತ್ತಾರೆ.

ಇಲ್ಲಿ ಎರಡು ಕಥನಕವನಗಳನ್ನು ಮಾದರಿಯಾಗಿ ನೋಡಬಹುದು.

೧. ಬಣ್ಣದ ಗುಬ್ಬಾರು.

೨. ಉತ್ತರದೇವಿ

ಈ ಎರಡು ಕಥನಕವನಗಳಲ್ಲಿ ಒಂದು ಬಣ್ಣದ ಗುಬ್ಬಾರು. ಇದು ಬರಗಾಲದ ಭೀಕರತೆಯನ್ನು ಚಿತ್ರಿಸುತ್ತದೆ. ಬರಗಾಲ ಬಂದು ದುಡಿಯುವ ಜನರಿಗೆ ಹೊಟ್ಟೆಗೆ ಹಿಟ್ಟಿಲ್ಲದೇ ಹುಳಗಳಂತೆ ಒದ್ದಾಡಿ ಒಂದೆಡೆ ಸತ್ತರೆ, ಇನ್ನೊಂದೆಡೆ ಹೊಟ್ಟೇಲಿ ಹುಟ್ಟಿದ ಮಕ್ಕಳನ್ನು ಮಾರಿ ಹಣ ಹಿಡಕೊಂಡು ಅನ್ನ ಹುಡುಕುವುದು. ಸಿರಿವಂತ ವರ್ಗ, ಆಳುವ ಆಳರಸರ ದರ್ಪ, ಮೋಸತನ, ವಂಚನೆ ಇವುಗಳಿಂದ ಊರಿನ ಜನ ತತ್ತರಿಸಿ ಸತ್ತಮೇಲೆ ಮಳೆರಾಜ ತಂದ ಮಳೆಯ ಮಹಾಪೂರದಲ್ಲಿ ಹೆಣಗಳು ಹರಿದಾಡಿ

ಡಾ॥ ಅನಿತಾ ಕೆ. ಗುಡಿ



ಹೋದವು ಎನ್ನುವ ವ್ಯಂಗ್ಯಾರ್ಥ ಸರ್ವಕಾಲಕ್ಕೂ ಪ್ರಸ್ತುತ. ಏಕೆಂದರೆ ಈ ದೇಶದ ಕೃಷಿಪ್ರಧಾನ ರೈತನನ್ನು ಚೊಚ್ಚಲು ಮಗನನ್ನಾಗಿ ಪಡೆದ ಈ ದೇಶದಲ್ಲಿ ರೈತ ಆತ್ಮಹತ್ಯೆ ಮಾಡಿಕೊಂಡ ನಂತರ, ವಿಷ ಕುಡಿದ ನಂತರ ಪ್ರಜಾಪ್ರಭುಗಳು ರೈತನ ಸಾವಿಗೆ ಪರಿಹಾರ ನಿಧಿ ಅಂತಾ ಕೊಡುವರು. ಅಂದರೆ ಈ ದೇಶದಾಗ ರೈತ ಕೂಲಿಕಾರ್ಮಿಕ, ಕೆಳವರ್ಗದವರ, ಬಡವರ, ಬದುಕು ಬದುಕಲ್ಲ ಅನ್ನುವುದು ಈ ಬಣ್ಣದ ಗುಬ್ಯಾರು ಕಥನ ಕವನದಲ್ಲಿ ಮನಮನಗಳು ಕಲಕುವಂತೆ ಕಥೆ ಮೂಡಿಬಂದಿದೆ. ರೈತ ಆತ್ಮಹತ್ಯೆ ಮಾಡಿಕೊಂಡರೆ ಮಾತ್ರ ಸರ್ಕಾರ ರೈತನಿಗೆ ಪರಿಹಾರ ನೀಡುತ್ತದೆ. ಇಲ್ಲ ಅಂದರೆ ಇಲ್ಲ. ಅದಕ್ಕಾಗಿ ನಮ್ಮ ಜನಪದರು ಹೇಳುತ್ತಾರೆ,

*ಬಡವರು ಸತ್ತರೆ ಸುಡುವುದಕೆ ಸೌದಿಲ್ಲ*
*ಒಡಲ ಬೆಂಕೀಲಿ ಹೆಣಬೆಂದೊ । ದೇವರೇ*
*ಬಡವರಿಗೆ ಸಾವ ಕೊಡಬ್ಯಾಡ*

ಬಣ್ಣದ ಗುಬ್ಯಾರು ಕಥನ ಕವನವು ಸಂಭಾಷಣೆ ಶೈಲಿಯ ನಾಟಕೀಯತೆಯ ಮುಖಾಂತರ ಪ್ರಾರಂಭ ವಾಗುವುದು. ಬಣ್ಣದ ಗುಬ್ಯಾರು ಎಂದರೆ ಬಡವರು. ಮಳೆರಾಜ, ಅನ್ನದ ದಿನ ಅಂದರೆ ಬರಗಾಲ, ಕೆಟ್ಟದಿನಗಳು, ಒಕ್ಕಲಿಗರು ಅವರು ವಾಸಿಸುವ ಕೇರಿ, ಓಣಿ, ಒಕ್ಕಲಗೇರ್ಯಾಗ, ಗಂಡು ಮಕ್ಕಳು, ಮಕ್ಕಳನ್ನು ಮಾರುವುದು, ಹಸಿವು, ಸ್ವಾತಿಮಳೆ ಮತ್ತು ಸೊಲಗಿ, ಗಿದ್ದನ, ಆ ಕಾಲದ ಅಳತೆ ಮಾಪನಗಳು, ಹಿಟ್ಟಿನ್ಯಾಗ ಕಲಬೆರಕೆ ಮಾಡಿದ ಸುಣ್ಣ, ಅಪು, ಹಳ್ಳ, ಹೆಣ, ಇವುಗಳ ಸುತ್ತ ಕಥನ ಕವನ ಹೆಣೆದುಕೊಂಡಿವೆ. ಈ ಕಥನ ಕವನದಲ್ಲಿ ಒಟ್ಟು ಆರು ನುಡಿಗಳಿವೆ.

*ಬಣ್ಣದ ಗುಬ್ಯಾರು ಮಳಿರಾಜ । ಅವರು*
*ಮಣ್ಣಾಗಿ ಹೋದರು ಮಳಿರಾಜಾ*
*ಬಣ್ಣದ ಗುಬ್ಯಾರು ಮಣ್ಣಾಗಿ ಹೋದರು*
*ಅನ್ನದ ದಿನ ಬಂದು ಮಳಿರಾಜಾ ॥*

*ಒಕ್ಕಲಗೇರ್ಯಾಗ ಮಳಿರಾಜಾ । ಅವರು*
*ಮಕ್ಕಳ ಮಾರ್‍ಯಾರ ಮಳಿರಾಜಾ*
*ಮಕ್ಕಳ ಮಾರೀ ರೊಕ್ಕಾವ ಹಿಡಕೊಂಡು*
*ಭತ್ತಂತ ತಿರುಗ್ಯಾರ ಮಳಿರಾಜಾ ॥*

*ಸೊಲಗಿ ಹಿಟ್ಟಿನಾಗ ಮಳಿರಾಜಾ । ಅವರು*
*ಸುಣ್ಣನ್ನು ಕೂಡಿಸ್ಯಾರ ಮಳಿರಾಜಾ*
*ಹಸ್ತು ಬಂದಕೇರಿ ಗಪಗಪ ತಿಂದು*
*ಒದ್ದಾಡಿ ಸತ್ತಾರ ಮಳಿರಾಜಾ ॥*

*ಗಿದ್ದನ ಅಕ್ಕ್ಯಾಗ ಮಳಿರಾಜಾ । ಅವರು*
*ಅಪುವನ್ನು ಕೂಡಸ್ಯಾರ ಮಳಿರಾಜಾ*
*ಸಣ್ಣ ಕೂಸಿಗೆ ಮನ್ನಿಸಿ ಉಣಿಸ್ಯಾರ*
*ಕಣ್ಣನ್ನ ಮುಚ್ಯಾವ ಮಳಿರಾಜಾ ॥*

*ಗಂಡುಳ್ಳ ಬಾಲ್ಯಾರು ಮಳಿರಾಜಾ*
*ಭಿಕ್ಷಾಕ ಹೊರಟಾರ ಮಳಿರಾಜಾ ।*
*ಅನ್ನದ ದಿನ ಬಂದು ಮಳಿರಾಜಾ*
*ಸ್ವಾತೀಯ ಮಳೆಬಂದು ಮಳಿರಾಜಾ । ಸುತ್ತ*
*ದೇಶಾಕ ಅಗ್ಯಾದ ಮಳಿರಾಜಾ*
*ಹಳ್ಳಕೊಳ್ಳ ಹೆಣ ಹರಿದಾಡಿ ಹೋದವು*
*ಯಾವಾಗ ಬಂದೆಪ್ಪ ಮಳಿರಾಜಾ ?*

ಈಗ ಬರದೆ ಮುಂಚೆ ಸಕಾಲಕ್ಕೆ ನೀ ಬಂದಿದ್ದರೆ ಒಕ್ಕಲು ಮಕ್ಕಳು ಬದುಕುತ್ತಿದ್ದರು. ಜನ ಹಸಿವಿಗೆ ತತ್ತರಿಸಿ ಸತ್ತಮೇಲೆ ಹೆಣ ಸಿಂಗಾರ ಮಾಡಿದಂಗ ಈಗ ನೀ ಬಂದೆಯಪ್ಪ ಮಳಿರಾಜಾ ಎನ್ನುವಲ್ಲಿ ಸಮಸ್ತ ಸಮಾಜದ ಅವ್ಯವಸ್ಥೆಯನ್ನು ಈ ಕಥನ ಕವನದ ಕೊನೆಯ ಸಾಲು ಎತ್ತಿ ಆಡುವ ವ್ಯಂಗ್ಯದ ಮಾತಾಗಿದೆ.

೨೦೧೩ರ ಚಳಿಗಾಲ ಅಧಿವೇಶನ ಬೆಳಗಾವಿ ಸುವರ್ಣ ಸೌಧದಲ್ಲಿ ನಡೆಯಿತು. ಆಗ ರೈತರು ಬೆಂಬಲ ಬೆಲೆಗಾಗಿ ಸುವರ್ಣ ಸೌಧದ ಮುಂದೆ ಧರಣಿ ಕುಳಿತರು. ಆಗ ಒಬ್ಬ ರೈತ ಕಬ್ಬಿಗೆ ಬೆಂಬಲ ಬೆಲೆ ನೀಡದಿದ್ದಾಗ ವಿಷ ಕುಡಿದು ಸಾವನ್ನಪ್ಪಿದ. ಇದರಿಂದ ಪ್ರಜಾಪ್ರಭುತ್ವ ವ್ಯವಸ್ಥೆ ಬದಲಾಗಲಿಲ್ಲ. ಉಣ್ಣುವವ ಹಾಗೆ ದುಡಿಯದೇ ಉಂಡೆ ಉಣ್ಣುವವನು. ದುಡಿಯುವವ ಸಾಯುವತನಕ ದುಡಿದೇ ದುಡಿಯುವುದು. ಇದು ಈ ಸಮಾಜ ವ್ಯವಸ್ಥೆಯಾಗಿದೆ. ಈ ದೇಶದಲ್ಲಿ ರೈತ, ಕಾರ್ಮಿಕ, ಬಡವರ ಸಾವಿಗೆ ಲೆಕ್ಕವಿಲ್ಲ. ಸರ್ಕಾರಕ್ಕೆ ಕಣ್ಣಿಲ್ಲ. ಈ ಕಥನಕವನದಲ್ಲಿ "ಅನ್ನದ ದಿನವೆಂದು" ಪದಬಳಕೆ ಯಾಗಿದೆ. ಕೇವಲ ಬರಗಾಲ ಮಾತ್ರವಲ್ಲಾ ನಮ್ಮೆದುರಿಗೆ ಇರುವ ಇಂದಿನ ಕೆಟ್ಟ ದಿನಗಳು ಅನ್ನದ ದಿನವೆಂದು ಸೂಚಿಸುತ್ತದೆ. ದಿನಬೆಳಗಾದರೇ ಪ್ರತಿ ಸೆಕೆಂಡಿಗೆ ಹೆಣ್ಣುಗೂಸು ಅತ್ಯಾಚಾರಕ್ಕೆ ಬಲಿಯಾಗಿ ಸಾವನ್ನಪ್ಪುತ್ತಿದೆ. ಈ ಕಥನ ಕವನದಲ್ಲಿ ಗಂಡು ಮಕ್ಕಳು ಊರು ಬಿಟ್ಟು ಅನ್ನ ಹುಡುಕುತ್ತಾ ಬೇರೆಕಡೆಗೆ ಭೀಕ್ಷಾಟನೆಗೆ ಗುಳೆ ಹೋದರೆ, ಸಣ್ಣಕೂಸು, ಹೆಣ್ಣು ಮಗುವಿಗೆ ಅಕ್ಯಾಗ, ಹಿಟ್ಟಿನ್ಯಾಗ, ಬೆರೆಸಿದ ಅಫೀಮು, ಗಾಂಜಾ, ಡ್ರಗ್ಸ್, ಸುಣ್ಣದಿಂದ ಬೆರೆಸಿದ ಗಂಜಿಯ ಕುಡಿದು ಸಾವನ್ನಪ್ಪಿದ ದುರಂತದ ಬದುಕು ಇಲ್ಲಿ ಮನಕಲುಕುವಂತೆ ಬಿಂಬಿತವಾಗಿದೆ.

ಈ ಇಡೀ ಕಾವ್ಯ ದುರಂತವನ್ನು ಹೇಳುತ್ತಾ ಕಥನಕವನದ ಕೊನೆಗೆ ಎಲ್ಲಾ ದುರಂತ ಮುಗಿದ ಬಳಿಕ ಪೋಲಿಸರು ಬಂದು ವಿಚಾರಿಸುವಂತೆ, ವಿಚಾರಿಸಿದರೂ ಏನೂ ಫಲ ಸಿಗದಂತೆ ಕಥನ ಕವನದ ಕೊನೆಗೆ ಒಕ್ಕಲಿಗರೆಲ್ಲಾ ಸತ್ತು ಬಿದ್ದಿದ್ದಾರೆ, ಈಗ ಮಳೆ ಬಂತು. ಹಳ್ಳಕೊಳ್ಳಗಳೆಲ್ಲಾ ತುಂಬಿ ಹರದ್ಯಾಡಕತ್ತಾವು. ಅದರ ತುಂಬ ಹೆಣಗಳು ತೇಲಾಡುತ್ತಾವ, ಬರಬೇಕಾದ ಸಮಯದಲ್ಲಿ ಮಳೆ ಬರಲಿಲ್ಲಾ. ನೀರು ಕುಡಿಲಿಲ್ಲ, ಅನ್ನ ಉಣಲಿಲ್ಲ ಸತ್ತಬಳಿಕ ಅವನಿಗೆ ಪರಿಹಾರೋಪಾದಿಯಾಗಿ ಮಳೆರಾಜಾ ಮಳೆತಂದ. ಆದರೆ ಬದುಕು ಮುಗಿದು ಹೋಗಿದೆ. ಇದು ಎಲ್ಲಾ ಕಾಲದಲ್ಲೂ ಇರುವ ಏರುಪೇರಿನ ಅವ್ಯವಸ್ಥೆ. ಈ ಜನಪದ ಕಥನ ಕವನ ಕಾಲ, ದೇಶವನ್ನು ದಾಟಿ ಇಡೀ ವಿಶ್ವ ಜನಾಂಗೀಯ ಬದುಕನ್ನು ಕಟ್ಟಿಕೊಳ್ಳುವುದು. ಪ್ರಸ್ತುತ ಈ ದೇಶದ ಆಳುವ ವರ್ಗ ವಿದೇಶಿ ಬಹುರಾಷ್ಟ್ರೀಯ ಕಂಪನಿ ಗಳಿಗೆ ಈ ದೇಶದ ಗ್ರಾಮೀಣ ಜನರ ಭೂಮಿಯೆಲ್ಲ ಮಾರಾಟ ಮಾಡುತ್ತಿದೆ. ಈ ಹಳ್ಳಿಯ ಜನಪದರು ಭೂಮಿ ಕಳೆದುಕೊಂಡು, ಕೆಲಸ ಹುಡುಕಿಕೊಂಡು ಪಟ್ಟಣಗಳಿಗೆ ವಲಸೆ ಹೊರಟಿದ್ದಾರೆ.

**ಉತ್ತರದೇವಿ**

ಈ ಕಥನ ಕವನವು "ಜನಪದ ಜೀವನ ಮತ್ತು ಸಂಸ್ಕೃತಿಯ ಕೇಂದ್ರ ಬಿಂದು ಸ್ತ್ರೀ", ಸ್ತ್ರೀಯನ್ನು ನಮ್ಮ ಜನಪದರು ತಾಯಿ, ಮಗಳು, ಸೊಸೆ, ಹೆಂಡತಿ, ಸವತಿ, ಅತ್ತಿಗೆ, ನಾದಿನಿ, ಅಕ್ಕ, ತಂಗಿ ಮುಂತಾದ ಎಲ್ಲಾ ನಿಟ್ಟುಗಳಿಂದಲೂ ನೋಡಿದ್ದಾರೆ. ಎಲ್ಲಕ್ಕಿಂತ ಹೆಚ್ಚಾದ ಸ್ಥಾನ ತಾಯಿಗೆ. ಉತ್ತರದೇವಿ ಕಥನ ಕವನ ಇದೊಂದು ಶೋಕರಸ ಪ್ರಧಾನವಾದ ಗೀತೆ. ಬಣ್ಣದ ಗುಬ್ಯಾರು ಕಥನ ಕವನದಲ್ಲಿ ಜನಪದರು ಸತ್ತನಂತರ ಮಳೆಬಂದರೆ, ಇಲ್ಲಿ ಗಂಡನಿಂದ ದೂರವಾಗಿ ಅತ್ತೆಯ ಅಪವಾದ ಹೊತ್ತು, ತವರಿನಸಿರಿ ಕಾಣದೇ ಉತ್ತರ ದೇವಿ ಉತ್ತರೆ ಮಳೆಯಾಗಿ ಹೊರಟ ಕಥೆ ಇದು. ದಕ್ಷಿಣ ಕರ್ನಾಟಕದ ಬಹಳ ಪ್ರಸಿದ್ಧ ಜನಪದ ಕಥನಗೀತೆ ಇದು. "ಶಿವಮೊಗ್ಗ, ತುಮಕೂರ, ಮಂಡ್ಯ, ಮೈಸೂರು, ಹಾಸನ ಜಿಲ್ಲೆಗಳಲ್ಲಿ ಸಂಗ್ರಹಿಸಿದ ಏಳು ಕೃತಿಗಳು ಈಗಾಗಲೇ ಹಲವು ಕಡೆ ಪ್ರಕಟವಾಗಿವೆ. ೧೯೩೯ರ ವೇಳೆಗೆ ಶ್ರೀ ಅರ್ಚಕ ರಂಗಸ್ವಾಮಿಯವರು ತಮ್ಮ ಹುಟ್ಟಿನ ಹಳ್ಳಿ ಹಳ್ಳಿಯ ಹಾಡು ಕೃತಿಯಲ್ಲಿ ಈ ಕಥನ ಗೀತೆಯನ್ನು ಹೇಮಗಿರಿಯ ಸುತ್ತಿನಲ್ಲಿ ಸಂಗ್ರಹಿಸಿ ಪ್ರಕಟಿಸಿದ್ದಾರೆ." ಎಂದು ಚಂದ್ರಗೌಡ ಕುಲಕರ್ಣಿ ಈ ಕಥನ ಕವನ ಸ್ಥಳಮೂಲ ಸೂಚಿಸುತ್ತಾರೆ.

ಈ ಜನಪದರ ಕಥನ ಕಾವ್ಯವನ್ನು ಪ್ರವೇಶಿಸಿದರೆ ಎಲ್ಲೆಲ್ಲೂ ಜನ ಬದುಕಲೆಂದು ತ್ಯಾಗಮಾಡುವ ಸಂದರ್ಭಗಳೇ ಕಣ್ಣುಕಟ್ಟಿ ನಿಲ್ಲುತ್ತವೆ. ಕೆರೆಗೆ ಹಾರ ಕಥನದಲ್ಲಿ ಊರು ಉಪಕಾರಕ್ಕಾಗಿ ಮನೆಯ ಸೊಸೆಯನ್ನು ಬಲಿಕೊಡುವರು. ಉತ್ತರದೇವಿ ಕಥನ ಕವನದಲ್ಲೂ ಕೂಡ ಮೊದಮೊದಲು ತನ್ನ ಅಸ್ತಿತ್ವಕ್ಕಾಗಿ ಹೋರಾಟ ನಡೆಸಿದ ಉತ್ತರದೇವಿ ಕೊನೆಗೆ ಜಗತ್ಪ್ರಳಯವಾದಲ್ಲಿ ತನ್ನತಾ ಮರೆಯಬೇಕು ಎಂದು ಶರಣರು ಹೇಳಿದಂತೆ ವೈಯಕ್ತಿಕ ನೆಲೆಗಟ್ಟಿನಿಂದ ಸಾರ್ವತ್ರಿಕವಾದ ಒಂದು ಬದುಕನ್ನು ನಿರೂಪಿಸುವ ಉತ್ತರದೇವಿಯ ಜೀವನ ನಿಜವಾಗಿಯೂ ಗಟ್ಟಿಗ ಹೆಣ್ಣುಮಗಳು ತನ್ನ ಸ್ಥಾಪಿತವಾದ ಬದುಕನ್ನು ನಿರೂಪಿಸಿದುದು ಸತ್ಯ. ಏಕೆಂದರೆ ಗ್ರಾಮೀಣ ಹೆಣ್ಣುಮಗಳಿಗೆ ಅತ್ತೆ, ಮಾವ, ನಾದಿನಿ, ನೆಗೆವಣ್ಣಿ, ಗಂಡ, ಗಂಡನ ಮನೆ, ಗಂಡನ ಊರು, ಕೆರೆ, ಹಳ್ಳ, ಬಾವಿ, ಕುಟ್ಟುವುದು, ಬೀಸುವುದು, ಅತ್ತೆಮಾವನ ಸೇವೆ ಮಾಡುವುದು ಇವೆಲ್ಲ ಅವಳ ದಿನಚರಿಯ ಭಾಗ. ಈ ಒಂದು ವಾಸ್ತವ ಪ್ರಪಂಚದಲ್ಲಿ ಅವಳ ಬದುಕು ಕೊನೆಗೊಳ್ಳುವುದು. ಆದರೆ ಕ್ಷಣಹೊತ್ತಿನಲ್ಲಿ ಈ ಕಥನ ಕವನದ ನಾಯಕಿಯ ಬದುಕು ಮಿಂಚಿನ ಹಾಗೆ ಬದಲಾವಣೆ ರೂಪತಾಳಿ ಅತ್ತೆ ಸೊಸೆಯ ಮೇಲೆ ಅಪವಾದ ಹೊರೆಸಿ, ಬಸವಿಯ ಪಟ್ಟವನ್ನು ಕಟ್ಟಿ, ಮಗನ ಮನ ಒಲಿಸಿ, ತಾಯಿ ಮಗನ ಮಧ್ಯ ವಾಗ್ವಾದ ನಡೆದು ಮಗ ವಾಗ್ವಾದದಲ್ಲಿ ಸೋತು, ಉತ್ತರದೇವಿ ಗಂಡನ ಮನೆಯಿಂದ ದೂರಾಗಿ, ಕಣ್ಣೀರಿನೊಂದಿಗೆ ನೊಂದ ಮಗಳು ತೌರಿಗೆ ಬಂದರೆ ಬಾಣಲಿಯಿಂದ ಬೆಂಕಿಯೊಳಗೆ ತೆಗೆದು ಹಾಕಿದಂಗ,

ಅಪ್ಪ ಮಲತಾಯಿ ತೋಳಸೆರೆಯಲ್ಲಿ ಒರಗಿದ್ದಾನೆ. ಹೆಣ್ಣಿನ ಜನುಮಕ ಅಣ್ಣ–ತಮ್ಮಂದಿರು ಇರಬೇಕಂತ, ಅಣ್ಣನ ಮನೆಗೆ, ತಮ್ಮನ ಮನೆಗೆ ಉತ್ತರದೇವಿ ಬರುತ್ತಾಳೆ. ಯಾರ ಮನೆಯ ಬಾಗಿಲುಗಳೂ ತೆರೆಯ ದಿದ್ದಾಗ ಕೊನೆಗೆ ಹಡೆದವ್ವನ ಮನೆಗೆ ಬರುತ್ತಾಳೆ. ಮಗಳಿಗೆ ಬಂದೊದಗಿದ ದುರಂತದ ಬದುಕು ತಾಯಿಗೆ ಯಾವಾಗೋ ಬಂದೊದಗಿದೆ. ಅದಕ್ಕಾಗಿ ತಾಯಿ ಮಗಳಿಗೆ ನೀನು ಉತ್ತರೆಮಳೆಯಾಗಿ ಹೊರಡವ್ವ ಎಂದು ಹಾರೈಸುವ ಹರಕೆ ಅಂದಿನಿಂದ ಇಂದಿನವರೆಗೆ "ಉತ್ತರಿ ಮಳೆಗೆ ಬಿತ್ತರಿ, ಇಲ್ಲದಿದ್ರ ಸತ್ತಿರಿ" ಎನ್ನುವ ಜನಪದ ಗಾದೆ ಮಾತು ಅದು ಅನುಭವದ ಮಾತಾಗಿದೆ.

"ಉತ್ತರೆ ಇಪ್ಪತ್ತೇಳು ನಕ್ಷತ್ರಗಳಲ್ಲಿ ಹನ್ನೆಡನೆಯ ನಕ್ಷತ್ರ. ಉತ್ತರಿ ನಕ್ಷತ್ರ ಮಳೆಯ ನಕ್ಷತ್ರ." ಉತ್ತರಿಮಳೆ ಮತ್ತು ಉತ್ತರಿಬಿಸಿಲು ಬಹಳ ಶ್ರೇಷ್ಠ ಉಪಯುಕ್ತ ವಾದುದು. ಉತ್ತರಿಬಿಸಿಲಿಗೆ ಹೆಣ್ಣುಮಕ್ಕಳು ಮನ್ಯಾಗಿನ ಎಲ್ಲಾ ರೇಷ್ಮೆ ಬಟ್ಟೆಗಳನ್ನು, ಸೀರೆಗಳನ್ನು ಬಿಸಿಲಲ್ಲಿ ಹಾಕಿ ಒಣಗಿಸುತ್ತಾರೆ. ಏಕೆಂದರೆ ರೇಷ್ಮೆ ಬಟ್ಟೆಗಳಿಗೆ ನುಸಿ, ಹುಳುಗಳು ಹತ್ತುವುದಿಲ್ಲ ಎನ್ನುವ ವೈಜ್ಞಾನಿಕ ಸತ್ಯದ ವಿಷಯವಾಗಿದೆ. ಹೆಣ್ಣಿನ ಕುಲಕೆ ತಿಲಕವಾಗಿ ಉತ್ತರ ದೇವಿ ತನ್ನ ವೈಯಕ್ತಿಕ ಬಾಳು ಬರಡಾದರೂ ಬೆಂದ ಜೀವಗಳಿಗೆ ಬಿಸಿಲಿಗೆ ಬಿರಿದು ಉರಿದೇಳುವ ಭೂತಾಯಿ ಮನತಣಿಸಲೆಂದು ಉತ್ತರೆ ಮಳೆಯಾಗಿ ಹೊರಟಳು.

ಗಂಡನ ಮನೆಯ ಸುತ್ತ ನಾಟಕೀಯವಾಗಿ ಅತ್ತೆ ಯೊಂದಿಗೆ ಸಂಭಾಷಣೆ ಮೂಲಕ ಪ್ರಾರಂಭವಾಗುವ ಉತ್ತರದೇವಿ ಕಥನ ಕವನ ಹದಿನೈದು ನುಡಿಗಳಿಂದ ರಚಿತವಾಗಿ ರೋಚಕ ಕಥೆ ಕಟ್ಟಿಕೊಡುವುದು.

*ಉತ್ತರೆ ನೀರಿಗ್ಹೋಗಿ ಮತ್ಯಾಕೆ ಬರಲಿಲ್ಲ*
*ಉತ್ತುರ ದೇಶದ ಮಳೆಹೂದು ಕೆರೆತುಂಬಿ*
*ಬಸುಳೆ ಮುಳ್ಳಡಿ ಅಡಿಗಿದ್ದೆ*
*ಬಸುಳೆಗೆ ಮುಳ್ಳುಂಟೆ ಬದನೆಗೆ ಚಪ್ಪರುಂಟೆ*
*ಸೊಸೆಯಮ್ಮ ನಿನಮಾತು ನಿಜವುಂಟೆ?*

*ಕತ್ತೆಗೆ ಕೋಡುಂಟೆ ಎತ್ತಿಗೆ ಮಾತುಂಟೆ*
*ಅತ್ತೆಮ್ಮಾ ನಿಮಮಾತು ನಿಜವುಂಟೆ?*
*ಅತ್ತೆ ಸೊಸೆಯರಿಗೆ ಹತ್ತ್ಯಾವ ಕಾಳಗ.*
*ಉತ್ತು ಬಂದ ಮಗನಿಗೆ ಉಣಲಿಕ್ಕೆ ಹೇಳ್ಯಾಳೆ*
*ಉತ್ತರದೇವೆಂಬೊ, ಸೊಸೆಬೇಡ ಕಂದಯ್ಯ*
*ಬಿಟ್ಟು ಬಿಡುವಳೆ ಬಸವಿಯ.*

ಈ ರೀತಿ ಪ್ರಾರಂಭವಾಗಿ ಗಂಭೀರವಾದ ಜಗಳ ದೊಂದಿಗೆ ಅತ್ತೆ ಸೊಸೆಯೊಂದಿಗೆ ವಾದಕ್ಕಿಳಿಯುತ್ತಾಳೆ. ನೀರಿಗ್ಹೋಗಿ ತಡವಾಗಿ ಬಂದೆ ಎಂದು ಅದೇ ನೆಪ ಮಾಡಿಕೊಂಡು ಮಗನಿಗೆ ಚಾಡಿಹೇಳಿ ಅವಳನ್ನು ತವರಿಗೆ ಕಳಿಸು, ಮತ್ತೊಂದು ಅವಳಂಥ ರಾಣಿಯನು ಕೊಳ್ಳಾಗಿನ ಸಣ್ಣಗುಂಡು ಮಾರಿ, ಬುಗುಡಿ ಮಾರಿ, ಮೇಲೊಬ್ಬಳ ನಾರಿ ತರತೀನಿ ಅವಳನ್ನು ಬಿಟ್ಟುಬಿಡು ಎಂದು ತಾಯಿ ಮಗನಿಗೆ ಹೇಳಿದರೆ, ಮಗ ತನ್ನನ್ನೇ ನಂಬಿ ಬಂದ ಹೆಂಡತಿಯನ್ನು ನಡುನೀರಾಗ ಕೈಬಿಡುವ ಪ್ರಸಂಗ ಕರುಣಾಜನಕವಾದುದು. ಗಂಜಿಯ ಕುಡಿದರು ಗಂಡನ ಮನೆಲೇಸು ಎಂದು ಉತ್ತರದೇವಿ ಗಂಡನ ಮನೆಯಲ್ಲಿ ಸ್ಥಾನಪಡೆದು ನೆಲೆಯೂರಲು ಮಾಡಿದ ಪ್ರಯತ್ನ ವ್ಯರ್ಥವಾಗುವುದು.

*ಮೂರೆವರಕೆ ಬುಗಡಿಯ ಮಾರೇನು*
*ಅವಳಂತೆ ರಾಣಿಯ ತರಬಲ್ಲೆ – ಎಲೆ ಮಗನೆ*
*ಬಿಟ್ಟು ಬಿಡವಳ ಬಸವೀಯ"* ಎಂದು

ಕಥನದುದ್ದಕ್ಕೂ ಮಗನಿಗೆ ತನ್ನ ಆಭರಣದ ಆಸೆ ತೋರಿಸಿ ಸೊಸೆ ಮತ್ತು ತನ್ನ ವಂಶದ ಕುಡಿ ಮೊಮ್ಮಗನನ್ನು ಹೊರಹಾಕುವಳು. ಉತ್ತರದೇವಿ ಹೇಗೆ ಹೊರಗೆ ಹೋಗಲಿ ಎಂದು ಎದೆಭಾರ ಮಾಡಿಕೊಂಡು ತಾನು ಗಂಡನ ಮನೆಯಲ್ಲಿ ಕಳೆದ ದಿನಗಳನ್ನು ನೆನೆದು ದುಃಖಿಸುತ್ತಾ, ಗಿಡಮರ ಗಳೊಂದಿಗೆ ಮಾತನಾಡುತ್ತಾಳೆ. ನಾನು ಮದುವ್ಯಾಗಿ ಹೊಸದಾಗಿ ಈ ಮನಿಗೆ ಬಂದಾಗ ಅಡಿಕೆಯ ಕಿರು ಸಸಿಗಳಿದ್ದವು. ನಾನು ನೀರುಣಿಸಿ ಬೆಳೆಸಿದೆ, ಕುರಿ, ಕುರಿಮರಿನಾ ಸಾಕಿದ್ದೆ ಪ್ರೀತಿಯಿಂದ ಜ್ವಾಪಾನ ಜತನ ಮಾಡಿದ್ದೆ. ನಾನು ನಿಮ್ಮನ್ನು ಬಿಟ್ಟು ಹೋಗುತ್ತಿರುವೆ. ನಿಮ್ಮ ದಾರಿ ನಿಮಗ ಎಂದು ದುಃಖಿಸಿ ಅವುಗಳೊಂದಿಗೆ ಮಾತನಾಡುವಳು. ಅತ್ತೆ, ಸೊಸೆ ಮನೆಬಿಟ್ಟು ಹೋಗುವ ಸಂದರ್ಭ ಖಾತ್ರಿ ಆದಾಗ ಸಂತೋಷಗೊಂಡು ಸೊಸೆಗೆ ಹೇಳುವಳು – ಅಟ್ಟಮೇಗಳ ಪುಟ್ಟ ಕುಂಬಳಕಾಯಿ ಐತಿ ಮಾಡಿ ಉಂಡುಹೋಗು, ಪೆಟ್ಟಿಗೇಲಿರುವ ಪಟ್ಟಿಸೀರೆ ಉಟ್ಟು ಹೋಗು ಎಂದು ಹೇಳುವ ನಾಟಕೀಯ ಸಂದರ್ಭವು ನಿಜಕ್ಕೂ ಅತ್ತೆ, ಸೊಸೆ ಮಾತನಾಡುತ್ತಿದ್ದಾರೆ ಎನ್ನಿಸುವಷ್ಟು ಕಥನ ಕವನ ವಾಸ್ತವತೆಯ ಜೀವ ತುಂಬಿಕೊಂಡು ನಿಲ್ಲುವುದು. ಕೊನೆಗೆ ಅನಿವಾರ್ಯವಾಗಿ ಉತ್ತರದೇವಿ ಗಂಡ ಬಂದು ಹೆಂಡತಿಯನ್ನು ಅಡ್ಡಗಟ್ಟಿ ನೀ ಹೋಗ ಬ್ಯಾಡ ನಾಹ್ಯಾಂಗ ನಿನ್ನ ಬಿಟ್ಟು ಇರಲಿ ಅನ್ನಲಿಲ್ಲಾ. ಉತ್ತರದೇವಿ ಅಪ್ಪ ಕೊಟ್ಟೆಮ್ಮೆ ಹೊಡಕೊಂಡು ಬಾಲಾನೆತ್ತಿಕೊಂಡು ಸಂಜೆ ಆಗಿದೆ ಮುಂದಲಚುಕ್ಕಿ ಬೆಳಕಲ್ಲಿ (ಬೆಳ್ಳಿಚುಕ್ಕಿ) ತೌರಿಗೆ ಉತ್ತರದೇವಿ ಬರುತ್ತಾಳೆ. ರಾತ್ರಿ ಆಗೆದ, ಅಪ್ಪ ಮಲತಾಯಿ ತೊಳತೆಕ್ಕೆಯಲ್ಲಿ ಮಲಗ್ಯಾನ. ಮಗಳು ಬಂದು ಕದ ತಟ್ಟುತಾಳ, ಅಪ್ಪಾ ನಾ ಮಗಳ ಬಂದಿನಿ ಬಾಗಲ ತೆಗಿ ಅಂತಾಳ, ಅಪ್ಪಾ ಬಾಗಲ ತೆಗೆಲಿಲ್ಲಾ. ಮತ್ತೂ ಮುಂದಕ್ಕ ಬರತಾಳ ಬಗಲಾಗ ಕಂದನನ್ನು ಎತ್ತಿಕೊಂಡು, ಎಮ್ಮಿ ಹೊಡಕೊಂಡು...

*ಹೆಣ್ಣೀನ ಜನುಮಕ ಅಣ್ಣತಮ್ಮರು ಬೇಕು ।*
*ಬೆನ್ನ ಕಟ್ಟುವರು ಸಭೆಯೊಳಗೆ । ಸಾವಿರ ।*
*ಹೊನ್ನ ಕಟ್ಟುವರು ಉಡಿಯೊಳಗ ॥*

ಅಂತಾ ಅಣ್ಣನ ಮನೆಗೆ ಬರುತಾಳ ಮುಂದಕ ತಮ್ಮನ ಹತ್ರ ಹೋಗವ್ವ ಅಂತಾನ ಅಣ್ಣ ...

ಅಣ್ಣ ತಮ್ಮಂದಿರು ತನ್ನ ಆಪತ್ಕಾಲದಲ್ಲಿ ಬೆಂಬಲಕ್ಕೆ ಇರುತ್ತಾರೆ ಅಂತಾ ನಂಬಿದ ಹೆಣ್ಣುಮಗಳ ನಂಬಿಕೆ ಇಲ್ಲಿ ಹುಸಿಯಾಗುತ್ತದೆ. ಈ ಕಥನದಲ್ಲಿ ಅಕ್ಕತಂಗಿಯರ ಮನೆಗೆ ಉತ್ತರದೇವಿ ಬರುತ್ತಾಳೆ. ಆದರೆ ಯಾರ ಆಶ್ರಯವೂ ಸಿಗಲಿಲ್ಲ. ಕಥನ ಕವನದ ಕೊನೆಗೆ ಹೆತ್ತ ತಾಯಿಯ ಹತ್ತಿರ ಬರುವಳು. ಆದರೆ ತಾಯಿಯೂ ಕೂಡ ನಿಸ್ಸಹಾಯಕಳು. ಅವ್ವನ ಮನೆಗೆ ಬರುವಳು ಅವ್ವ ಹೀಗೆ ಹೇಳುತ್ತಾಳೆ.

*ಒಂದರಿಬೆ ಹಾಸಿದ್ದೆ ಒಂದರಿಬೆ ಚೆಲ್ಲಿದ್ದೆ*
*ಒಂದೊರುಷ ನಿನ್ನ ಸಲವಿದ್ದೆ ಕಂದಮ್ಮ*
*ನನ್ಹ್ಯಾಡು ನಿನಗೆ ಮಡಗಿತ್ತೆ ನನಮಗಳೆ*
*ನೀನುತ್ತರೆ ಮಳೆಯಾಗಿ ಹೊರಡವ್ವ*

*ಶಿಶುವನ್ನೆತ್ಗೊಂಡು ನಾರಿ ಕೈಲ್ಹಿಡಕೊಂಡು*
*ಅಪ್ಪಕೊಟ್ಟೆಮ್ಮಿ ಹೊಡಕೊಂಡು ಉತ್ತರದೇವಿ*
*ಉತ್ತರ ಮಳೆಯಾಗಿ ಹೊರಟಳು ॥*

"ಉತ್ರಿಗಿ ಬಿತ್ತರಿ ಶಿವರಾತ್ರಿಗಿ ಕಿತ್ತರಿ, ಉತ್ತರಿ ತಾಳ ಕೆತ್ತರಿ" ಎನ್ನುವಂಗ ಉತ್ತರದೇವಿ ಅತ್ತೆಯ ಅಪವಾದಕ್ಕೆ ಗುರಿಯಾಗಿ ತೌರಸಿರಿ ಕಾಣದೇ ಉತ್ತರದೇವಿ ಜನಪದರ ಉಪಯುಕ್ತ ಉತ್ತರೆ ಮಳೆಯಾಗಿ ಹೊರಟ ಈ ಕಥೆ ಜನಪದ ಕಥನ ಕವನದಲ್ಲಿ ಕುತೂಹಲಕಾರಿ ಯಾಗಿ ಕರುಣಾರಸ ತುಂಬಿಕೊಳ್ಳುತ್ತಾ ಸಾಗುವುದು.

ಹೆಣ್ಣಿನ ಅನಂತ ದುಃಖವನ್ನು ಈ ಕಥನಕವನ ಸೆರೆಹಿಡಿಯುವಲ್ಲಿ ಸ್ತ್ರೀಪ್ರಧಾನವಾದಂತಹ ಈ ಕಥನಗೀತೆಯಲ್ಲಿ ಮಹಿಳೆಯೇ ಕೇಂದ್ರಬಿಂದುವಾಗಿ ನಾಡಿಗೆ ಒಳಿತಾಗಿ, ತನ್ನ ತ್ಯಾಗದ ಮೂಲಕ ಹೆಣ್ಣು ಕುಲಕ್ಕೆ ತಿಲಕವೆಂಬಂತೆ ಉತ್ತರದೇವಿ ಉತ್ತರಿ ಮಳೆಯಾಗಿ ಈ ನಾಡಲ್ಲಿ ಜೀವಂತವಾಗಿದ್ದಾಳೆ ಜನಪದ ಸಾಹಿತ್ಯದಲ್ಲಿ. ಅದರೊಂದಿಗೆ ಸ್ವಾಭಿಮಾನ ದಿಂದ ಬದುಕುವ ಹೆಣ್ಣಾಗಿ ಹೊರಹೊಮ್ಮಿದ್ದಾಳೆ.

ಮಹಿಳೆ ಮತ್ತು ಒಕ್ಕಲಿಗ (ಕೃಷಿಕ)ರನ್ನು ಕೇಂದ್ರವಾಗಿಟ್ಟುಕೊಂಡ ಈ ಎರಡು ಜನಪದ ಕಥನ ಕವನಗಳು ಆ ಕಾಲದ ಒಟ್ಟು ಸ್ಥಿತಿಗತಿ ಸಾಮಾಜಿಕ ಮೌಲ್ಯಗಳನ್ನೊಳಗೊಂಡು ಇಂದು ವಿವಿಧ ರೀತಿಯ ಅಧ್ಯಯನಕ್ಕೆ ಆಕರಗಳಾಗಿ ನಮ್ಮ ಮುಂದಿವೆ.

**ಡಾ॥ ಅನಿತಾ ಕೆ. ಗುಡಿ**
ಎಸ್. ಎಸ್. ಕಟ್ಟಿ ಬಿಲ್ಡಿಂಗ್, ಸಪ್ತಾಪೂರ ೧ನೇ ಕ್ರಾಸ್
ಧಾರವಾಡ



# ನಮ್ಮನ್ನಗಲಿದ ಎ. ಆರ್. ವಿ. ಅವರಿಗೆ ನಮನ

ಹಲವು ದಶಕಗಳ ಕಾಲ ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಯ ಅಕಾರ್ಬನಿಕ ಮತ್ತು ಭೌತ ರಸಾಯನ ವಿಜ್ಞಾನ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದು ವಿಶ್ರಾಂತರಾಗಿದ್ದ ಪ್ರೊ॥ ಎ. ಆರ್. ವಾಸುದೇವ ಮೂರ್ತಿಯವರು ತಮ್ಮ ೮೮ನೇ ವಯಸ್ಸಿನಲ್ಲಿ ಇತ್ತೀಚೆಗೆ ನಿಧನರಾದರು. ಅವರಿಗೆ 'ಹೊಸತು' ಹೃದಯಪೂರ್ವಕ ನಮನ ಸಲ್ಲಿಸುತ್ತದೆ.

ರಾಜ್ಯ ವಿಜ್ಞಾನ ಪರಿಷತ್ತಿನ ಸ್ಥಾಪಕರಲ್ಲೊಬ್ಬರಾದ ವಾಸುದೇವ ಮೂರ್ತಿಯವರು ಸಂಸ್ಕೃತ ವಿದ್ವಾಂಸರೂ ಆಗಿದ್ದರು. ರಸಾಯನ ವಿಜ್ಞಾನದ ಜೊತೆಗೆ ಅವರ ಆಸಕ್ತಿಗಳು ಬಹುಮುಖವಾಗಿದ್ದುವು. ಎಲ್ಲ ಪ್ರಗತಿಪರ ಚಳವಳಿಗೂ ಅವರ ಬೆಂಬಲವಿತ್ತು. ಮಾರ್ಕ್ಸ್‌ವಾದವನ್ನು ಅಧ್ಯಯನ ಮಾಡಿದ್ದ ಅವರು ಪ್ರಾಧ್ಯಾಪಕರುಗಳಾದ ಎಂ. ಎ. ಸೇತುರಾವ್, ಜೆ. ಆರ್. ಲಕ್ಷ್ಮಣರಾವ್, ಅಮೂಲ್ಯ ರೆಡ್ಡಿ ಮೊದಲಾದವರ ಜೊತೆಯಲ್ಲಿ ಕಿರಿಯರಲ್ಲಿ ವೈಜ್ಞಾನಿಕ ಮನೋಧರ್ಮ ಬೆಳೆಸಲು ಶ್ರಮಿಸಿದವರು. ಇತಿಹಾಸಕಾರ, ಸಂಸ್ಕೃತ ವಿದ್ವಾಂಸ ಪ್ರೊ॥ ಡಿ. ಡಿ. ಕೊಸಾಂಬಿಯವರೊಂದಿಗೆ ನಿಕಟ ಸಂಪರ್ಕ ಇರಿಸಿಕೊಂಡಿದ್ದ ವಾಸುದೇವ ಮೂರ್ತಿ ೧೯೫೦ರ ದಶಕದಲ್ಲಿ 'ಪ್ರಾಚೀನ ಭಾರತ ಇತಿಹಾಸ' ಕುರಿತು ಒಂದು ಕಮ್ಮಟ ಏರ್ಪಡಿಸಿದ್ದು ಇನ್ನೂ ನೆನಪಿದೆ. ಇದರಲ್ಲಿ ಇಸ್ರೋ ಅಧ್ಯಕ್ಷರಾಗಿದ್ದ ಪ್ರೊ॥ ಸತೀಶ ಧವನ್ (ಆಗ ಅವರು ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ಇದ್ದರು) ಹಾಗೂ ಇತರರು ಭಾಗವಹಿಸಿದ್ದರು. ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಜರ್ನಲ್‌ಗಳಲ್ಲಿ ತಮ್ಮ ಸಂಶೋಧನಾ ಪ್ರಬಂಧಗಳನ್ನು ಪ್ರಕಟಿಸಿರುವ ಅವರು ಹಲವಾರು ಪ್ರಶಸ್ತಿಗಳಿಗೆ ಭಾಜನರಾಗಿದ್ದರು. ಮಿತಭಾಷಿಯಾಗಿದ್ದ ವಾಸುದೇವ ಮೂರ್ತಿ ವಿಜ್ಞಾನ ಶಿಕ್ಷಣಕ್ಕೆ, ಕನ್ನಡದಲ್ಲಿ ವಿಜ್ಞಾನ ಸಂವಹನಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಿದ್ದರು. ವಾಸುದೇವ ಮೂರ್ತಿ ತಪ್ಪದೆ 'ಹೊಸತು' ಓದುತ್ತಿದ್ದವರು. ಅವರ ಸಂದರ್ಶನವೊಂದನ್ನು 'ಹೊಸತು' ಈ ಹಿಂದೆ ಪ್ರಕಟಿಸಿತ್ತು. ಅದರ ಕೆಲವು ಆಯ್ದ ಭಾಗಗಳು ಇಲ್ಲಿವೆ :

**ಹೊಸತು :** 'ಹೊಸತು' ಪ್ರತಿವರ್ಷ ಜನವರಿಯಲ್ಲಿ ಪ್ರಕಟಿಸುವ ವಿಶೇಷ ಸಂಚಿಕೆಗಾಗಿ ತಮ್ಮಂಥ ಹಿರಿಯ ವಿಜ್ಞಾನಿಗಳನ್ನು ಪರಿಚಯಿಸುತ್ತಾ ಅವರ ಸಂದೇಶವನ್ನು ನಮ್ಮ ಓದುಗರಿಗೆ ನೀಡುತ್ತಾ ಬಂದಿದೆ. ಈ ನಿಟ್ಟಿನಲ್ಲಿ ನಮ್ಮ ಓದುಗರಿಗೆ ನಿಮ್ಮ ಸಂದೇಶವೇನು ?

**ಎ.ಆರ್.ವಿ. :** ನನ್ನ ಮೊದಲ ಸಂದೇಶ "ಸರ್ವೇ ಜನಾಃ ಸುಖಿನೋ ಭವಂತು". ಆರೋಗ್ಯವಾದ ಸಮಾಜ ನಿರ್ಮಿಸಲು ಹೇಗೆ ಸಹಾಯ ಮಾಡಬಹುದೆಂಬ ಚಿಂತನೆ ಅತ್ಯಗತ್ಯ. ವಿಜ್ಞಾನ ಮತ್ತು ತಂತ್ರಜ್ಞಾನ ಇಂದು ಭರದಿಂದ ಸಾಗುತ್ತಿವೆ. ಗಾಂಧೀಜಿಯವರ ಸರ್ವೋದಯದ ಕನಸು ಇನ್ನೂ ನನಸಾಗಿಲ್ಲ. ಇದೆಲ್ಲದಕ್ಕೂ ಉತ್ಪಾದನೆ ಅತಿಮುಖ್ಯ. ಹಾಗಾಗಿ ವಿಜ್ಞಾನ ಮತ್ತು ತಂತ್ರಜ್ಞಾನದ ನೆರವಿಲ್ಲದೆ ಅದು ಸಾಧ್ಯವಿಲ್ಲ. ಅದನ್ನು ಹೇಗೆ ಅಳವಡಿಸುವುದೆಂದು ಚಿಂತಿಸಬೇಕಾದರೆ ಮಾರ್ಕ್ಸ್‌ನ ತತ್ವಗಳನ್ನೇ ಆಧರಿಸಬೇಕು. ಉತ್ಪಾದನೆಗೆ ಮೂಲ, ಚಾಲಕಶಕ್ತಿ. ಸಮತಾವಾದಕ್ಕೆ ಮಾರ್ಕ್ಸ್‌ವಾದ ಒಂದು ಸಾಧನವಾಗಬಲ್ಲದೇ ಹೊರತು ಅದೊಂದು ಪರ್ಯಾಯವಲ್ಲ.

ನನ್ನ ಅದೃಷ್ಟವೆಂದರೆ, ನನಗೆ ಜೆ. ಬಿ. ಎಸ್. ಹಾಲ್ಡೇನ್, ಜೆ. ಡಿ. ಬರ್ನಾಲ್ ಅವರಂತಹ ಹಿರಿಯ ವಿಜ್ಞಾನಿಗಳ ಸಂಪರ್ಕವಾದದ್ದು. ಅವರಿಗೂ ಇಂತಹ ಚಿಂತನೆಗಳಲ್ಲೇ ಆಸಕ್ತಿ ಇತ್ತು. Norman ಅಂತ ಕೇಳಿದೀರೋ ಇಲ್ವೋ, ಆತ Inter-continental missile ಬಗ್ಗೆ ಧೈರ್ಯವಾಗಿ ತನ್ನ ವಿರೋಧ ತೋರಿಸಿದ್ದ. ಅಂತಹ ವಿಜ್ಞಾನಿಗಳು ನಮಗೆ ಬೇಕಾಗಿರೋದು.

ಒಂದು ದಿನ ಹಾಲ್ಡೇನ್, ರಾಬರ್ಟ್ ಇನ್‌ಸ್ಟಿಟ್ಯೂಟ್ ಎಷ್ಟು ದೂರ ಇದೆ ಅಂತ ಕೇಳಿದ್ರು. ಸುಮಾರು ಒಂದು ಕಿಲೋಮೀಟರ್ ಅಂದಾಗ ನಡಿ ಹೋಗೋಣ ಅಂತ ಹೊರಟೇಬಿಟ್ರು. ಹಿಂದಿನ ರಾತ್ರಿ ಮಳೆ ಬಂದಿತ್ತು. ನೆಲ ಎಲ್ಲಾ ಒದ್ದೆ ಆಗಿತ್ತು. ದಾರೀಲಿ ಒಂದಿಷ್ಟು ಗೊದ್ದಗಳು ಹೋಗ್ತಾ ಇದ್ವು. ಅದನ್ನೇ ನೋಡ್ತಾ ಹಾಲ್ಡೇನ್ "ಮೂರ್ತಿ ಈ ಮಣ್ಣಿನ ಉಷ್ಣತೆ ಎಷ್ಟಿರಬಹುದು ?" ಅಂದ್ರು. ನಾನೋ ತಬ್ಬಿಬ್ಬಾದೆ. ಅದಕ್ಕೆ ಅವರು "ವಿಜ್ಞಾನವನ್ನು ಜನಪ್ರಿಯಗೊಳಿಸ್ತೀನಿ ಅಂತೀಯಾ. ನಮ್ಮ ಸುತ್ತ ಮುತ್ತ ನಡೆಯೋ ಘಟನೆಗಳನ್ನು ಪ್ರತಿದಿನ ಪರೀಕ್ಷಿಸಬೇಕು. ಘಟನೆಗೆ ತಕ್ಕಂತೆ ಮಾರ್ಪಾಟುಗಳನ್ನ ಅರ್ಥೈಸಬೇಕು. ಅದೇ ವಿಜ್ಞಾನ" ಅಂದ್ರು.

**ಹೊಸತು :** ವೈಜ್ಞಾನಿಕ ಜ್ಞಾನ ಮತ್ತು ಕೈಗಾರಿಕಾ ಕ್ರಾಂತಿಗಳಿಗೆ ಸಂಬಂಧವಿದೆಯೇ ? ಅದರಿಂದಾದ ಬದಲಾವಣೆಗಳಲ್ಲಿ ನಿಮ್ಮ ಪಾತ್ರವೇನಿತ್ತು ?

**ಎ.ಆರ್.ವಿ. :** ಈಗ ನೋಡಿ ಅಕ್ಕಿ ಇದ್ರೆ ಅದ್ರಲ್ಲಿ ಚಿತ್ರಾನ್ನಾನೂ ಮಾಡಬಹುದು, ಕೇಸರಿಭಾತ್‌ಅನ್ನೂ ಮಾಡಬಹುದು. ಅಂದ್ರೆ ಮೂಲವಸ್ತು ಒಂದಿದ್ರೆ ಅದನ್ನು ಉಪಯುಕ್ತವಾಗಿ ಬಳಸುವಂತಹ ತಂತ್ರಜ್ಞಾನ ರೂಪಿಸಬಹುದು.

**ಹೊಸತು :** ಈ ನಿಮ್ಮ ಎಲ್ಲಾ ಪ್ರಯತ್ನಗಳಿಗೂ ಮನ್ನಣೆ ಸಿಕ್ಕಿತೇ ?

**ಎ.ಆರ್.ವಿ. :** ಯಾರಿಂದ ? ನಮ್ಮಲ್ಲಿ ನಿಷ್ಕಾಮ ಕರ್ಮ ಅಂತ ಇದೆಯೋ ಇಲ್ಲವೋ ? ಹಲವಾರು ವಿಜ್ಞಾನಿಗಳು ಫಲಾಪೇಕ್ಷೆಯಿಲ್ಲದೆ ಜಗತ್ತಿನ ಒಳಿತಿಗೆ ದುಡಿದಿದ್ದಾರೆ. ಎಷ್ಟೋ ಜನ ಪೇಟೆಂಟ್ ಮಾಡಿಬಿಡಿ ಅಂತಾನೂ ಹೇಳ್ತಿದ್ರು.

ನನ್ನ ಹೆಸರು ಯಾರು ಕೊಟ್ರೋ ಗೊತ್ತಿಲ್ಲ. ಡಿಸೆಂಬರ್ ೧೯೭೮ರಲ್ಲಿ ಯುನೆಸ್ಕೋ ವತಿಯಿಂದ ಅಂತಾರಾಷ್ಟ್ರೀಯ ಸಮ್ಮೇಳನ ಟೊರಾಂಟೋದಲ್ಲಿ ನಡೆದಾಗ University and Industry Interaction in Chemistry ಗೆ ಭಾರತವನ್ನು ಪ್ರತಿನಿಧಿಸುವ ಅವಕಾಶ ಲಭಿಸಿತ್ತು. ಅಲ್ಲಿ ಹೋಗಿ ನೋಡಿದ್ರೆ ಈ ದಿಶೆಯಲ್ಲಿ ಯಾವುದೇ ದೇಶದ ಪ್ರಗತಿಗಿಂತ ನಮ್ಮಲ್ಲೇ ಹೆಚ್ಚಾಗಿದೆ ಅನ್ನೋ ಅರಿವಾಯಿತು. ನಂದು ಒಂದು ಸಣ್ಣ ಸಂಶೋಧನಾ ಲೇಖನ ಆಗಿತ್ತು. ಎಲೆಕ್ಟ್ರಾನಿಕ್ಸ್ ಪಿಎಚ್. ಡಿ. ಪಡೆದಿದ್ದ ಮೆಟ್ಟೂರ್ ಕೆಮಿಕಲ್ ಅಂಡ್ ಇಂಡಸ್ಟ್ರಿಯಲ್‌ನ ಮ್ಯಾನೇಜಿಂಗ್ ಡೈರೆಕ್ಟರ್ ಇದರಲ್ಲಿ ಆಸಕ್ತಿ ತೋರಿದ್ದರು. ತಂತ್ರಜ್ಞಾನ ಅಳವಡಿಸಿಕೊಂಡು ಟನ್ನುಗಟ್ಟಲೆ ಎಲೆಕ್ಟ್ರಾನಿಕ್ಸ್ ಗ್ರೇಡ್ ಸಿಲಿಕಾನ್ ತಯಾರಿಸೋ ಕಾರ್ಯವನ್ನೂ ಪ್ರಾರಂಭಿಸಿದರು.

ರಾಜೀವ್ ಗಾಂಧಿ ಪ್ರಧಾನಿಯಾಗಿದ್ದಾಗ ಇಂತಹ ತಂತ್ರಜ್ಞಾನದ ಅಳವಡಿಕೆಯನ್ನು ಶ್ಲಾಘಿಸಿ ಮ್ಯಾನೇಜಿಂಗ್ ಡೈರೆಕ್ಟರ್‌ರಿಗೆ ಪದ್ಮಶ್ರೀ ಮತ್ತು ನನಗೆ ಪದ್ಮಭೂಷಣ ಕೊಡುವ ಶಿಫಾರಸ್ಸು ಮಾಡಿದ್ರು. ರಾತ್ರೋರಾತ್ರಿ ಪೊಲೀಸರು ಬಂದು ಮಾಹಿತಿಗಳನ್ನೆಲ್ಲಾ ಸಂಗ್ರಹಿಸುವ ಹಂತಕ್ಕೂ ಬಂದಿತ್ತು. ದುರದೃಷ್ಟವಶಾತ್ ಪ್ರಧಾನಿಯೇ ಕೊಲೆಯಾದ್ದರಿಂದ ಅಂತಹ ಪ್ರಯತ್ನ ನೆನೆಗುದಿಗೆ ಬಿದ್ದಿತು. ಆಮೇಲೆ ಏನಾಯ್ತೋ ನನಗಂತೂ ಗೊತ್ತಿಲ್ಲ. ಒಮ್ಮೆ ರಾಜೀವ ಗಾಂಧಿ ನನ್ನೊಡನೆ ಆರು ಗಂಟೆ ಕಾಲ ಕೂತು ಸಿಲಿಕಾನ್ ತಂತ್ರಜ್ಞಾನದ ಒಳಸುಳಿವುಗಳನ್ನೆಲ್ಲಾ ತಿಳಿದುಕೊಂಡು ಅದರ ಬೆಳವಣಿಗೆಗೆ ಆದ್ಯತೆ ನೀಡಬೇಕೆಂದು ತೀರ್ಮಾನಿಸಿದ್ದರು.

# ಧಾರ್ಮಿಕ ಅಲ್ಪಸಂಖ್ಯಾತ ಸಮುದಾಯದ ತಲ್ಲಣಗಳು

ಡಾ॥ ಕೆ. ಷರೀಫಾ

"ನನ್ನ ಮನೆಗೆ ಸಮನ್ಸ್ ಬಂದಾಗ ನಾನು ತೀವ್ರ ಒತ್ತಡಕ್ಕೊಳಗಾಗಿದ್ದೆ. ನನ್ನ ಸರ್ಕಾರಿ ನ್ಯಾಯವಾದಿಗಳು ಯಾರೆಂಬುದೂ ನನಗೆ ತಿಳಿದಿರಲಿಲ್ಲ. ಇನ್ನೊಂದೆಡೆ ನನಗೆ ಕೊಲೆ ಬೆದರಿಕೆಗಳು ಬರುತ್ತಿದ್ದವು. ನ್ಯಾಯಾಲಯಕ್ಕೆ ಹೋಗಬೇಡ, ನಿನ್ನ ಕುಟುಂಬವನ್ನು ಕೊಂದುಹಾಕುತ್ತೇವೆ – ಎಂದು ಅವರು ಬೆದರಿಸುತ್ತಿದ್ದರು. ಒಂದು ವೇಳೆ ನೀನು ನ್ಯಾಯಾಲಯಕ್ಕೆ ಹೋದರೂ ನಮ್ಮ ಪರವಾಗಿಯೇ ಮಾತನಾಡು ಎಂದು ಹೇಳುತ್ತಿದ್ದರು. ಅಪರಾಧಿಗಳನ್ನು ಗುರುತಿಸಬೇಡ, ಹಾಗೇನಾದರೂ ಗುರುತಿಸಿದಲ್ಲಿ ನಿನ್ನ ಇಡೀ ಸಂಸಾರ ನಿರ್ನಾಮವಾಗುತ್ತದೆ ಎಂದು ಹೆದರಿಸುತ್ತಿದ್ದರು."

ಈ ಭೂಮಿ ಮೇಲೆ ಬದುಕುವ ಎಲ್ಲರಿಗೂ ಬದುಕು ಸಹ್ಯವಾಗಬೇಕು. ಯಾವುದೇ ದೇಶದ ಅಲ್ಪಸಂಖ್ಯಾತರಿಗೆ ಇಂತಹ ದುಸ್ಥಿತಿ ಬಾರದಿರಲಿ, ಕೂಡಿ ಬಾಳಿದ ಸಂಸ್ಕೃತಿಗೆ ಸಾವಿರಾರು ವರ್ಷಗಳ ಇತಿಹಾಸವಿದೆ. ಕೋಮುವಾದಿ ಸಂಸ್ಕೃತಿ ನಮ್ಮದಲ್ಲದ ಸಂಸ್ಕೃತಿಯಾಗಿದೆ.

**ಭಾ**ರತ ಒಂದು ರಾಷ್ಟ್ರವಾಗಿ ಬೆಳೆಯಬೇಕಾದರೆ ಅದು ತನ್ನ ಹಳೆಯ ಶ್ರೇಣೀಕೃತ ವ್ಯವಸ್ಥೆಯಿಂದ ಹಾಗೂ ತನ್ನ ಒಳಗಿನ ಸಾಮಾಜಿಕ ತಿಕ್ಕಾಟ, ಘರ್ಷಣೆಗಳಿಂದ ಹೊರಬರಬೇಕಿದೆ. ನಾಡಿನ ಸಂಪತ್ತನ್ನು ಅವಕಾಶವಂಚಿತ ವರ್ಗಗಳಿಗೆ ಹಂಚಿಕೆ ಮಾಡಲು ಸರ್ಕಾರಗಳಿಗೆ ಸಾಧ್ಯವಾಗಬೇಕಿದೆ. ಸಾವಿರಾರು ವರ್ಷಗಳಿಂದ ಸಾಮಾಜಿಕ, ಆರ್ಥಿಕ ಅಸಮಾನತೆಗಳಿಂದ ತತ್ತರಿಸಿದ್ದ ದುರ್ಬಲವರ್ಗಗಳ ರಕ್ಷಣೆಗಾಗಿಯೇ ಸಾಮಾಜಿಕ ನ್ಯಾಯವನ್ನು ಸಂವಿಧಾನದ ಪ್ರಸ್ತಾಪನೆ ಮತ್ತು ವಿಧಿ ೩೮ರಲ್ಲಿ ಪ್ರಧಾನವಾಗಿ ಪ್ರಸ್ತಾಪಿಸಿದೆ. ಭಾರತದಲ್ಲಿ ಸಾವಿರಾರು ಜಾತಿ, ಭಾಷೆ, ಧರ್ಮಗಳಿವೆ. ಭಾರತೀಯ ಸಮಾಜದಲ್ಲಿ ಸಾವಿರಾರು ವರ್ಷಗಳಿಂದ ಅಂತರ್ಗತವಾಗಿರುವ ಸಾಮಾಜಿಕ ಅಸಮಾನತೆಗಳ ವಿರುದ್ಧ ನಿರಂತರ ಹೋರಾಟಗಳು ನಡೆಯುತ್ತಿವೆ.

ಕಳೆದ ಅರವತ್ತು ವರ್ಷಗಳಲ್ಲಿ ರಾಜ್ಯದಲ್ಲಿ ತೀವ್ರತರ ಬದಲಾವಣೆಗಳಾಗುತ್ತಿವೆ. ದುರ್ಬಲ ವರ್ಗ, ಪರಿಶಿಷ್ಟ ಜಾತಿ, ಬುಡಕಟ್ಟು, ಧಾರ್ಮಿಕ ಅಲ್ಪಸಂಖ್ಯಾತರು ಬೌದ್ಧಿಕ ಸಂಪನ್ಮೂಲಗಳ ಮೇಲೆ ತಮ್ಮ ಹಿಡಿತ ಸಾಧಿಸುತ್ತಿದ್ದಾರೆಯೆ ? ಧಾರ್ಮಿಕ ಅಲ್ಪಸಂಖ್ಯಾತರಿಗೆ ನ್ಯಾಯ ದೊರಕುತ್ತಿದೆಯೆ ? ಅವರ ಸಮಸ್ಯೆಗಳೇನು ? ತಲ್ಲಣಗಳೇನು ? ಅವರಿಗೆ ಸಾಮಾಜಿಕ ನ್ಯಾಯ ದೊರೆಯುತ್ತಿದೆಯೆ ? ಸಾಚಾರ್ ವರದಿ ಏನನ್ನು ಹೇಳುತ್ತದೆ ? ಅಲ್ಪಸಂಖ್ಯಾತರ ವರ್ತಮಾನದ ತಲ್ಲಣಗಳೇನು ? ಎಂಬ ಅನೇಕ ಪ್ರಶ್ನೆಗಳು ನಮ್ಮ ಮುಂದಿವೆ. ಭಾರತದಲ್ಲಿ ಹುಟ್ಟಿದ ಪ್ರತಿಯೊಬ್ಬನಿಗೂ ಜಾತಿ ಭೂತ ಅಂಟಿದೆ. ಭಾರತದಲ್ಲಿ ೫೦೦೦ಕ್ಕೂ ಹೆಚ್ಚು ಜಾತಿಗಳಿವೆ. ಇಂದು ಮನುಷ್ಯನಿಗೆ ಜಾತಿ ಮೀರಲು ಸಾಧ್ಯವಾಗುತ್ತಿಲ್ಲ.

ಹರ್ಬರ್ಟ್ ಆಪ್ತೇಕರ್ ಎಂಬ ರಾಜಕೀಯ ವಿಜ್ಞಾನಿಯು ತನ್ನ ಕೃತಿ "ದಿ ನೇಚರ್ ಆಫ್ ಡೆಮಾಕ್ರಸಿ, ಫ್ರೀಡಂ ಆ್ಯಂಡ್ ರೆವೊಲ್ಯೂಷನ್" ಕೃತಿಯಲ್ಲಿ ಒಂದು ಮಹತ್ವದ ಮಾತನ್ನು ಹೇಳುತ್ತಾನೆ. "ಬೂರ್ಜ್ವಾ ದೃಷ್ಟಿಕೋನವು ರಾಜಕೀಯವನ್ನು ಉಳ್ಳವರ ನಡುವಿನ ಹೋರಾಟವಾಗಿ ನೋಡುತ್ತದೆಯೇ ಹೊರತು ಉಳ್ಳವರು ಮತ್ತು ಬಡವರ ನಡುವಿನ ಹೋರಾಟವನ್ನಾಗಿ ನೋಡುವುದಿಲ್ಲ" ಈ ಹೇಳಿಕೆ ತುಂಬಾ ಗಮನಾರ್ಹವಾದುದು.

ಕರ್ನಾಟಕದಲ್ಲಿ ದಲಿತ ಮತ್ತು ರೈತ ಚಳುವಳಿಗಳನ್ನು ಶ್ರೇಷ್ಠಮಟ್ಟದಲ್ಲಿ ಕಟ್ಟಲಾಯಿತು. ಎಲ್. ಜಿ. ಹಾವನೂರ ವರದಿ ಅದಕ್ಕೆ ಪೂರಕವಾಗಿ ಬಂದಿತು. ಅಲ್ಪಸಂಖ್ಯಾತ ವರ್ಗಗಳ ಬಗ್ಗೆ ಮಾತಾಡಬೇಕೆಂದರೆ ಅಲ್ಲಿಯ ಜೈನರು, ಬೌದ್ಧರು ನವಬ್ರಾಹ್ಮಣರಾಗಿದ್ದಾರೆ. ದಲಿತರು, ಮುಸ್ಲಿಮರು ಸಿಖ್ಖರು ಮತ್ತು ಬುಡಕಟ್ಟು ಜನಾಂಗದವರು ಭಿನ್ನವಾಗಿ ಬದುಕುತ್ತಿದ್ದಾರೆ. 'ಹಿಂದೂ' ಎಂಬ ಶಬ್ದ ಎಲ್ಲರನ್ನೂ ಆವರಿಸಿಕೊಂಡು ಮುಸ್ಲಿಮರನ್ನು ಪ್ರತ್ಯೇಕಿಸುತ್ತದೆ. ಮುಸ್ಲಿಮರ ನೋವು ತಲ್ಲಣಗಳು ಭಿನ್ನವಾಗಿವೆ. ಮುಸ್ಲಿಮರನ್ನು ಸಾವಿರಾರು ವರ್ಷಗಳ ನಂತರ ಇಂದಿಗೂ ಹೊರಗಿಟ್ಟು ಮಾತನಾಡಲಾಗುತ್ತದೆ. ಇಸ್ಲಾಮಿನ ಮೂಲಭೂತ ಪ್ರಶ್ನೆಗಳು ನಮಗೆದುರಾಗಿ ಬಂದಾಗ, ಅದು ಅವರ ಧಾರ್ಮಿಕ ಪ್ರಶ್ನೆ. ನಮಗೇಕೆ ಅದರ ಉಸಾಬರಿ



ಎಂದು ಇತರರು ದಿವ್ಯ ಮೌನಿಗಳಾಗುತ್ತಾರೆ. ಮುಸ್ಲಿಮರ ಸಾಮಾಜಿಕ, ಧಾರ್ಮಿಕ, ಆರ್ಥಿಕ ಮತ್ತು ರಾಜಕೀಯ ಸಮಸ್ಯೆಗಳೇನು ? ಎಂಬುದು ಮುಕ್ತ ವೇದಿಕೆಗಳಲ್ಲಿ ಚರ್ಚೆಯಾಗಬೇಕಿದೆ. ಗುಜರಾತಿನ ಮುಸ್ಲಿಮರ ಬರ್ಬರ, ಸಾಮೂಹಿಕ ಹತ್ಯಾಕಾಂಡ, ಬಾಬ್ರಿ ಮಸೀದಿಯ ಧ್ವಂಸದ ನಂತರ ನಡೆದ ಗಲಭೆ, ರಕ್ತಪಾತಗಳಿಂದ ದೇಶದ ಪ್ರತಿಯೊಬ್ಬ ಮುಸ್ಲಿಮನ ಮನದಲ್ಲಿ "ನಾನು ಯಾರು ? ನನ್ನನ್ನೇಕೆ ಪ್ರತ್ಯೇಕಿಸಲಾಗುತ್ತಿದೆ ?" ಎಂಬ ಪ್ರಶ್ನೆ ಅವರ ಕಣ್ಣ ಮುಂದೆ ನಿಲ್ಲುತ್ತದೆ. ಸಾಮಾಜಿಕವಾಗಿ ಹಿಂದುಳಿದ ಮುಸ್ಲಿಂ ಸಮುದಾಯದ ಭೂಮಿಯ ಮೇಲಿನ ಹಕ್ಕು ದಲಿತರಿಗಿಂತ ಕನಿಷ್ಠವಾಗಿದೆ. ಆ ಕಾರಣಕ್ಕೂ ಅವರು ತಬ್ಬಲಿಗಳ ಗುಂಪಾಗುತ್ತಿದ್ದಾರೆ. ಇಂದಿಗೂ ಭಾರತದ ದಲಿತರು, ಮುಸ್ಲಿಮರು, ಬುಡಕಟ್ಟು ಸಮುದಾಯಗಳು ಇವತ್ತಿಗೂ ಸಂವಿಧಾನ ನೀಡಿರುವ ಹಕ್ಕುಗಳಾದ ಜೀವನೋಪಾಯ, ಕೆಲಸ, ವಸತಿ, ಶಿಕ್ಷಣ, ಆರೋಗ್ಯ ಮತ್ತು ಆಹಾರಕ್ಕಾಗಿ ಹೋರಾಡಲೇಬೇಕಾದ ಪರಿಸ್ಥಿತಿಯಿದೆ. ಸಂವಿಧಾನದತ್ತ ಹಕ್ಕುಗಳೂ ದಕ್ಕುತ್ತಿಲ್ಲ. ಅದನ್ನು ಗಳಿಸಲು ಅವರು ರಾಜಕೀಯ ಬಲವನ್ನು ಗಳಿಸುವ ಅನಿವಾರ್ಯತೆಯಿದೆ. ದೇಶದ ಸಂಪನ್ಮೂಲ ಹಂಚಿಕೆಯಲ್ಲಿ ಅಲ್ಪಸಂಖ್ಯಾತರಿಗೆ, ಅದರಲ್ಲೂ ಮುಸ್ಲಿಮರಿಗೆ ನ್ಯಾಯಸಮ್ಮತ ಪಾಲು ಸಿಕ್ಕಿಲ್ಲ ಎಂದು ಪ್ರಧಾನಿ ಮನಮೋಹನ ಸಿಂಗ್ ಹೇಳಿದರು. ರಾಜಕೀಯ ವಲಯಗಳು "ಅಲ್ಪಸಂಖ್ಯಾತರ ಅಭಿವೃದ್ಧಿಗೆ ದೇಶದ ಸಂಪನ್ಮೂಲದಲ್ಲಿ ನಿರ್ದಿಷ್ಟ ಭಾಗ ಬಳಸಲು ಸರ್ಕಾರ ಬದ್ಧವಾಗಿದೆ." ಎಂಬ ಹೇಳಿಕೆ ನೀಡುವುದರಿಂದ ಅಲ್ಪಸಂಖ್ಯಾತರ ಅಭಿವೃದ್ಧಿ ಆಗುತ್ತದೆಯೆ ? ಮುಸ್ಲಿಮರಷ್ಟೇ ದುಸ್ಥಿತಿಯಲ್ಲಿಲ್ಲ ; ಬದಲಾಗಿ ಸಮಾಜದ ಬೇರೆ ಬೇರೆ ಜನಸಮುದಾಯಗಳೂ ದುಸ್ಥಿತಿಯಲ್ಲಿವೆ. ಪರಿಶಿಷ್ಟ ಜಾತಿ, ವರ್ಗ, ಅಲ್ಪಸಂಖ್ಯಾತರು, ಹಿಂದುಳಿದವರು ಹಾಗೂ ಗ್ರಾಮೀಣ ಪ್ರದೇಶದ ಎಲ್ಲಾ ವರ್ಗದ ಬಡಜನರ ಅಭಿವೃದ್ಧಿಗೆ ದೇಶದ ಸಂಪತ್ತು ಬಳಕೆಯಾಗಬೇಕು. ರಾಜಕೀಯ ಲಾಭಕ್ಕಾಗಿ ಮುಸ್ಲಿಮರನ್ನು ವೋಟ್ ಬ್ಯಾಂಕುಗಳಾಗಿ ಮಾಡುವುದು, ಅಭಿವೃದ್ಧಿಯನ್ನು ಧರ್ಮದ ಆಧಾರದ ಮೇಲೆ ಓಲೈಸುವುದು, ಇಲ್ಲವೆ ವಿರೋಧಿಸುವುದು ಎರಡೂ ತಪ್ಪು.

೧೮೮೧ರಲ್ಲಿ ಮೊಟ್ಟ ಮೊದಲ ಬಾರಿಗೆ ಭಾರತದಲ್ಲಿ ಜನಗಣತಿ ಪ್ರಕಟವಾಯಿತು. ಧರ್ಮದ ಆಧಾರದ ಮೊದಲ ವರ್ಗೀಕರಣ ಇದಾಯಿತು. ಹಿಂದು, ಮುಸ್ಲಿಂ, ಕ್ರೈಸ್ತ, ಜೈನ, ಬೌದ್ಧ ಎಂದು ಬೇರ್ಪಡಿಸಿದಾಗ ಭಾರತೀಯ ಮುಸ್ಲಿಮರು "ಮುಸ್ಲಿಂ" ಛತ್ರದಡಿ ಸಂಘಟಿತರಾಗತೊಡಗಿದರು. ಉಳಿದವರೆಲ್ಲ ಸಿಖ್ಖ್, ಕ್ರೈಸ್ತರನ್ನು ಬಿಟ್ಟು ಎಲ್ಲಾ ಹಿಂದುಗಳು ಒಂದಾದರು. ಅನಂತರದಲ್ಲಿ ಬಂದ ಸರ್ಕಾರದ ವರದಿಗಳು, ಜನಗಣತಿಗಳು, ಆರ್ಥಿಕತೆ, ಶೈಕ್ಷಣಿಕತೆ, ಜಾತೀಯತೆ ಮತ್ತು ಬುಡಕಟ್ಟುಗಳನ್ನು ವರ್ಗೀಕರಿಸತೊಡಗಿದವು. ದಲಿತರು ಹಿಂದುಳಿದ ವರ್ಗವೆಂಬ ಹೊಸ ಹೆಸರನ್ನು ಒಪ್ಪಿಕೊಂಡರು. ಹೊಸ ವರ್ಗೀಕರಣದ ಹರಹು ಶಿಕ್ಷಣ, ಉದ್ಯೋಗ, ಮೀಸಲಾತಿಯವರೆಗೆ ಹರಡಿತು. ಜಾತಿಗೊಂದು ಮಠಗಳು, ಮಠಕ್ಕೊಬ್ಬ ಗುರುವನ್ನು ಹುಡುಕಿಕೊಂಡರು. ಈ ಮೂಲಕ ಇಡೀ ಸಮುದಾಯಗಳು ಮಠಗಳ ಹಿಡಿತಕ್ಕೆ ಬಂದಂತೆ ಮುಸ್ಲಿಂ ಸಮುದಾಯಗಳು ಮುಲ್ಲಾ-ಮೌಲ್ವಿಗಳ ಹಿಡಿತಕ್ಕೆ ಇಡಿಯಾದ ಸಮುದಾಯವನ್ನು ಹಿಡಿದಿಡಲು ಆಗಲಿಲ್ಲ. ಕನಕ, ವಾಲ್ಮೀಕಿ, ಚೌಡಯ್ಯ, ಮಂಟೇಸ್ವಾಮಿ, ಕೆಂಪೇಗೌಡ, ಟಿಪ್ಪು ಸುಲ್ತಾನ್, ಸಂಗೊಳ್ಳಿ ರಾಯಣ್ಣ, ಕಿತ್ತೂರು ಚೆನ್ನಮ್ಮ ಇವರೆಲ್ಲರ ಭಾವಚಿತ್ರ ರಾರಾಜಿಸತೊಡಗಿದವು, ಊರುಕೇರಿ, ಬಸ್ ನಿಲ್ದಾಣ, ವಿಮಾನ ನಿಲ್ದಾಣ, ಶಾಲೆ, ಕಾಲೇಜು, ವಿಶ್ವವಿದ್ಯಾಲಯಗಳಿಗೆ ಹೆಸರಿಡಲು ನಾ ಮುಂದು ತಾ ಮುಂದು ಎಂದು ಪರದಾಡತೊಡಗಿದರು. ದುರಂತವೆಂದರೆ, ಜಾತಿಯನ್ನು ಮೀರಿದ ಇವರೆಲ್ಲ ಜಾತಿ ಚೌಕಟ್ಟಿನಲ್ಲಿ ನಿಲ್ಲಬೇಕಾಯಿತು.

ಮಾನವ ಅಭಿವೃದ್ಧಿಯೆನ್ನುವುದು ಯಾವುದೇ ರೀತಿಯ ಭೌತಿಕ ಸಂಗತಿಗಳಿಂದ ಅಳೆಯಬಹುದಾದರೂ ಸಾಮಾಜಿಕ ಬದುಕಿನ ಭಾಗವಾಗಿರುವ ಮಾನಸಿಕ ಅಂಶಗಳನ್ನು ನಿರ್ಲಕ್ಷಿಸಿ, ಮಾನವ ಅಭಿವೃದ್ಧಿಯನ್ನು ಸಾಧಿಸಲಾಗದು. ತಳ ಸಮುದಾಯದ ಶೋಷಿತ ಒಬ್ಬ ವ್ಯಕ್ತಿ ಅನುಭವಿಸಿದ, ಅನುಭವಿಸುವ ಸೌಲಭ್ಯಗಳನ್ನು ಕಂಡು ಅವನೊಂದಿಗೆ ಬದುಕುವ ಇತರರಿಗೆ ಅಸೂಯೆಯಾಗುತ್ತದೆ. ಆದ್ದರಿಂದ ಅಲ್ಪಸಂಖ್ಯಾತರಲ್ಲಿಯೇ ಇರುವಂತಹ ತಾರತಮ್ಯಗಳೂ ಹಲವಾರು ಬಾರಿ ಅಸಹನೀಯವಾಗುತ್ತವೆ. ದೇಶದ ಎಲ್ಲಾ ಜಾತಿ, ಜನಸಮುದಾಯಗಳ ಮಧ್ಯೆ ಹಂಚಿಕೆಯಾಗುವ ಸಂಪತ್ತು ಸಮವಾಗಿರಬೇಕು. ಅಲ್ಪಸಂಖ್ಯಾತರ ಅಭಿವೃದ್ಧಿ ಕುರಿತಂತೆ ಜಸ್ಟಿಸ್ ರಾಜೇಂದ್ರ ಸಾಚಾರ್ ವರದಿಯೂ ಇದನ್ನೇ ಹೇಳುತ್ತದೆ.

ಸಾಚಾರ್ ವರದಿಯ ಪ್ರಕಾರ ದಲಿತರಿಗಿಂತ ಮುಸ್ಲಿಮರು ಕೂದಲೆಳೆಯಷ್ಟು ಮಾತ್ರ ಮೇಲಿದ್ದಾರೆ. ಅವಕಾಶವಂಚಿತ ಜನಸಮುದಾಯಗಳನ್ನು ದೇಶದ ಮುಖ್ಯ ಪ್ರವಾಹದೊಂದಿಗೆ ಕೂಡಿಸಲು, ಸಾಚಾರ್ ವರದಿ ಒತ್ತಾಯಿಸುತ್ತದೆ. ಶೇ. ೯೪.೯ರಷ್ಟು ಮುಸ್ಲಿಮರು ಬಡತನ ರೇಖೆಗಿಂತ ಕೆಳಗಿದ್ದಾರೆ. ಶೇ. ೬೦.೨ರಷ್ಟು ಭೂಹೀನರಾಗಿದ್ದಾರೆ. ನಗರಗಳಲ್ಲಿ ಶೇ. ೫೪.೬ರಷ್ಟು ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಶೇ. ೬೦.೧ರಷ್ಟು ಶಾಲಾ ಶಿಕ್ಷಣದಿಂದ ವಂಚಿತರಾಗಿದ್ದಾರೆ. ಸರ್ಕಾರಿ ಸೇವೆಯಲ್ಲಿ ಕೇವಲ ಶೇ. ೪.೯ರಷ್ಟು ಮಾತ್ರ ಪ್ರಾತಿನಿಧ್ಯ ಪಡೆದಿದ್ದಾರೆ. ಯಾವುದೇ ಸಮುದಾಯ ಅವಕಾಶವಂಚಿತರಾಗುವುದು ಅಮಾನವೀಯ. ರಾಷ್ಟ್ರದ ಲಭ್ಯ ಸಂಪನ್ಮೂಲಗಳು ಎಲ್ಲರವೂ ಆಗಿವೆ. ಅವು ಜನಸಂಖ್ಯಾ ಪ್ರಮಾಣಕ್ಕನು ಗುಣವಾಗಿ ಹಂಚಿಕೆಯಾಗಬೇಕು. ಇದುವೇ ಪ್ರಜಾಪ್ರಭುತ್ವದ ತಾತ್ವಿಕ ಬುನಾದಿ.

ಮುಸ್ಲಿಮರು ಹೆಚ್ಚಾಗಿರುವ ಪ್ರದೇಶಗಳಲ್ಲಿ ಅವರಿಗೆ ಕಡ್ಡಾಯ ರಾಜಕೀಯ ಪ್ರಾತಿನಿಧ್ಯ ಸಿಗಬೇಕು. ಆದರೆ ಆ ಕ್ಷೇತ್ರವನ್ನು ಪರಿಶಿಷ್ಟ ಜಾತಿಯವರಿಗೆ ಮೀಸಲಿಟ್ಟು, ಪರಿಶಿಷ್ಟ ಜಾತಿಯವರೇ ಹೆಚ್ಚಾಗಿರುವಂತಹ ಕ್ಷೇತ್ರಗಳಲ್ಲಿ ಸಾಮಾನ್ಯ ಕ್ಷೇತ್ರಗಳೆಂದು ಘೋಷಿಸುತ್ತಾರೆ. ಹೀಗೆ ಮುಸ್ಲಿಮರ ರಾಜಕೀಯ ಪಾಲ್ಗೊಳ್ಳುವಿಕೆಯನ್ನು ಖೋತಾ ಮಾಡುತ್ತಾರೆ. ಮುಸ್ಲಿಂ ಜನಾಂಗದಲ್ಲಿ ಆರ್ಥಿಕ, ರಾಜಕೀಯ ಮತ್ತು ಶೈಕ್ಷಣಿಕ ಹಿಂದುಳಿಯುವಿಕೆಯಿದೆ, ಜನಸಂಖ್ಯಾ ಪ್ರಮಾಣಕ್ಕೆ ತಕ್ಕ ಉದ್ಯೋಗಾವಕಾಶಗಳು ಸಿಕ್ಕಿಲ್ಲ. ಅಸ್ಸಾಂನಲ್ಲಿ ಶೈಕ್ಷಣಿಕ ಮಟ್ಟ (ಸಾಕ್ಷರತೆ) ಶೇ. ೬೪.೧ರಷ್ಟಿದ್ದರೂ ಮುಸ್ಲಿಮರದು ಕೇವಲ ಶೇ. ೧೮ ಮಾತ್ರ. ಮುಸ್ಲಿಮರ ಶೈಕ್ಷಣಿಕ ಮಟ್ಟ ಹೀಗಿದೆ :

೧. ಪದವೀಧರರ ಪ್ರಮಾಣ – ಶೇ. ೩.೪
೨. ಸ್ನಾತಕೋತ್ತರ ಪದವಿ – ಶೇ. ೨.೦೦
೩. ಮದರಸಾಗಳಿಗೆ ಹೋಗುವ ಮಕ್ಕಳ ಪ್ರಮಾಣ – ಶೇ. ೩
೪. ೬ – ೧೪ ವಯೋಮಾನದ ಮಕ್ಕಳು – ಶೇ. ೨೫

ಜನಸಂಖ್ಯಾ ಪ್ರಮಾಣಕ್ಕನುಗುಣವಾಗಿ ಉದ್ಯೋಗಾವಕಾಶಗಳೂ ಅವರಿಗೆ ದೊರೆತಿಲ್ಲ. ಸಂವಿಧಾನದ ಪರಿಚ್ಛೇದ ೧೪, ೧೫, ೧೬ ಮತ್ತು ೨೫ರ ಆಶಯ ಅವಕಾಶ ಪಡೆವಲ್ಲಿ ಸಮಾನತೆ, ನಂಬಿಕೆ ಸ್ವಾತಂತ್ರ್ಯ, ಧರ್ಮ ಜಾತಿ ಮತ್ತಿತರ ಆಧಾರದ ತಾರತಮ್ಯದಿಂದ ನಾಗರಿಕರ ರಕ್ಷಣೆಯನ್ನು ಖಾತ್ರಿಪಡಿಸುತ್ತದೆ. ಆದರೆ ವಾಸ್ತವ ಚಿತ್ರಣ ಬೇರೆಯದೇ ಆಗಿದೆ. ಮುಸ್ಲಿಮರಿಗೆ ದೊರಕಿರುವ ಸರ್ಕಾರಿ ಉದ್ಯೋಗ ಪ್ರಮಾಣ ತೀರ ಕನಿಷ್ಠ.

೧. ಐ.ಎ.ಎಸ್. – ಶೇ. ೩
೨. ಐ.ಪಿ.ಎಸ್. – ಶೇ. ೪
೩. ಐ.ಎಫ್.ಎಸ್. – ಶೇ. ೧.೮
೪. ಪೊಲೀಸ್ ಪೇದೆ – ಶೇ. ೬
೫. ಆರೋಗ್ಯ ಇಲಾಖೆ – ಶೇ. ೪
೬. ಸಾರಿಗೆ ಇಲಾಖೆ – ಶೇ. ೬.೫

ಮತ್ತು ಕೇಂದ್ರ ಸರ್ಕಾರದ ನೌಕರಿಗಳಲ್ಲಿ ಮುಸ್ಲಿಮರ ಪಾಲು ೨೦೦೦ನೇ ಸಾಲಿನಲ್ಲಿ ಈ ಕೆಳಗಿನಂತೆ ಇರುವುದನ್ನು ಓಮರ್ ಖೈದಿ ಮುಸ್ಲಿಂಸ್ ಇನ್ ಇಂಡಿಯನ್ ಎಕಾನಮಿ, ನ್ಯೂ ದೆಹಲಿ ತಿಳಿಸುತ್ತದೆ :

| ಪ್ರವರ್ಗ | ಅಂದಾಜು | ಒಟ್ಟು ಜನಸಂಖ್ಯೆಯ ಶೇಕಡಾವಾರು | ೧೯೯೨ರಲ್ಲಿ ಮುಸ್ಲಿಮರ ಪ್ರಾತಿನಿಧ್ಯ ಶೇಕಡಾವಾರು |
|---|---|---|---|
| ಎ | ೭೭,೬೮೦ | ೨.೦೫ | ೧.೬೧ |
| ಬಿ | ೧,೭೪,೬೭೫ | ೪.೬೩ | ೩.೦೦ |
| ಸಿ | ೨೩,೮೭,೬೨೫ | ೬೩.೨೨ | ೪.೪೧ |
| ಡಿ | ೧೧,೩೬,೬೮೬ | ೩೦.೦೯ | ೫.೧೨ |
| **ಒಟ್ಟು** | **೩೭,೭೬,೬೬೬** | **೧೦೦.೦೦** | **–** |

ಭಾರತದ ಒಟ್ಟು ಜನಸಂಖ್ಯಾ ಪ್ರಮಾಣದಲ್ಲಿ ಮುಸ್ಲಿಮರು ಶೇ. ೧೩.೮ರಷ್ಟಿದ್ದು ಅಲ್ಪಸಂಖ್ಯಾತ ವರ್ಗದಲ್ಲಿ ಅವರ ಪ್ರಮಾಣ ಶೇ. ೭೮ರಷ್ಟಿದೆ. ಜನಗಣತಿ (೨೦೦೧)ಯ ಪ್ರಕಾರ ಕರ್ನಾಟಕದಲ್ಲಿ ಮುಸ್ಲಿಮರ ಜನಸಂಖ್ಯೆ ೬೪.೬೩ ಲಕ್ಷ (ಶೇ. ೧೨.೨೩) ಇದೆ. ಜನಸಂಖ್ಯೆಯಲ್ಲಿ ಅಲ್ಪಸಂಖ್ಯಾತರ ಪ್ರಮಾಣ ಈ ಕೆಳಗಿನಂತಿದೆ :

೧. ಮುಸ್ಲಿಮರು – ೬೪.೬೩ ಲಕ್ಷ (ಶೇ. ೧೨.೨೩)
೨. ಕ್ರೈಸ್ತರು – ೧೦.೦೯ ಲಕ್ಷ (ಶೇ. ೧.೯೧)
೩. ಜೈನರು – ೪.೧೩ ಲಕ್ಷ (ಶೇ. ೦.೭೮)
೪. ಬೌದ್ಧರು – ೩.೯೩ ಲಕ್ಷ (ಶೇ. ೦.೭೪)
೫. ಸಿಖ್ಖರು – ೦.೧೫ ಲಕ್ಷ (ಶೇ. ೦.೦೩)

ಜನಸಂಖ್ಯೆಯ ಪ್ರಮಾಣಕ್ಕನುಗುಣವಾಗಿ ದೊರೆಯದ ಸವಲತ್ತುಗಳು ಇಷ್ಟೊಂದು ಅವಕಾಶವಂಚಿತರಾಗಿದ್ದು, ಅಲ್ಪಸಂಖ್ಯಾತರ ಸ್ಥಿತಿಯನ್ನು ಸೂಚಿಸುತ್ತವೆ. ಇದು ಅತ್ಯಂತ ಅಮಾನವೀಯ ನಡೆಯಾಗಿದೆ. ದೇಶದಾದ್ಯಂತ ಹೀನಾಯ ಸ್ಥಿತಿಯಲ್ಲಿರುವ ಸಂಕಷ್ಟಕ್ಕೆ ಸಿಲುಕಿರುವ ಮುಸ್ಲಿಮರನ್ನು ಸಂಶಯದ ದೃಷ್ಟಿಯಿಂದ ನೋಡುವ ದೃಷ್ಟಿಕೋನಗಳನ್ನು ಕೋಮುವಾದಿ ಶಕ್ತಿಗಳೂ ಹುಟ್ಟುಹಾಕುತ್ತಿವೆ, ಮುಸ್ಲಿಂ ವಿರೋಧಿ ಭಾವವನ್ನು ಬೆಳೆಸುತ್ತಿವೆ. ಈ ಮೂಲಕ ತಮ್ಮ ಸ್ವಾರ್ಥ ರಾಜಕೀಯ ಮಾಡುತ್ತಿದ್ದಾರೆ. ಭಾರತದ ಒಟ್ಟಾರೆ ಜನಸಂಖ್ಯೆಯಲ್ಲಿ ಶೇ. ೩೦ರಷ್ಟು ಜನ ಬಡತನ ರೇಖೆಗಿಂತ ಕೆಳಗಿದ್ದಾರೆ, ಮುಸ್ಲಿಮರಲ್ಲಿ ಬಡತನ ರೇಖೆಗಿಂತ ಕೆಳಹಂತದಲ್ಲಿ ಬದುಕುತ್ತಿರುವವರ ಸಂಖ್ಯೆ ಶೇ. ೪೩ರಷ್ಟಿದೆ. ರಾಷ್ಟ್ರದ ಒಟ್ಟಾರೆ ಸಾಕ್ಷರತಾ ಪ್ರಮಾಣ ಶೇ. ೬೫ರಷ್ಟು ಇದ್ದರೆ, ಮುಸ್ಲಿಮರಲ್ಲಿ ಕೇವಲ ಶೇ. ೩೯ರಷ್ಟಿದೆ. ಜನಸಂಖ್ಯೆಯ ಪ್ರಮಾಣದಲ್ಲಿ ಶೇ. ೧೩.೮ರಷ್ಟು ಇದ್ದರೂ ಲೋಕಸಭೆಯಲ್ಲಿ ಅವರ ಪ್ರಾತಿನಿಧ್ಯ ಕೇವಲ ಶೇ. ೬.೬ರಷ್ಟಿದೆ. ಯಾವುದೇ ದೃಷ್ಟಿಯಿಂದ ನೋಡಿದರೂ ಅವರಿಗೆ ನ್ಯಾಯ ದೊರೆತಿಲ್ಲ. ಆದರೂ ಸರ್ಕಾರಗಳು ಮುಸ್ಲಿಮರನ್ನು ಓಲೈಸುತ್ತಿವೆ ಎಂದು ಆಪಾದಿಸುತ್ತಾರೆ. ಮುಸ್ಲಿಮರ ಸಮಸ್ಯೆ ಕೇವಲ ಮುಸ್ಲಿಮರ ಸಮಸ್ಯೆಯಲ್ಲ, ಬದಲಾಗಿ ಇದು ರಾಷ್ಟ್ರದ ಸಮಸ್ಯೆ. ಈ ಕಳಂಕವನ್ನು, ಅಪವಾದವನ್ನು ಸರ್ಕಾರ ಮುಂದಿನ ದಿನಗಳಲ್ಲಿ ಸರಿಪಡಿಸಬೇಕಿದೆ.

ದಲಿತ, ಮುಸ್ಲಿಂ ಹಾಗೂ ಸಮಸ್ತ ಅಲ್ಪಸಂಖ್ಯಾತ ಸಮುದಾಯಗಳ, ಶ್ರಮಿಕರ ವಿರೋಧಿ ಶಕ್ತಿಗಳೇ ಬಂಡವಾಳಶಾಹಿ, ಲಾಭಕೋರ ವ್ಯಾಪಾರಿ ವರ್ಗವನ್ನು ಪ್ರತಿನಿಧಿಸುತ್ತಿದೆ. ಕೋಮುವಾದಿ ಪಕ್ಷಗಳು ಮಾಡಿರುವುದೂ ಇದನ್ನೇ. ಶ್ರಮಿಕ ವಿರೋಧಿ ಧೋರಣೆಗಳೇ ಅದರದ್ದಾಗಿದೆ. ಫ್ಯಾಸಿಸ್ಟ್ ಶಕ್ತಿಗಳು ಮುಸ್ಲಿಮರ, ದಲಿತರ, ಜಾತ್ಯತೀತ ವರ್ಗದ, ಉದಾರವಾದಿಗಳ ಹಾಗೂ ನಿಜವಾದ ದೇಶಭಕ್ತರ ವಿರೋಧಿಯಾಗಿದೆ. ಕಟ್ಟರ್ ಹಿಂದೂಕರಣ ದ್ವೇಷಾರ್ಹವಾದಂತೆ, ಕಟ್ಟರ್ ಇಸ್ಲಾಮೀಕರಣವೂ ಇಲ್ಲಿ ದ್ವೇಷಾರ್ಹವಾಗಿದೆ. ಮುಸ್ಲಿಮರನ್ನು ದಾಳಿಕೋರರು, ಲೂಟಿಕೋರರು, ಮುಂಗೋಪಿಗಳು, ಬುದ್ಧಿಯಿಲ್ಲದವರು, ದುಡುಕು ಸ್ವಭಾವದವರು ಎಂದೆಲ್ಲ ಚಿತ್ರಿಸುತ್ತಿದೆ. ಅದಲ್ಲದೆ ಅವರು ಹೊರಗಿನಿಂದ ಬಂದವರು ನಮ್ಮವರಲ್ಲದವರು ಎಂದು ೮ ಶತಮಾನಗಳ ನಂತರವೂ ಹೇಳುವುದಿದೆಯಲ್ಲ ಅದು ಮಾನಸಿಕವಾಗಿ ತುಂಬಾ ಘಾಸಿಗೊಳಿಸುವಂತಹದು. ಮುಸ್ಲಿಮರ ಮೇಲೆ ಅನೇಕ ಆಪಾದನೆಗಳಿವೆ, ಅದರಲ್ಲಿ ಬಹುಪತ್ನಿತ್ವವೂ ಒಂದು. ಮುಸ್ಲಿಮರಲ್ಲಿ ಜನಸಂಖ್ಯಾ ಬೆಳವಣಿಗೆ ಹೆಚ್ಚಾಗಿದೆ; ಅವರು ನಾಲ್ಕು ಮಂದಿ ಹೆಂಡತಿಯರನ್ನು ಏಕಕಾಲದಲ್ಲಿ ಹೊಂದುವ ಅವಕಾಶವಿರುವುದರಿಂದ ಕೆಲವೇ ದಿನಗಳಲ್ಲಿ ಅವರು ಹಿಂದೂಗಳ ಜನಸಂಖ್ಯೆಯನ್ನು ಮೀರಿಸಿ ಬೆಳೆಯುತ್ತಾರೆ; ಭಾರತವನ್ನು ಮುಸ್ಲಿಂ ದೇಶವಾಗಿ ಮಾಡುತ್ತಾರೆಂಬುದು ಕೇಸರಿ ವಲಯದ ಅಂಬೋಣ. ಈ ಸುಳ್ಳನ್ನು ಕೋಮುವಾದಿಗಳು ಪ್ರಬಲವಾಗಿ ಮತ್ತು ವ್ಯಾಪಕವಾಗಿ ಪ್ರಚಾರ ಮಾಡುತ್ತಿದ್ದಾರೆ. ಆದರೆ ೧೯೭೧ರ ಸಮೀಕ್ಷೆಯ ಪ್ರಕಾರ ಹಿಂದುಗಳ ಸಂಖ್ಯೆ ಶೇ. ೮೨.೭ರಷ್ಟಿದ್ದರೆ, ಮುಸ್ಲಿಮರು ಶೇ. ೧೧.೨ರಷ್ಟಿದ್ದರು. ಅವರ ಪ್ರಮಾಣ ಕೆಳಗಿನಂತಿದೆ :

೧೯೭೧ ಹಿಂದುಗಳು ಶೇ. ೮೨.೭ ಮುಸ್ಲಿಮರುಶೇ. ೧೧.೨
೧೯೯೧ ಹಿಂದುಗಳು ಶೇ. ೮೨.೬ ಮುಸ್ಲಿಮರುಶೇ. ೧೧.೪
೨೦೦೧ ಹಿಂದುಗಳು ಶೇ. ೮೦.೫ ಮುಸ್ಲಿಮರುಶೇ. ೧೩.೪

ಈ ವ್ಯತ್ಯಾಸವೂ ಸಹ ಹಿಂದಿನ ಜನಗಣತಿಯಲ್ಲಿ ಆದಿವಾಸಿಗಳು ಮತ್ತು ಜೈನರನ್ನು ಹಿಂದೂ ಎಂದು ಪರಿಗಣಿಸಲಾಗುತ್ತಿತ್ತು. ಆದರೆ ಈ ಬಾರಿಯ ಜನಗಣತಿಯಲ್ಲಿ ಅವರನ್ನು ಪ್ರತ್ಯೇಕ ಸಮುದಾಯಗಳೆಂದು ಪರಿಗಣಿಸಿರುವುದರಿಂದ ಹಿಂದೂ ಅಡಿಯಲ್ಲಿ ಸಂಖ್ಯೆ ಕಡಿಮೆಯಾಗಿದೆ. ೧೯೬೧ರ ಜನಗಣತಿಯ ಪ್ರಕಾರ ಭಾರತದಲ್ಲಿ ಬಹುಪತ್ನಿತ್ವವನ್ನು ಆಚರಿಸುತ್ತಿರುವವರ ಶೇಕಡಾವಾರು ಲೆಕ್ಕ ಈ ಕೆಳಗಿನಂತಿದೆ.

| ಮುಸ್ಲಿಮರು | ಶೇ. ೫.೭ |
| --- | --- |
| ಹಿಂದುಗಳು | ಶೇ. ೫.೮ |
| ಆದಿವಾಸಿಗಳು | ಶೇ. ೧೫.೨೫ |
| ಜೈನರು | ಶೇ. ೬.೭೨ |
| ಬೌದ್ಧರು | ಶೇ. ೭.೯೭ |

ಈ ಪ್ರಕಾರ ಮುಸ್ಲಿಮರಲ್ಲಿ ಬಹುಪತ್ನಿತ್ವ ಕಡಿಮೆಯಿರುವುದು ಕಂಡುಬರುತ್ತದೆ. ಕೆಲವು ಸಿನಿಮಾ ನಟರು ತಮ್ಮ ಸ್ವಾರ್ಥಕ್ಕಾಗಿ ಇಸ್ಲಾಂ ಧರ್ಮಕ್ಕೆ ಪರಿವರ್ತನೆಗೊಂಡು ತಮ್ಮ ಪ್ರೇಯಸಿಯರೊಂದಿಗೆ ಮದುವೆಯಾಗುತ್ತಿದ್ದಾರೆ. ಇದು ಧರ್ಮವನ್ನು ದುರ್ಬಳಕೆ ಅಥವಾ ಅನುಕೂಲಸಿಂಧುವಾಗಿ ಬಳಸಿಕೊಳ್ಳುತ್ತಿರುವುದನ್ನು ತೋರಿಸುತ್ತದೆ. ೧೯೬೧ರಿಂದ ೧೯೮೧ರವರೆಗೆ ಹಿಂದುಗಳ ಜನಸಂಖ್ಯೆ ಪ್ರಮಾಣ ಶೇ. ೨೩.೭೧ರಿಂದ ಶೇ. ೨೪.೪೨ಕ್ಕೆ ಏರಿದರೆ ಅದೇ ಸಮಯದಲ್ಲಿ ಮುಸ್ಲಿಮರದು ಶೇ. ೩೦.೮೫ರಿಂದ ಶೇ. ೩೦.೨೦ಕ್ಕೆ ಇಳಿದಿದೆ. ಮುಸ್ಲಿಮರೂ ಜನನ ನಿಯಂತ್ರಣ ಯೋಜನೆಗಳನ್ನು ಅಳವಡಿಸುತ್ತಿದ್ದಾರೆ. ಟರ್ಕಿಯಲ್ಲಿ ಶೇ. ೬೩ಕ್ಕೂ ಹೆಚ್ಚು ಜನ ಜನನ ನಿಯಂತ್ರಿಸುತ್ತಿದ್ದಾರೆ. ಇಂಡೋನೇಷ್ಯಾದಲ್ಲಿ ಶೇ. ೪೮, ೧೯೭೦ರಲ್ಲಿ ಭಾರತದಲ್ಲಿ ಶೇ. ೯ರಷ್ಟಿದ್ದರು. ಹಿಂದುಗಳಲ್ಲಿ ಶೇ. ೧೪ರಷ್ಟಿತ್ತು. ಈ ಸಂಖ್ಯೆ ಕುಟುಂಬ ಯೋಜನೆ ಅಳವಡಿಸಿಕೊಳ್ಳುವ ಹಿಂದು ಮತ್ತು ಮುಸ್ಲಿಮರ ಸಂಖ್ಯೆ ಇಂತಿದೆ (ಆಪರೇಶನಲ್ ರಿಸರ್ಚ್ ಗ್ರೂಪ್ ಬರೋಡ ೧೯೮೧ರ ವರದಿ) :

| **ವರ್ಷ** | **ಹಿಂದು** | **ಮುಸ್ಲಿಂ** |
| --- | --- | --- |
| ೧೯೭೦ | ಶೇ. ೧೪ | ಶೇ. ೯ |
| ೧೯೮೦ | ಶೇ. ೩೬.೧ | ಶೇ. ೨೨.೫ |

ಎರಡೂ ಸಮುದಾಯಗಳಲ್ಲಿ ಸಂತಾನಹರಣ ಯೋಜನೆ ಪಾಲಿಸುವವರ ಸಂಖ್ಯೆ ಹೆಚ್ಚಾಗುತ್ತಿದೆ. ಇದು ಅವರ ಆರ್ಥಿಕ ಮತ್ತು ಶೈಕ್ಷಣಿಕ ಮಟ್ಟವನ್ನವಲಂಬಿಸಿರುತ್ತದೆ. ಮುಸ್ಲಿಂ ಮಹಿಳೆ ಬುರ್ಖಾ ಧರಿಸುವುದನ್ನೂ ಆಕ್ಷೇಪಿಸಲಾಗುತ್ತದೆ. ವಸ್ತ್ರಗಳನ್ನು ಧರಿಸುವ ವಿಷಯ ವೈಯಕ್ತಿಕವಾದುದು. ನಾನು ಸೀರೆ ಉಡುತ್ತೇನೆ, ಇದು ನನ್ನ ಆಯ್ಕೆ. ನನ್ನ ಮಗಳು ಪ್ಯಾಂಟು ಶರ್ಟು ಧರಿಸುತ್ತಾಳೆ, ಇದು ಅವಳ ಆಯ್ಕೆ. ಇನ್ನೊಬ್ಬ ಮಗಳು ಪಂಜಾಬಿ ಡ್ರೆಸ್ ಧರಿಸುತ್ತಾಳೆ, ಅದು ಅವಳ ಆಯ್ಕೆ. ಯಾರೇ ಆಗಲಿ, ಯಾರಿಗೇ ಆಗಲಿ, ವೇಷಭೂಷಣ ಕುರಿತು ಒತ್ತಡ ಹೇರುವುದು ತರವಲ್ಲ. ಅದು ಅವರವರ ಆಯ್ಕೆಯ ಪ್ರಶ್ನೆಯಾಗಿದೆ.

ಹಿಂದಿನಿಂದಲೂ ಮುಸ್ಲಿಮರೆಂದರೆ ಪರಕೀಯರು ಎಂಬ ಭಾವವನ್ನು ಬಿಂಬಿಸಲಾಗಿದೆ. ಆರ್ಯರ ಪ್ರವೇಶದೊಂದಿಗೇ ಭಾರತದಲ್ಲಿ ಸಂಘರ್ಷದೊಂದಿಗೆ



ಸಾಮರಸ್ಯವೂ ನೆಲೆಯೂರಿತ್ತು. ಹಿಂದೂ ಮುಸ್ಲಿಮರ ಹೊಂದಾಣಿಕೆಯ ಕಾರಣದಿಂದಲೇ ಭಕ್ತಿಪಂಥ ಮತ್ತು ಸೂಫೀ ಪಂಥಗಳು ಹುಟ್ಟಿಕೊಂಡವು. ಸೂಫೀ, ಭಕ್ತಿಪಂಥಗಳೆರಡೂ ತಳಸಮುದಾಯದ ವರ್ಗವನ್ನು ಆಕರ್ಷಿಸಿದ್ದವು. ದೇಶವಿಭಜನೆಯ ನಂತರ ಅಧಿಕಾರಶಾಹಿಗಳು, ವರ್ತಕರು ಮತ್ತು ಮುಸ್ಲಿಂ ಸಮುದಾಯದ ಗಣ್ಯರು, ಭೂಮಾಲೀಕರು ಪಾಕಿಸ್ತಾನಕ್ಕೆ ತೆರಳಿದರು. ಭಾರತದಲ್ಲಿ ಉಳಿದವರಲ್ಲಿ ಬಹುಪಾಲು ಮುಸ್ಲಿಮರು ಬಡವರು, ಭೂಹೀನರು, ಚಿಕ್ಕ ಚಿಕ್ಕ ಸ್ವ ಉದ್ಯೋಗಿಗಳು. ತಳ್ಳುಬಂಡಿ, ತರಕಾರಿ, ಬೀಡಿ ಕೆಲಸಗಾರರು. ಭಾರತ ಬಿಟ್ಟು ಗಣ್ಯವರ್ಗವೆಲ್ಲ ಪಾಕಿಸ್ತಾನಕ್ಕೆ ಹೋಗುವಾಗ ಈ ಬಡ ವರ್ಗ ಮಾತ್ರ "ನಾವು ಬದುಕಿದ್ದು ಇಲ್ಲಿಯೇ. ಸಾಯುವುದೂ ಇಲ್ಲಿಯೇ. ಇದುವೇ ನಮ್ಮ ದೇಶ. ನಮಗೆ ಬೇರೆ ದೇಶವಿಲ್ಲ" ಎಂದು ಈ ನೆಲದ ಆರ್ಥಿಕತೆಗೆ ಕೊಡುಗೆಯಾಗಿ ಬಡ ಮುಸ್ಲಿಮರು ಉಳಿದುಕೊಂಡರು. ಆದರೆ ಕೋಮುವಾದಿಗಳು ಅವರನ್ನು ಪರಕೀಯರು ಎಂದು ಬಿಂಬಿಸುವುದು ಸರಿಯೇ ? ಈ ದೇಶ ಹಿಂದುಗಳಿಗೆ ಸೇರಿದ್ದು, ಮುಸ್ಲಿಮರು ದೇಶವನ್ನು ತೊರೆಯಬೇಕು ಇಲ್ಲವೆ ಹಿಂದುಗಳಿಗೆ ಅಡಿಯಾಳಾಗಿರಬೇಕೆಂದು ಹಿಂದೂ ಮಹಾಸಭಾದ ತೀರ್ಮಾನ ಎಷ್ಟರಮಟ್ಟಿಗೆ ಸೂಕ್ತವಾಗಿದೆ ? ಮುಸ್ಲಿಮರು ಪರಕೀಯರೆಂದು ದ್ವೇಷ, ಅಸೂಯೆ ಹುಟ್ಟುಹಾಕಲಾಯಿತು. ಉದಾಹರಣೆಗೆ ಹೇಳುವುದಾದರೆ ಇತ್ತೀಚೆಗೆ ಕರ್ನಾಟಕದಲ್ಲಿ ಬಿಜೆಪಿ ಸರ್ಕಾರ ಅಧಿಕಾರಕ್ಕೆ ಬಂದಾಗ (೨೦೦೮) ವಿಧಾನಸೌಧದಲ್ಲಿ ಹೋಮ, ಹವನ, ಪೂಜೆಗಳನ್ನು ನಡೆಸಿದರು. ಅದನ್ನು ಕಾಂಗ್ರೆಸ್ ನಾಯಕರು, ಕರ್ನಾಟಕದ ಮಾಜಿ ಮುಖ್ಯಮಂತ್ರಿ ಧರ್ಮಸಿಂಗ್‌ರವರು ವಿರೋಧಿಸಿ, "ಇದೆಲ್ಲಾ ಸಂವಿಧಾನ ವಿರೋಧಿ ಕೆಲಸ" ಎಂದು ಹೇಳಿದಾಗ ಬಿಜೆಪಿಯ ಸದಾನಂದ ಗೌಡರು, "ನಿಮಗಿದು ಇಷ್ಟವಿಲ್ಲವಾದರೆ, ದೇಶಬಿಟ್ಟು ಹೋಗಿ" ಎಂದು ಹೇಳಿದರು. ರಜಪೂತ ಅಲ್ಪ ಸಮುದಾಯಕ್ಕೆ ಸೇರಿದವರಾದ ಧರ್ಮಸಿಂಗ್‌ರಿಗೆ ಎಂತಹ ಧರ್ಮಸಂಕಟವಾಗಿರಲಿಕ್ಕಿಲ್ಲ ? ಒಂದು ರಾಜ್ಯದ ಮಾಜಿ ಮುಖ್ಯಮಂತ್ರಿಗಳಿಗೆ ಇಂತಹ ಸ್ಥಿತಿಯಿದ್ದರೆ ಮುಸಲ್ಮಾನರ ಸ್ಥಿತಿಯ ಬಗ್ಗೆ ನೀವೇ ಯೋಚಿಸಿ ನೋಡಿ – ಅವರು ಎಂತಹ ಇಕ್ಕಟ್ಟಿಗೆ ಸಿಲುಕಿದ್ದಾರೆಂದು. "ಮುಸ್ಲಿಮರಿಗೆ ಎರಡೇ ಸ್ಥಾನ. ಒಂದು, ಪಾಕಿಸ್ತಾನ – ಎರಡನೆಯದು ಖಬರಸ್ಥಾನ" ಎಂದು ಹೇಳುವ ಧಾರ್ಷ್ಟ್ಯಕ್ಕೆ ಏನೆಂದು ಕರೆಯಬೇಕು ? ರಾಷ್ಟ್ರಕ್ಕಾಗಿ ಹೋರಾಡಿದ, ಬ್ರಿಟಿಷರಿಗೆ ತಮ್ಮ ತಲೆದಂಡ ನೀಡಿದ ಬಹದ್ದೂರ ಷಾ ಜಫರ್, ಟಿಪ್ಪು ಸುಲ್ತಾನ್, ಹೈದರಾಲಿ, ಬೇಗಂ ಹಜರತ್ ಮಹಲ್ ಮತ್ತು ಸ್ವಾತಂತ್ರ್ಯ ಹೋರಾಟದಲ್ಲಿ ಅಸಂಖ್ಯಾತ ಮುಸ್ಲಿಮರು, ಸಿಖ್ಖರು ಹೋರಾಡಿ ಶಹೀದಾಗಿದ್ದಾರೆ. ಇವತ್ತಿಗೂ ದೆಹಲಿಯ ಇಂಡಿಯಾ ಗೇಟ್‌ನಲ್ಲಿ ಕೊರೆದಿರುವ ಹುತಾತ್ಮರ ಹೆಸರುಗಳನ್ನು ನೋಡಿದರೆ ಮೈ ನಡುಗುತ್ತದೆ. ಜಾತಿ, ಧರ್ಮ, ಭೇದವಿಲ್ಲದೆ ಅಸಂಖ್ಯಾತರು ಬಲಿಯಾಗಿದ್ದು, ಅಲ್ಲಿರುವ ಮುಸ್ಲಿಮರ ಹೆಸರುಗಳನ್ನು ನೋಡಿದರೆ ಯಾರೂ ಇಲ್ಲಿಯ ಮುಸ್ಲಿಮರನ್ನು ಪರಕೀಯರೆಂದು ಭಾವಿಸಲಾರರು. ಭಾರತದ ಮೊಘಲ್ ದೊರೆ ಬಹದ್ದೂರ ಷಾ ಜಫರ್ ಭಾರತವನ್ನು, ತನ್ನ ತಾಯ್ನೆಲವನ್ನು ವಿಪರೀತ ಪ್ರೀತಿಸುತ್ತಿದ್ದ. ರಂಗೂನಿನ ಜೈಲಿನಲ್ಲಿ ತನ್ನ ಅಂತಿಮ ಕ್ಷಣಗಳಲ್ಲೂ ಬ್ರಿಟಿಷರಲ್ಲಿ ಕೇಳುವುದೇನೆಂದರೆ ನನಗೆ ನನ್ನ ತಾಯ್ನೆಲದಲ್ಲಿ ಮಣ್ಣು ಮಾಡಲು ಅವಕಾಶ ಕೊಡಿ ಎಂದು ಕೇಳುತ್ತಾರೆ. ಬ್ರಿಟಿಷರು ಒಪ್ಪದಿದ್ದಾಗ, "ದೋ ಗಜ ಜಮೀನ್‌ಭಿ ನ ಮಿಲಿ ಕೂಯೇ ಯಾರ್ ಮೆ" ಎಂದು ನೊಂದುಕೊಳ್ಳುತ್ತಾರೆ. ಆದರೂ ಸರ್ ಇಕ್ಬಾಲರವರು "ಸಾರೆ ಜಹಾಂ ಸೆ ಅಚ್ಛಾ ಹಿಂದೂ ಸತಾನ್ ಹಮಾರಾ" ಎಂದು ಹೇಳುತ್ತಾರೆ.

ದೇಶದಾದ್ಯಂತ ಹಿಂದುತ್ವವಾದಿ ಶಕ್ತಿಗಳು ಮುಸ್ಲಿಂ ವಿರೋಧಿ ಭಾವ ಹುಟ್ಟುಹಾಕುತ್ತಿರುವುದು ರಾಷ್ಟ್ರದ ಪ್ರಗತಿಗೆ ಮಾರಕವಾಗಿದೆ. ಸೌಹಾರ್ದ ಬದುಕಿಗೆ ಕಿಚ್ಚು ಹಚ್ಚುವುದು ರಾಮ ಮೆಚ್ಚುವ ಕೆಲಸವಲ್ಲ. ಬಂಡವಾಳಿಗರ ಪರವಾದ ಈ ಶಕ್ತಿಗಳೇ ಹಿಂದುಳಿದವರ, ಸಮಸ್ತ ಧಾರ್ಮಿಕ ಅಲ್ಪಸಂಖ್ಯಾತರ ಮತ್ತು ಬಡವರ, ಶ್ರಮಿಕರ ವಿರೋಧಿಯಾಗಿದ್ದಾರೆ. ಇಂತಹ ಸಂಕೀರ್ಣ ಸ್ಥಿತಿಯಲ್ಲಿ ಫ್ಯಾಸಿಸ್ಟ್ ಶಕ್ತಿಗಳ ಎಲ್ಲ ಧರ್ಮದ ಬಡವರ ವಿರೋಧಿಯಾಗಿದ್ದಾರೆ. ನಿಜವಾದ ದೇಶಭಕ್ತರ ವಿರೋಧಿಗಳಾಗಿದ್ದಾರೆ. ಕಟ್ಟರ್ ಹಿಂದೂಕರಣ ದ್ವೇಷಾರ್ಹವಾದಂತೆ ಕಟ್ಟರ್ ಇಸ್ಲಾಮೀಕರಣವೂ ದ್ವೇಷಾರ್ಹವಾಗಿದೆ.

ರಷ್ಯಾ ದೇಶ ಛಿದ್ರವಾದ ನಂತರ ಅಮೆರಿಕಾದ ಕುಟಿಲ ಕಾರಸ್ಥಾನಕ್ಕೆ ಸಿಲುಕಿ ಇಸ್ಲಾಂ ರಾಷ್ಟ್ರಗಳು ನಲುಗಿಹೋಗಿವೆ. ಓಸಾಮ ಬಿನ್ ಲಾಡೆನ್‌ನಂತಹ ಸಮಾಜಘಾತುಕ ಶಕ್ತಿಯನ್ನು ಪೋಷಿಸಿಕೊಂಡು ಬಂದ ಅಮೆರಿಕ ಅವನನ್ನು ಮುಸ್ಲಿಮರ ಪ್ರತಿನಿಧಿಯಾಗಿ ಬಿಂಬಿಸಿ ಮುಸ್ಲಿಂ ವಿರೋಧಿ ದೃಷ್ಟಿಕೋನ ಬಿತ್ತುವುದರೊಂದಿಗೆ ತನ್ನ ಶಸ್ತ್ರಾಸ್ತ್ರದ ಮಾರಾಟಕ್ಕೆ ಮಾರುಕಟ್ಟೆ ಪಡೆಯುತ್ತಿದೆ. ಮುಸ್ಲಿಮರನ್ನು ವಿಲನ್ ತರಹದಲ್ಲಿ ಬಿಂಬಿಸುತ್ತಿದೆ. ಜಾಗತೀಕರಣ, ಉದಾರೀಕರಣ, ಖಾಸಗೀಕರಣದ ನೆಲೆಯಲ್ಲಿ ಸಮುದಾಯಗಳ ಮುಂದೆ ಅವರ ಶತ್ರು ನೇರವಾಗಿ ನಿಲ್ಲುತ್ತಿಲ್ಲ. ಅದು ಒಪ್ಪಂದಗಳ ಜಾಲದಲ್ಲಿ ಬಂಧಿಯಾಗುತ್ತಿದೆ. ತನ್ನ ಶತ್ರುವನ್ನು ಗುರುತಿಸಲಾಗದ ಸ್ಥಿತಿಯಲ್ಲಿದ್ದಾರೆ. ಇಂತಹ ಸಂಕೀರ್ಣ ಸ್ಥಿತಿಯಲ್ಲಿ ಮುಸ್ಲಿಮರ ಮೇಲೆ ಗೂಬೆ ಕೂರಿಸುತ್ತಿದ್ದಾರೆ.

ಒಬ್ಬ ಮುಸ್ಲಿಮನಿಗೆ ತನ್ನ ದೇಶಭಕ್ತಿಯನ್ನು ಸಾಬೀತುಪಡಿಸುವ ರ್‍ಯಾಗಿಂಗ್ ಮಾದರಿಯ ಹಿಂಸೆ ಅನುಭವಿಸುತ್ತಿದ್ದಾರೆ. ಬೇರೆ ದೇಶಗಳೇ ಗೊತ್ತಿಲ್ಲದ ಮುಗ್ಧರಿಗೆ 'ದೇಶ ಬಿಟ್ಟು ಹೋಗು' ಎಂದು ಹೇಳುವ ಮೂಲಕ ಅವನಿಗೆ ಅಪಮಾನಿಸ ಲಾಗುತ್ತಿದೆ. ಭಯದ, ಹಿಂಸೆಯ, ಸಂಶಯದ ದೃಷ್ಟಿಗಳು ಅವನನ್ನು ಪೀಡನೆಗೆ ತಳ್ಳಿವೆ. ಜೈಲುಗಳಲ್ಲಿ ಕೊಳೆಯುತ್ತಿರುವ ವಿಚಾರಣಾಧೀನ ಕೈದಿಗಳನ್ನು ಬಿಡುಗಡೆ ಮಾಡಿ ಗೌರವದ ಬದುಕು ನಡೆಸಲು ಅವರಿಗೆ ಸಾಧ್ಯವಾಗಬೇಕಾಗಿದೆ. ಪೀರಬಾಷಾ ರವರು ತಮ್ಮ ಕವನದಲ್ಲಿ "ಅಕ್ಕ ಸೀತಾ ನಿನ್ನಂತೆ ನಾನೂ ಶಂಕಿತ" ಎಂದು ಹೇಳಿದರೆ, ಆರೀಫಾ ರಾಜಾರವರು ದಾಡಿ ಬಿಟ್ಟಿದ್ದಕ್ಕಾಗಿ ಶಂಕಿತರಾಗುವ ಬಗ್ಗೆ ತಮ್ಮ ಕಾವ್ಯದಲ್ಲಿ ಹೇಳುತ್ತಾರೆ : ಶಂಕಿತರಾಗುವ ನೋವು ಎಂತಹ ಪೀಡಕವಾಗಿರುತ್ತದೆ ಎಂಬುದನ್ನು ಅನುಭವಿಸಿದವರಿಗೇ ಗೊತ್ತು. ಲೀಟರ್ ಸೀಮೆಎಣ್ಣೆಗಾಗಿ, ಎರಡು ಕೊಡ ನೀರಿಗಾಗಿ ಸರಿ ರಾತ್ರಿಯಲ್ಲಿ ಪಾಳಿ ಹಚ್ಚಿ ಬೀದಿಯಲ್ಲಿ ಮಲಗುವ ಬುರ್ಖಾಧಾರಿ ಹೆಣ್ಣಿನ ಬುರ್ಖಾ ಇರುಸು ಮುರುಸಾದರೆ ಹೇಗೆ ? ಅವಳು ರಾತ್ರಿ ಯಾವ ರಕ್ಷಣೆಯೂ ಇಲ್ಲದೆ ಬೀದಿಯಲ್ಲಿ ಬಿದ್ದಿರಬೇಕಾದರೆ ಅವಳ ಬದುಕು ಎಷ್ಟೊಂದು ಕ್ರೂರವಾಗಿರುವ ಕಡೆ ಅವರ ದೃಷ್ಟಿ ಏಕೆ ಹೋಗುವುದಿಲ್ಲ ?

ತಾರತಮ್ಯ ಸೃಷ್ಟಿಸಿರುವ ಮೇಲ್ಜಾತಿಯ ಸಂಸ್ಕೃತಿ ಎಂದಾದರೂ ಅವರನ್ನು ಪ್ರೀತಿಯಿಂದ ಹತ್ತಿರ ಕರೆದು ಮೈದಡವಿ ಮಾತಾಡಿದೆಯೆ ? ಅಲ್ಪಸಂಖ್ಯಾತರು ತನ್ನವರೇ ಎಂದು ಆಲಂಗಿಸಿಕೊಂಡಿದೆಯೇ ? ಎಂದು ನಾವು ನಮ್ಮ ಆತ್ಮಗಳನ್ನು ಕೇಳಬೇಕು. ಇನ್ನಾದರೂ ಅದಕ್ಕಾಗಿ ಒಂದು ಹೆಜ್ಜೆ ಮುಂದಿಡಬೇಕಾಗಿದೆ. ಒಗ್ಗಟ್ಟಿ ನಲ್ಲಿಯೇ ರಾಷ್ಟ್ರದ ಪ್ರಗತಿಯಿದೆ. ಸೌಹಾರ್ದತೆಯಿಂದ ಅಭಿವೃದ್ಧಿ ಸಾಧ್ಯವೆಂಬ ಸತ್ಯ ಅರಿಯಬೇಕಾಗಿದೆ.

ಇನ್ನು ಅಲ್ಪಸಂಖ್ಯಾತ ಮಹಿಳೆಯರು ವಿಚಿತ್ರ ಸಾಂಸ್ಕೃತಿಕ ಬಿಕ್ಕಟ್ಟುಗಳಲ್ಲಿ ನಲುಗುತ್ತಿದ್ದಾರೆ. ಒಂದು ಸಮುದಾಯ ಇನ್ನೊಂದು ಸಮುದಾಯವನ್ನು ಅವಮಾನಿಸಲು ಆ ಸಮುದಾಯದ ಮಹಿಳೆಯರ ಮೇಲೆ ಸೇಡು ತೀರಿಸಿಕೊಳ್ಳುವ ಪ್ರವೃತ್ತಿ ಜಾರಿಯಿದೆ. ಜಗತ್ತಿನ ಎಲ್ಲಾ ಧರ್ಮಗಳಲ್ಲಿ ಇಸ್ಲಾಂ ಧರ್ಮ ಬಹಳ ಪ್ರಗತಿಪರ ವಾದುದು. ಅದು ಮಹಿಳಾ ಪರ ಧರ್ಮ. ಇಸ್ಲಾಂ ಧರ್ಮ ಹೆಣ್ಣುಮಕ್ಕಳಿಗೆ ವಿಶ್ವದಲ್ಲಿಯೇ ಮೊದಲ ಬಾರಿಗೆ ಆಸ್ತಿಯ ಹಕ್ಕು ನೀಡಿದ ಧರ್ಮ. ಮಹಿಳೆಗೆ ಆಸ್ತಿ ಹಕ್ಕು, ವಿಚ್ಛೇದನದ ಹಕ್ಕು (ಖುಲಾ) ಮರು ಮದುವೆಗೆ ಅವಕಾಶ, ಶಿಕ್ಷಣದ ಸಮಾನ ಅವಕಾಶ ನೀಡಿದ ಧರ್ಮ. ಇಂದು ಮುಸ್ಲಿಂ ಮಹಿಳೆಯೆಂದರೆ ಬುರ್ಖಾದೊಳಗಿರುವ ಒಂದು ಮೂಟೆ ಎಂಬ ಭಾವ ಅಂದು ಖಂಡಿತಾ ಇರಲಿಲ್ಲ. ಮಸೀದಿಗಳ



ಮುಂದೆ ಕುಳಿತು ಕೆಂಡಕ್ಕೆ ಗಾಳಿ ಹಾಕುತ್ತಾ ಇದ್ದಿಲ ಮೇಲೆ ಮೆಕ್ಕೆಜೋಳದ ತೆನೆ ಸುಟ್ಟು ಮಾರುವ ಬಣ್ಣಗೆಟ್ಟ ತೇಪೆ ಹಚ್ಚಿದ ಬುರ್ಖಾದವಳ ಬದುಕು, ಬುರ್ಖಾ ತೊಟ್ಟುಕೊಂಡೇ ಹೊಲದ ಮತ್ತು ಕೂಲಿಯ ಕೆಲಸ ಮಾಡುವ, ರೇಶನ್‌ಗಾಗಿ, ನೀರಿಗಾಗಿ, ಸೀಮೆಎಣ್ಣೆಗಾಗಿ ದಿನಗಟ್ಟಲೆ ಕ್ಯೂನಲ್ಲಿ ನಿಲ್ಲುವ ಆ ಹೆಣ್ಣುಗಳ ಬವಣೆಯನ್ನು ಗಮನಿಸಬೇಕಿದೆ. ಇಸ್ಲಾಮಿನ ಕುರಿತು ವಿಶ್ವದಾದ್ಯಂತ ತಪ್ಪು ಗ್ರಹಿಕೆಗಳಿವೆ. ಭಾರತದಾದ್ಯಂತ ೨೦ ಕೋಟಿಯಷ್ಟಿರುವ ಈ ಜನಸಮುದಾಯ "ಅಲ್ಪಸಂಖ್ಯಾತ" ಶಿರೋನಾಮೆಯಡಿ ನರಳಬೇಕಾದ ದುರಂತ ನಮ್ಮ ಕಣ್ಣ ಮುಂದಿದೆ. ಮುಸ್ಲಿಮರಲ್ಲಿ ಅನಾಥಪ್ರಜ್ಞೆ, ಅಭದ್ರತೆಯನ್ನು ಬಿಂಬಿಸಿದವರು ಯಾರು ? ಅಲ್ಪಸಂಖ್ಯಾತ ಇತರೇ ಜಾತಿಯವರನ್ನು ಬಿಟ್ಟು ಮುಸ್ಲಿಮರನ್ನೇ ಏಕೆ ಪ್ರತ್ಯೇಕ ಮಾಡಲಾಗುತ್ತಿದೆ ? ಇದರ ಒಳಮರ್ಮವನ್ನು ಬಯಲು ಮಾಡದೇ ಹೋದರೆ, ಅದು ಅಪಾಯಕಾರಿ ಹಂತ ತಲುಪಬಹುದು. ಆತಂಕ, ತಲ್ಲಣ, ಪರಕೀಯ, ಅಭದ್ರತೆಯ ಸಂಕಟಗಳು ಪೀಡಿಸಬಹುದು. ಒಬ್ಬ ಮಗ ಉಗ್ರಗಾಮಿ ಯಾದರೆ, ಅವನ ತಾಯಿ, ತಂಗಿ, ಮಗಳು, ಹೆಂಡತಿ ಎಲ್ಲರೂ ಆ ಅಭಿಶಾಪದಡಿ ನರಳಬೇಕಾಗುತ್ತದೆ. ಇಂತಹ ಸಂಕಟದ ಸ್ಥಿತಿಗಳು ನಿರ್ಮಾಣವಾಗುತ್ತವೆ. ಪ್ರತಿ ಸಮುದಾಯವೂ ತನ್ನ ಒಳಗಿನ ಮತ್ತು ಹೊರಗಿನ ಸಾಂಸ್ಕೃತಿಕ ಬಿಕ್ಕಟ್ಟುಗಳಲ್ಲಿ ನಲುಗುತ್ತಿದೆ. ಒಳಗಿನ ದುಷ್ಟರೊಂದಿಗೆ ಹೋರಾಡಿದಂತೆ ಹೊರಗಿನ ದುಷ್ಟತನವನ್ನು ವಿರೋಧಿಸಬೇಕಾಗುತ್ತದೆ. ಮುಸ್ಲಿಂ ಸಮುದಾಯದಲ್ಲಿಯೂ ಅತ್ಯಂತ ಕಡುಬಡವರಿರುವಂತೆ ಶ್ರೀಮಂತರೂ ಇದ್ದಾರೆ. ಅಧಿಕಾರದ ವಲಯವನ್ನು ಆವರಿಸಿರುವ ಈ ಮುಸ್ಲಿಂ ಶ್ರೀಮಂತರು ರಾಜಕಾರಣಿಗಳನ್ನು ಓಲೈಸುತ್ತಾ ರಾಜಕೀಯದ ಚೂರುಪಾರು ಲಾಭ ಪಡೆಯುತ್ತಿದ್ದಾರೆ. ಚುನಾವಣಾ ಸಮಯದಲ್ಲಿ ದುಡ್ಡು ಕೊಟ್ಟರೆ ಬೇಕಿದ್ದರೆ ಬಿ.ಜೆ.ಪಿ. ಕಛೇರಿಯನ್ನೂ ಸ್ಥಾಪಿಸಿ ನಿರ್ವಹಿಸುತ್ತಾರೆ. ಬೇಕಿದ್ದರೆ ಮೋದಿಯನ್ನು ಇಫ್ತಾರ್ ಕೂಟಕ್ಕೆ ಆಹ್ವಾನಿಸಿ ಇಫ್ತಾರ್ ಕೂಟ ಮಾಡಲೂ ಹೇಸಲಾರರು. ಇಂಥವರು ತನ್ನವರ ಕುರಿತು ಕನಿಷ್ಠ ಜವಾಬ್ದಾರಿಯನ್ನೂ ಹೊರಲಾರದವರಾಗಿರುತ್ತಾರೆ. ಇದು ಮುಸ್ಲಿಂ ಶ್ರೀಮಂತರ ಸ್ಥಿತಿಯಾದರೆ, ಬಡವರು ಮೇಲ್ವರ್ಗದವರ ಧರ್ಮ ರಾಜಕಾರಣದಲ್ಲಿ ನಲುಗಿ ಹೋಗಿದ್ದಾರೆ. ತನ್ನ ಶತ್ರು ಯಾರು ? ಎಂಬುದರ ಬಗ್ಗೆ ಅರಿಯದ ಮುಗ್ಧರಾಗಿದ್ದಾರೆ. ಹಿಂದು ಮುಸ್ಲಿಮರ, ಮೂಲಭೂತವಾದಿಗಳ ಕೋಮುವಾದೀ ಅಜೆಂಡಾಗಳಿಗೆ ಮುಸ್ಲಿಂ ಮಹಿಳೆ ಬಲಿಯಾಗುತ್ತಿದ್ದಾಳೆ. ಒಂದು ಕಡೆ ಮುಸ್ಲಿಂ ಶ್ರಮಿಕ ಸಮುದಾಯ ಉಳ್ಳವರ, ಧರ್ಮದ ಮತ್ತು ರಾಜಕೀಯ ಹುನ್ನಾರಗಳಿಗೆ ಕೈದಾಳವಾಗಿ ನಲುಗಿದ್ದಾರೆ. ಮತ್ತೊಂದು ಕಡೆ ಈ ಧರ್ಮದ ಮಹಿಳೆಯರು ಶಿಕ್ಷಣಕ್ಕಾಗಿ, ಸ್ವಾತಂತ್ರ್ಯಕ್ಕಾಗಿ, ಮನೆಯಿಂದ ಹೊರಬರಲೂ ಸಹ ಮನೆಯೊಳಗಿನವರೊಂದಿಗೆ ಹೋರಾಡಬೇಕಿದೆ. ಹೊರಗೆ ಬಂದಾಗ ಮೂಲಭೂತವಾದಿಗಳ ಕಾಕದೃಷ್ಟಿಗೆ ಸಿಲುಕಿ ನಲುಗುತ್ತಾಳೆ. ಮುಸ್ಲಿಮೇತರರು ತಮ್ಮ ಸೇಡು ತೀರಿಸಿಕೊಳ್ಳಲು ಅವಳನ್ನೇ ದಾಳವಾಗಿ ಉಪಯೋಗಿಸುತ್ತಿರುವುದು ದುರಂತವಾಗಿದೆ. ಆದರೂ ಅವಳ ಧಾರಣ ಶಕ್ತಿ ಅಸಾಧಾರಣವಾಗಿದೆ. ಎಲ್ಲವನ್ನೂ ಮೀರಿ ಕಟ್ಟುವ ಕರ್ತೃತ್ವ ಶಕ್ತಿ ಅವಳಲ್ಲಿದೆ. ಹದಿನಾಲ್ಕು ವರ್ಷದ ಮಲಾಲಾ ಇಂದು ವಿಶ್ವಸಂಸ್ಥೆಯ ೧೨೦ ರಾಷ್ಟ್ರಗಳ ಪ್ರತಿನಿಧಿಗಳ ಮುಂದೆ ಮಾತಾಡುತ್ತಾಳೆಂದರೆ ? ತನ್ನದಲ್ಲದ ತಪ್ಪಿಗೆ ಸಮಾಜದವರಿಂದ ಬಲಾತ್ಕರಿಸಲ್ಪಟ್ಟರೂ ಶಿಕ್ಷಕಿಯಾಗಿಯೇ ಕೆಲಸ ಮಾಡುತ್ತಿರುವ ಮುಖ್ತರನ್ ಮಾಯಿ, ಉನ್ನತ ಹುದ್ದೆ ಅಲಂಕರಿಸಿದರೂ ಸಮಾಜದ ಗಂಡಸರ ಅಹಂಗೆ ಬಲಿಯಾದರೂ ವಿಶ್ವಶಾಂತಿ ಪುರಸ್ಕಾರ ಪಡೆದ ಇರಾನಿನ ಶಿರೀನ್ ಇಬಾದಿ, ಪಾಕಿಸ್ತಾನದಲ್ಲಿ ರಾಜಕೀಯ ನಡೆಸಿದ ಬೆನಜೀರ್ ಭುಟ್ಟೋ, ತಾಲಿಬಾನಿನ ಗುಂಡಿಗೆ ಬಲಿಯಾದರೂ ಸಾವು ಎದುರು ನಿಂತರೂ ಹೆದರದೆ ರಾಜಕೀಯಕ್ಕಿಳಿದ ಬೆನಜೀರ್‌ರಂತಹ ಎಂಟೆದೆಯ ಮಹಿಳೆಯರಿದ್ದಾರೆ. ಬೆನ್ನಿಗೆ ಕೂಸು ಕಟ್ಟಿಕೊಂಡು ಕೈಯಲ್ಲಿ ಗನ್ನು ಹಿಡಿಯುವ ಅಫ್ಘನ್ನಿನ ಮಹಿಳೆ ಸದಾ ಸಾವು ಬದುಕಿನೊಂದಿಗೆ ಹೋರಾಡುತ್ತಿರುತ್ತಾಳೆ. ಇಂತಹ ಧಾರಣಶಕ್ತಿ ಆ ಮಹಿಳೆಗಿದೆ. ಇದಕ್ಕೆ ಪ್ರೋತ್ಸಾಹ ದೊರೆತು ಅವಳು ಮುಂದುವರಿದರೆ ಎಲ್ಲಿ ತನ್ನ ಅಂಕೆ ತಪ್ಪಿಹೋದರೆ ? ಎಂಬ ಭಯ ಆ ಧರ್ಮದ ಪುರುಷನಿಗೂ ಕಾಡಿದೆ. ಮಾನಸಿಕವಾಗಿ ದೈಹಿಕ ಶಕ್ತಿಯಲ್ಲಿ ಮುಸ್ಲಿಂ ಮಹಿಳೆ ಸದೃಢವಾಗಿರುವುದರಿಂದಲೇ ಆ ಜನಾಂಗದಲ್ಲಿ ಆತ್ಮಹತ್ಯೆಗಳು ಬಹಳ ಕಡಿಮೆ ಪ್ರಮಾಣದಲ್ಲಿವೆ. ದಮನವೂ ಹೆಚ್ಚು, ಮನೋಬಲವೂ ಹೆಚ್ಚಿದೆ. ದಮನ ಹೆಚ್ಚಿರುವಲ್ಲಿ ಸೃಜನಶೀಲ ಸಾಧ್ಯತೆಗಳೂ ಬಹಳಷ್ಟಿರುತ್ತವೆ.



ಭಾರತದಲ್ಲಿ ಸ್ವಾತಂತ್ರ್ಯದ ನಂತರದ ದಿನಗಳಲ್ಲಿ ರಾಜಕೀಯದಲ್ಲಿ ಅಲ್ಪಸಂಖ್ಯಾತರ ಪ್ರಾತಿನಿಧ್ಯ ಬಹಳ ಕಡಿಮೆಯಾಗಿದೆ. ಮುಸ್ಲಿಂ ಮಹಿಳಾ ಪ್ರಾತಿನಿಧ್ಯ ಮತ್ತೂ ಕಡಿಮೆಯಾಗಿದೆ. ಇಲ್ಲವೇ ಇಲ್ಲವೆನ್ನುವಷ್ಟು ಗೌಣವಾಗಿದೆ. ಕರ್ನಾಟಕ ವಿಧಾನಸಭೆಗೆ ಆಯ್ಕೆಯಾದ ಆರು ಜನ ಮಹಿಳೆಯರಲ್ಲಿ ಒಬ್ಬ ಮುಸ್ಲಿಂ ಮಹಿಳೆಯೂ ಇಲ್ಲ. ಧರ್ಮ ರಾಜಕಾರಣದೊಂದಿಗೆ, ಲಿಂಗರಾಜಕಾರಣವೂ ಅವಳನ್ನು ಹಿಂದಕ್ಕಿಟ್ಟಿದೆ. ಪುರುಷರ ಭದ್ರಕೋಟೆಗಳೆಂದು ಪರಿಭಾವಿಸಲಾದ ರಾಜಕಾರಣಕ್ಕೆ ಮುಸ್ಲಿಮೇತರ ಮಹಿಳೆಯರು ಕಾಲಿಡುವುದೇ ಕಷ್ಟವಾಗಿರುವಾಗ ಮುಸ್ಲಿಂ ಮಹಿಳೆಗೆ ಅದು ಇನ್ನೂ ದುಸ್ತರವಾಗುತ್ತಿದೆ.

ಇಂತಹ ಸಾಂಸ್ಕೃತಿಕ, ರಾಜಕೀಯ ಬಿಕ್ಕಟ್ಟುಗಳ ಮಧ್ಯೆ ಸಿಲುಕಿರುವ ಅಲ್ಪಸಂಖ್ಯಾತರನ್ನು ಮುಖ್ಯವಾಹಿನಿಗೆ ತರುವುದು ಹೇಗೆ ? ಮೀಸಲಾತಿಯನ್ನು ಉದ್ಯೋಗ, ಶಿಕ್ಷಣದಲ್ಲಿ ನೀಡಿದರೆ ಸಾಕೆ ? ಸಾಚಾರ್ ವರದಿಯ ೭೬ ಶಿಫಾರಸ್ಸು ಗಳಲ್ಲಿ ಭಾರತ ಸರ್ಕಾರ ೭೨ ಶಿಫಾರಸ್ಸುಗಳಿಗೆ ಒಪ್ಪಿಗೆ ನೀಡಿದೆ. ಜನಸಮುದಾಯ ಗಳನ್ನು ಮುಖ್ಯವಾಹಿನಿಗೆ ತರಲು ಕಾರ್ಯತಂತ್ರ ರೂಪಿಸಬೇಕಿದೆ. ವಿಶೇಷ ಪ್ಯಾಕೇಜ್ ಬಿಡುಗಡೆ ಮಾಡುವುದರೊಂದಿಗೆ ಅದನ್ನು ಜಾರಿಗೊಳಿಸುವ ಇಚ್ಛಾಶಕ್ತಿಯೂ ಸರ್ಕಾರಕ್ಕೆ ಇರಬೇಕಾದುದು ಅವಶ್ಯ. ಅಲ್ಪಸಂಖ್ಯಾತರ ಮಾನವ ಹಕ್ಕುಗಳ ದಮನವಾಗುತ್ತಿದೆ. ಗುಜರಾತಿನ ಗಲಭೆಗಳಲ್ಲಿ ನೊಂದವರಿಗೆ ಮೊಕದ್ದಮೆ ಹೂಡದಂತೆ, ಮೊಕದ್ದಮೆ ಹೂಡಿದರೆ ಹಿಂಪಡೆಯುವಂತೆ ಒತ್ತಡ ತರಲಾಗುತ್ತಿತ್ತು. ಸಾಕ್ಷಿಗಳನ್ನು ತಿರುಚಿದ್ದಾರೆ. ವಿವಿಧ ಬಗೆಯ ಬೆದರಿಕೆಗಳಿಂದ ನೊಂದವರ ಬಾಯಿ ಮುಚ್ಚಿಸಲಾಗಿದೆ. ಸಾಕ್ಷ್ಯಗಳನ್ನು ನಾಶಪಡಿಸಲಾಗುತ್ತಿದೆ. ಝಾಹೀರಾ ಶೇಖ್ ಪ್ರಕರಣ ಮುಚ್ಚಿಹಾಕಿರುವುದನ್ನು ಪುನಃ ಆರಂಭಿಸುವಂತೆ ಸರ್ವೋಚ್ಚ ನ್ಯಾಯಾಲಯ ಆದೇಶ ನೀಡಿದೆ. ಝಾಹೀರಾ ಶೇಖ್ (ಫ್ರಂಟ್ ಲೈನ್, ಆಗಸ್ಟ್ ೨೦೦೩)ರವರು ಪತ್ರಿಕಾ ಸಂದರ್ಶನದಲ್ಲಿ ಹೇಳುತ್ತಾರೆ : "ನನ್ನ ಮನೆಗೆ ಸಮನ್ಸ್ ಬಂದಾಗ ನಾನು ತೀವ್ರ ಒತ್ತಡಕ್ಕೊಳಗಾಗಿದ್ದೆ. ನನ್ನ ಸರ್ಕಾರಿ ನ್ಯಾಯವಾದಿಗಳು ಯಾರೆಂಬುದೂ ನನಗೆ ತಿಳಿದಿರಲಿಲ್ಲ. ಇನ್ನೊಂದೆಡೆ, ನನಗೆ ಕೊಲೆ ಬೆದರಿಕೆಗಳು ಬರುತ್ತಿದ್ದವು. ನ್ಯಾಯಾಲಯಕ್ಕೆ ಹೋಗಬೇಡ, ನಿನ್ನ ಕುಟುಂಬವನ್ನು ಕೊಂದುಹಾಕುತ್ತೇವೆ – ಎಂದು ಅವರು ಬೆದರಿಸುತ್ತಿದ್ದರು. ಒಂದು ವೇಳೆ ನೀನು ನ್ಯಾಯಾಲಯಕ್ಕೆ ಹೋದರೂ ನಮ್ಮ ಪರವಾಗಿಯೇ ಮಾತನಾಡು ಎಂದು ಹೇಳುತ್ತಿದ್ದರು. ಅಪರಾಧಿಗಳನ್ನು ಗುರುತಿಸಬೇಡ, ಹಾಗೇನಾದರೂ ಗುರುತಿಸಿದಲ್ಲಿ ನಿನ್ನ ಇಡೀ ಸಂಸಾರ ನಿರ್ನಾಮವಾಗುತ್ತದೆ ಎಂದು ಹೆದರಿಸು ತ್ತಿದ್ದರು." ಅಂದಾಗ ಮುಸ್ಲಿಮರು ಎಂತಹ ಭಯದ ವಾತಾವರಣದಲ್ಲಿ ಬದುಕುತ್ತಿದ್ದಾರೆ, ಮಹಿಳೆಯರು ಅನ್ಯಾಯದ ವಿರುದ್ಧ ಧ್ವನಿಯೆತ್ತಲಾರದ, ಎತ್ತಿದರೆ ಬದುಕು ದಕ್ಕಲಾರದ ಸ್ಥಿತಿಯಲ್ಲಿದ್ದಾರೆ ಎಂಬುದು ತಿಳಿಯುತ್ತದೆ.

ಈ ಭೂಮಿ ಮೇಲೆ ಬದುಕುವ ಎಲ್ಲರಿಗೂ ಬದುಕು ಸಹ್ಯವಾಗಬೇಕು. ಯಾವುದೇ ದೇಶದ ಅಲ್ಪಸಂಖ್ಯಾತರಿಗೆ ಇಂತಹ ದುಸ್ಥಿತಿ ಬಾರದಿರಲಿ, ಕೂಡಿ ಬಾಳಿದ ಸಂಸ್ಕೃತಿಗೆ ಸಾವಿರಾರು ವರ್ಷಗಳ ಇತಿಹಾಸವಿದೆ. ಕೋಮುವಾದಿ ಸಂಸ್ಕೃತಿ ನಮ್ಮದಲ್ಲದ ಸಂಸ್ಕೃತಿಯಾಗಿದೆ.

**ಡಾ॥ ಕೆ. ಷರೀಫಾ**

೫ಎ, ೧ನೇ ಮಹಡಿ, ೧ನೇ ಬ್ಲಾಕ್, ೪ನೇ ತಿರುವು, ಆರ್. ಟಿ. ನಗರ,

ಬ್ಯಾಂಕ್ ಆಫ್ ಇಂಡಿಯಾ ಎದುರು, ಬೆಂಗಳೂರು – ೫೬೦ ೦೩೨




# ಕಲೆಯ ಉಗಮ ಮತ್ತು ಇತಿಹಾಸ

ಬಳಕೂರು ವಿ. ಎಸ್. ನಾಯಕ

**ಕ**ಲೆಗೆ ನಿಲುಕದ ವಸ್ತುವಿಲ್ಲ, ಕಲಾವಿದ ತನ್ನ ಕುಂಚದಿಂದ ಎಲ್ಲರನ್ನು ನಿಬ್ಬೆರಗಾಗಿಸುವ ರೀತಿಯಲ್ಲಿ ಕಲೆಗೆ ಸ್ಪರ್ಶ ನೀಡುವ ಮಾಂತ್ರಿಕ. ಕವಿಯು ತನ್ನ ಅಂತಃಚಕ್ಷುವಿನಿಂದ ನೋಡಿದ ವಸ್ತುವನ್ನು ಕಾವ್ಯವನ್ನಾಗಿಸಿದರೆ ಕಲಾಕಾರನು ಯಾರ ಊಹೆಗೂ ನಿಲುಕದ ಚಿತ್ರವನ್ನು ಹೃದಯಾಂತರಾಳದಲ್ಲಿ ಸಾಕ್ಷಾತ್ಕರಿಸಿಕೊಂಡು ಚಿತ್ರಿಸುತ್ತಾನೆ. ಕಲಾವಿದನ ಕುಂಚದಿಂದ ಹೊರಳಿ, ಅರಳಿ ನಿಂತ ಚಿತ್ರಗಳೆಷ್ಟೋ ? ಎಣಿಸಲಾರದಷ್ಟು ಕೂಡಲಾರದಷ್ಟಿವೆ. ಕಲಾಕಾರ ತನ್ನ ಬಹಳ ವರ್ಷಗಳ ಸಾಧನೆಯಿಂದ ಅನಾವರಣಗೊಳಿಸಿದ ಕಲೆಯೇ ಅತ್ಯದ್ಭುತ. ಕಲೆಯನ್ನು ಉಸಿರಾಗಿಸಿ ಕೊಂಡವರೆಷ್ಟೋ ? ಕಲಾಪ್ರಪಂಚಕ್ಕೆ ಕೊಡುಗೆ ನೀಡಿದ ದಾನಿಗಳೆಷ್ಟೋ ?

ಕಲೆ ಎನ್ನುವುದು ಮಾನವನ ವೈಶಿಷ್ಟ್ಯ. ಅವನು ತನ್ನ ಸುತ್ತಮುತ್ತಲಿನ ಪರಿಸರ, ದೈನಂದಿನ ಜೀವನ, ಜನಸಾಮಾನ್ಯರ ಮೇಲೆ ಪ್ರಭಾವ ಬೀರುವಂತೆ ಮಾಡುತ್ತವೆ. ಈ ಎಲ್ಲಾ ವಿಚಾರಗಳು ತುಡಿತ, ಮಿಡಿತಗಳು ಅವನ ಮಾಧ್ಯಮದ ಮೂಲಕ ಪ್ರಕಟವಾಗಿ ಒಂದು ಉತ್ತಮವಾದ ಕಲಾಕೃತಿಯೆನಿಸಿಕೊಳ್ಳುತ್ತದೆ. ಹಲವಾರು ರೀತಿಯ ಕಲಾಕೃತಿಗಳು ಮಾನವನ ಇಂದ್ರಿಯಗಳಿಗೆ ಸಂಬಂಧಿಸಿದಂತೆ ಸಂತೋಷ ಕೊಡುತ್ತವೆ. ಹೀಗೆ ಮನುಷ್ಯ ಸಾಹಿತ್ಯವನ್ನು ಕಿವಿಯಿಂದ ಕೇಳಲು ಆರಂಭಿಸಿದಂತೆ ನಯನದಿಂದ ಗ್ರಹಿಸಿ ಸಂತಸಪಟ್ಟನು – ಮಾನವನು ಸಂಗೀತವನ್ನು ಆಲಿಸಿ ಆನಂದಪಟ್ಟಂತೆ. ಹಾಗೆ ಚಿತ್ರಕಲೆ, ಶಿಲ್ಪಕಲೆ ಇವೆಲ್ಲವನ್ನೂ ಕಣ್ಣಿನಿಂದ ಗ್ರಹಿಸಿ ಆನಂದಪಡಲು ಆರಂಭಿಸಿದನು.

ಪ್ರಾಚೀನ ಗ್ರೀಕ್ ಜನರ ಪ್ರಕಾರ ಮಾನವನಿಂದ ರಚಿತವಾದ ಯಾವುದೋ ಒಂದು ಕಲಾಕೃತಿಯು ಸುಂದರವಾಗಿ ಕಾಣಬೇಕಾದರೆ ಅದು ನಿಜವಾಗಿ ಆ ವಸ್ತುವಿನ ಪ್ರತಿರೂಪ ಹೊಂದಿರಬೇಕು ಎಂಬುದನ್ನು ಪಾಲಿಸಿಕೊಂಡು ಬಂದಿದ್ದರು. ಆದರೆ ಕಲೆ ಮಾತ್ರ ಹಾಗಲ್ಲ, ಕಲಾವಿದನು ತನ್ನ ಮನದಲ್ಲಿ ಚಿತ್ರ ಅಥವಾ ಶಿಲ್ಪ ಕಲ್ಪಿಸಿಕೊಂಡು ನಂತರ ಅವನ್ನು ಚಿತ್ರಿಸಿ ಅಥವಾ ಕೆತ್ತಿ ಸುಂದರ ರೂಪ ಕೊಡುವಲ್ಲಿ ಕಲಾಕಾರನ ಪಾತ್ರ ಪ್ರಶಂಸನೀಯ.

ಅರಿಸ್ಟಾಟಲ್ ಪ್ರಕಾರ ಮಾನವ ಯಾವಾಗಲೂ ನಿಸರ್ಗದ ಕೂಸು. ನಿಸರ್ಗ ಸೌಂದರ್ಯವನ್ನು ಪ್ರತಿಬಿಂಬಿಸಿಕೊಂಡು ಹಲವಾರು ರೀತಿ ಚಿತ್ರಗಳನ್ನು ರಚಿಸಲು ಆರಂಭಿಸಿದನು. ಇದು ಅವನ ಹುಟ್ಟುಗುಣ. ನಂತರ ಇದುವೇ ಚಿತ್ರಕಲೆಯಾಗಿ ಹೊರಹೊಮ್ಮಿದೆ ಎಂಬುದನ್ನು ತನ್ನ ಅರ್ಥಪೂರ್ಣ ಕಲ್ಪನೆಯನ್ನು ವಿವರಿಸುತ್ತಾನೆ.

ಕಲಾ ಇತಿಹಾಸವನ್ನು ಗಮನಿಸಿದರೆ ನಂತರದ ದಿನಗಳಲ್ಲಿ ಹಲವಾರು ಬದಲಾವಣೆಗಳಾಗಿವೆ ಎಂಬುದನ್ನು ನಾವು ತಿಳಿಯಬೇಕಾಗಿದೆ. ಆಧುನಿಕ ಕಲಾಕಾರರು ಚಿತ್ರಕಲೆ ಎನ್ನುವುದು ನಿಸರ್ಗದ ಪ್ರತಿರೂಪವಲ್ಲ. ಏಕೆಂದರೆ ಇಂದಿನ ಚಿತ್ರಕಲಾವಿದರು ನಿಸರ್ಗದ ಯಾವುದೇ ವಸ್ತುವನ್ನು ಇದ್ದಹಾಗೆ ಚಿತ್ರಿಸಲು ಬಯಸುವುದಿಲ್ಲ. ಆದರೆ ಅದರ ಬದಲಿಗೆ ಕಲಾವಿದ ತನಗೆ ಬೇಕಾದ ವಸ್ತುವಿನ ಆಯ್ಕೆ ಮಾಡಿಕೊಂಡು ಅದನ್ನು ಎಲ್ಲರೂ ಮೆಚ್ಚುವ ರೀತಿಯಲ್ಲಿ ಆಕರ್ಷಕವಾದ ರೀತಿಯಲ್ಲಿ ಚಿತ್ರಿಸಿ ಎಲ್ಲರ ಮನದ ಪರದೆಯ ಮೇಲೆ ಬಿಂಬಿತವಾಗುವ ರೀತಿಯಲ್ಲಿ, ಬಿಡಿಸಿದಾಗ ಎಂತಹವರಾದರೂ ಹುಬ್ಬೇರಿಸದೇ ಇರಲಾರರು.

**ಗುಹಾಲಯ ಚಿತ್ರಗಳು**

ಆದಿ ಮಾನವನು ಗುಹೆಗಳಲ್ಲಿ ವಾಸವಿರುತ್ತಿದ್ದನು. ಆಗಲೂ ಕೂಡ ಅವನಿಗೆ ಚಿತ್ರಕಲೆಯ ಬಗ್ಗೆ ಅರಿವು ಇತ್ತು. ಸುಮಾರು ಕ್ರಿ.ಪೂ. ೧೦,೦೦೦ದಿಂದ ಕ್ರಿ.ಶ. ಆರಂಭ ಕಾಲದವರೆಗೆ ಆದಿಮಾನವ ತಾನು ವಾಸವಾಗಿರುವ ಗುಹೆಗಳಲ್ಲಿ ಹಲವಾರು ರೀತಿಯ ಚಿತ್ರಗಳನ್ನು ರಚಿಸಿದನು. ಮಾನವನಿಗೆ ಬೇಟೆಯಾಡುವ ವೃತ್ತಿ ಪ್ರಧಾನವಾಗಿದ್ದರಿಂದ ಅವನ ಕಲ್ಪನೆಯಲ್ಲಿ ಬೇಟೆ ಪ್ರಾಣಿಗಳು, ಕುಣಿತದ ಭಂಗಿಗಳ ಚಿತ್ರಗಳು ಪ್ರಮುಖವಾದ ವಿಷಯಗಳಾಗಿ ಹೊರಹೊಮ್ಮಿದವು. ಚಿತ್ರ–ಚಿತ್ತಾರದ ಕಲ್ಪನೆಯು ಆಗಿನ ಕಾಲದಲ್ಲಿ ಆದಿ ಮಾನವನಿಂದ ಆರಂಭವಾಯಿತೆಂದರೆ ಆಶ್ಚರ್ಯಪಡಬೇಕಾಗಿಲ್ಲ.

ಮಧ್ಯಯುಗದಲ್ಲಿ ಕ್ರಿ.ಶ. ಆರಂಭದಿಂದ ನಂತರದ ದಿನಗಳಲ್ಲಿ ಚಿತ್ರಕಲೆಯು ಬಹಳ ಪ್ರಮುಖವಾದ ಪಾತ್ರವನ್ನು ವಹಿಸಿದ್ದನ್ನು ಗಮನಿಸಬಹುದು. ಆ ಕಾಲದಲ್ಲಿ ಧಾರ್ಮಿಕ ಪ್ರಧಾನವಾದ ಅಂಶಗಳೇ ಮುಖ್ಯವಾಗಿ ಕಂಡುಬಂದು ಆ ರೀತಿಯ ಚಿತ್ರಗಳು ಬಹಳ ಪ್ರಚಲಿತವಾದದ್ದನ್ನು ಗಮನಿಸಬಹುದು. ಆದರೆ ನಾವು ಗಮನಿಸ ಬೇಕಾದ ಮುಖ್ಯ ಅಂಶವೆಂದರೆ ಐರೋಪ್ಯ ದೇಶಗಳಲ್ಲಿ ಧಾರ್ಮಿಕವಾದ ವಿಷಯಗಳಿಗೆ ಅನುಸರಿಸಿದ ಹಲವಾರು ಚಿತ್ರಗಳು ಮೂಡಿಬಂದಿರುವುದನ್ನು ಗಮನಿಸಬಹುದಾಗಿದೆ. ಆದರೆ ಭಾರತದಲ್ಲಿ ಇಂದು ಬೌದ್ಧ, ಜೈನ, ಹಿಂದೂ ಧರ್ಮದ ದೇವತೆಗಳು, ಪುರಾಣ ಪುಣ್ಯಕಥೆಗಳಲ್ಲಿ ಪ್ರತಿಬಿಂಬಿತವಾದ ವಿಷಯಗಳು ಚಿತ್ರಗಳಾಗಿ ಮೂಡಿಬಂದಿವೆ. ಇವುಗಳಲ್ಲಿ ನಾವು ಕೆಲವೊಂದನ್ನು ಉದಾಹರಿಸಬಹುದು. ಗೊಮ್ಮಟೇಶ್ವರ, ತಂಜಾವೂರಿನ ಬೃಹತ್ ಈಶ್ವರ ದೇವಾಲಯಗಳು ಎಲ್ಲರ ಮನಸ್ಸಿನ ಪುಟಗಳ ಮೇಲೆ ದಾಖಲಾಗುವಂತೆ ಚಿತ್ರಿತವಾಗಿವೆ.

ಕೆಲವೊಂದು ಪ್ರಸಿದ್ಧ ಗುಹಾಂತರ ದೇವಾಲಯಗಳ ಬಗ್ಗೆ ಹೇಳಬೇಕೆಂದರೆ ಅಜಂತಾ ಗುಹಾಲಯ. ಇದು ಇರುವುದು ಈಗಿನ ಮಹಾರಾಷ್ಟ್ರದಲ್ಲಿ. ಎಂತಹ ವ್ಯಕ್ತಿಗಳಿಗೂ ಸಹ ಇಲ್ಲಿನ ಚಿತ್ರಗಳು ಚಿತ್ತಾಪಹಾರಿ ಚಿತ್ತಾರವಾಗಿ ಮನದ ಮೂಲೆಯಲ್ಲಿ ಸದಾಕಾಲ ಗುನುಗುನಿಸದೇ ಇರದು. ಈ ಗುಹಾಂತರ ದೇವಾಲಯವು ವಿಭಿನ್ನವಾಗಿದ್ದು ಇಲ್ಲಿ 'ವಾಪ್' ಕಣಿವೆಯ ಮನೋಹರ ದೃಶ್ಯಗಳನ್ನು ಕೆತ್ತಲಾಗಿದೆ. ಇಲ್ಲಿಯ

ಬೆಟ್ಟವನ್ನು ಕೊರೆದು ಗುಹೆಯನ್ನಾಗಿ ಮಾಡಿ ನಂತರ ಅಲ್ಲಿ ಚಿತ್ರರಚನೆ ಮಾಡಿದ್ದಾರೆ. ಇವಲ್ಲದೇ ಹಲವಾರು ರಾಜರು, ರಾಜ ಮನೆತನಗಳು ಸಹ ಗುಹಾಂತರ ದೇವಾಲಯ ರಚನೆ ಮಾಡಿ ಚಿತ್ರಕಲೆಗೆ ಅಪಾರವಾದ ಕೊಡುಗೆಯನ್ನು ನೀಡಿವೆ. ಉದಾಹರಣೆಗೆ ಶಾತವಾಹನರು, ಬಾದಾಮಿ ಚಾಲುಕ್ಯರು, ಬೌದ್ಧ ಭಿಕ್ಷುಗಳು ಇನ್ನಿತರರು ಗುಹಾಂತರ ದೇವಾಲಯಗಳಲ್ಲಿ ಆಸಕ್ತಿ ಹೊಂದಿ ತಮ್ಮ ಮನಸ್ಸಿನ ಇಂಗಿತವನ್ನು ಸಂಪೂರ್ಣ ಇಲ್ಲಿ ಬರುವಂತೆ ಮಾಡಿದ್ದು ಮುಂದಿನ ಪೀಳಿಗೆಗೆ ಒಂದು ಜೀವಂತ ಸಾಕ್ಷಿಯಾಗಿವೆ.

ಭಾರತದಲ್ಲಿ ಮುಸ್ಲಿಂ ರಾಜರು ಕೂಡ ಚಿತ್ರಕಲೆಗೆ ಅಪಾರವಾದ ಕೊಡುಗೆಯನ್ನು ನೀಡಿದ್ದನ್ನು ಇಲ್ಲಿ ಸ್ಮರಿಸಬಹುದು. ಇಲ್ಲಿ ಇವರು ರಾಜರ ಮತ್ತು ಶ್ರೀಮಂತರ ವೈಭವದ ಜೀವನವನ್ನು ವಸ್ತುವನ್ನಾಗಿಸಿ ಕೊಂಡು ಚಿತ್ರಿಸಿದ್ದಾರೆ. ರಾಜರು ಬೇಟೆಗೆ ಹೋದ ದೃಶ್ಯಾವಳಿಗಳು, ಸಂಗೀತ ಗೋಷ್ಠಿಗಳು, ವೈಭವ ಜೀವನ ಈ ಸಂದರ್ಭದಲ್ಲಿ ಬಹಳ ಪ್ರಮುಖ ವಿಷಯವಾಗಿ ಮೂಡಿಬಂದು ಚಿತ್ರಚಿತ್ತಾರವಾಗಿ ಮೂಡಿಬಂದುವು. ನಾವು ಮಧ್ಯಯುಗದ ಚಿತ್ರಗಳಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ ಸಂಕೇತ ಪ್ರಧಾನವಾದ ಚಿತ್ರಗಳು ಮತ್ತು ಕಥೆಗಳಿಗೆ ಪೂರಕ ಚಿತ್ರಗಳು ಮೂಡಿಬಂದಿವೆ.

**ರಾಜಾಶ್ರಯದಲ್ಲಿ ಅರಳಿದ ಕಲೆ**

ನಮ್ಮ ದೇಶವನ್ನು ಹಲವಾರು ರಾಜವಂಶಗಳು ಆಳಿದ್ದು ಈಗ ಇತಿಹಾಸ. ನಾವು ಇತಿಹಾಸದ ಪುಟಗಳನ್ನು ತಿರುವಿಹಾಕಿದಾಗ ರಾಜಮನೆತನಗಳು ಹಲವಾರು ಕಲಾವಿದರಿಗೆ ಆಶ್ರಯನೀಡಿ ಪ್ರೋತ್ಸಾಹಿಸಿದ್ದನ್ನು ಕಾಣಬಹುದು. ಅದನ್ನು ನಾವು ಅವರ ಆಡಳಿತ ಕಲೆ ಮತ್ತು ವಾಸ್ತುಶಿಲ್ಪದ ಸಂಪೂರ್ಣ ಅಧ್ಯಯನ ಮಾಡಿದಾಗ ಕಂಡುಬರುತ್ತದೆ. ಆದರೆ ಎಲ್ಲವನ್ನು ಹೇಳಲು, ವಿವರಿಸಲು ಸಾಧ್ಯವಿಲ್ಲವಾದರೂ ಕೆಲವೊಂದನ್ನು ಕರ್ನಾಟಕದ ಇತಿಹಾಸದಲ್ಲಿ ಕಲೆಗೆ ನೀಡಿದ ಉತ್ತೇಜನ ಸಹಕಾರ ಮಾತ್ರ ಎಲ್ಲರ ನೆನಪಿನ ಆಳದಲ್ಲಿ ಇರುವಂಥದ್ದು. ಮೈಸೂರು ಮಹಾರಾಜರು, ವಿಜಯನಗರದ ಅರಸರು, ಹೊಯ್ಸಳರು, ಇವರಲ್ಲಿ ಹೆಚ್ಚಾಗಿ ಕಲೆಯ ಬಗ್ಗೆ ಅಪಾರ ಗೌರವ, ಆಸಕ್ತಿ ಹೊಂದಿದ್ದರು ಮತ್ತು ಕೆಲವು ಅರಸರು ಸ್ವತಃ ಕಲಾವಿದರಾಗಿದ್ದರು. ಕಲೋಪಾಸಕರಾಗಿದ್ದರು. ರಾಜರು ಕಲೆ, ಸಂಸ್ಕೃತಿಯ ಆರಾಧಕರಾದ್ದರಿಂದ ಕೆಲವೊಂದು ವಿಷಯಗಳನ್ನು ನಾವು ನೆನಪಿಸಿಕೊಳ್ಳಬಹುದು.

ಉದಾಹರಣೆಗೆ ಹೊಯ್ಸಳ ದೊರೆ ವಿಷ್ಣುವರ್ಧನ – ಜಕಣಾಚಾರಿ ಎಂಬ ಅದ್ಭುತ ಶಿಲ್ಪಿ ಇದ್ದುದರಿಂದ ಬೇಲೂರು – ಹಳೇಬೀಡು ಶಿಲ್ಪ ದೇವಾಲಯಗಳು – ಅಲ್ಲಿಯ ಕೆತ್ತನೆ, ಮಾದರಿ ಇಂದಿಗೂ ಎಂದಿಗೂ ಕೂಡ ನಾವು ಸ್ಮರಿಸಬಹುದು. ಚಾವುಂಡರಾಯನ ಕಾಲದಲ್ಲಿ ರಚನೆಯಾದ ಗೊಮ್ಮಟೇಶ್ವರ ಮೂರ್ತಿ ಎಲ್ಲರೂ ಕೂಡ ಹುಬ್ಬೇರಿಸುವ ರೀತಿಯಲ್ಲಿ ರಚಿಸಿದ್ದು ಇಂದಿಗೂ ಇತಿಹಾಸದ ಪುಟಗಳಲ್ಲಿ ಪ್ರಮುಖ ಶಿಲ್ಪಕೃತಿಯಾಗಿರುವುದನ್ನು ಇಲ್ಲಿ ಸ್ಮರಿಸಬಹುದು. ಮೈಸೂರು ಮಹಾರಾಜರ ಕಾಲದಲ್ಲಿ ಆಸ್ಥಾನ ಕಲಾವಿದರಲ್ಲಿ ಪ್ರಮುಖರಾಗಿದ್ದ ಸುಬ್ರಹ್ಮಣ್ಯ ರಾಜೇ ಅರಸ್, ಮೈಸೂರು ಸಾಂಪ್ರದಾಯಿಕ ಕಲಾಕೃತಿ ಗಳನ್ನು ರಚಿಸಿದ್ದು ಇಂದಿಗೂ ಮೈಸೂರು ಅರಮನೆಯಲ್ಲಿ ಈ ಕಲಾಕೃತಿಗಳನ್ನು ವೀಕ್ಷಿಸಬಹುದು. ಒಂದಕ್ಕಿಂತ ಇನ್ನೊಂದು ವಿಭಿನ್ನ.

**ಅಭಿನಂದನೆ**

ತಮ್ಮ ರೇಖಾಚಿತ್ರಗಳಿಂದ ಬೆರಗು ಹುಟ್ಟಿಸುವ ಕಲಾವಿದರಾಗಿ ರೂಪುಗೊಂಡ ಶ್ರೀ ಕಮಲೇಶ್ ಹಾಗೂ ಶಿಲ್ಪಕಲಾ ಕ್ಷೇತ್ರದಲ್ಲಿ ಹೆಸರು ಗಳಿಸಿರುವ ಶ್ರೀ ವೆಂಕಟಾಚಲಪತಿ ಇವರೀರ್ವರಿಗೂ ಬೆಂಗಳೂರು ಆರ್ಟ್ಸ್ ಫೌಂಡೇಶನ್ ನೀಡುವ 'ಕಲಾ ಧ್ಯಾನ ಪುರಸ್ಕಾರ' ನೀಡಿ ಇತ್ತೀಚೆಗೆ ಗೌರವಿಸಲಾಗಿದೆ. ಅಲ್ಲದೆ, ಭಾಷಾ ತಜ್ಞ ಶ್ರೀ ಡಿ. ಎನ್. ಶಂಕರ ಭಟ್ ಅವರಿಗೆ ಪ್ರತಿಷ್ಠಿತ 'ಪಂಪ ಪ್ರಶಸ್ತಿ' ಲಭಿಸಿದೆ. ಪ್ರಶಸ್ತಿ ಪುರಸ್ಕೃತರಿಗೆ ಹೊಸತು ಹಾಗೂ ನವಕರ್ನಾಟಕ ಬಳಗದ ಅಭಿನಂದನೆಗಳು.

**ಗ್ಯಾಲರಿಗಳಲ್ಲಿ ಆಶ್ರಯ ಪಡೆದ ಕಲೆ**

ಒಬ್ಬೊಬ್ಬ ಕಲಾವಿದ ಬೇರೆ ಬೇರೆ ಕಲೆಯಲ್ಲಿ ಪರಿಣತನಾಗಿದ್ದರಿಂದ ತನ್ನ ತನ್ನ ಕ್ಷೇತ್ರದಲ್ಲಿ ಸಾಧನೆ ಮಾಡಿ ಸಾಧಕನಾಗಿ ಮೆರೆದಿದ್ದಾನೆ. ಕಲೆ ಹಿಂದಿನಿಂದಲೂ ಕೂಡ ತನ್ನ ವರ್ಚಸ್ಸನ್ನು ಉಳಿಸಿ ಕೊಂಡು ಬಂದರೂ ಕೆಲವೊಂದು ಸಮಯದಲ್ಲಿ ಅದಕ್ಕೆ ಸರಿಯಾದ ರೀತಿಯಲ್ಲಿ ಉತ್ತೇಜನ ಸಿಗದಿದ್ದಾಗ ತೊಂದರೆಯಲ್ಲಿ ಸಿಲುಕಿದ್ದೂ ಇದೆ. ಕಾಲ ಬದಲಾಯಿತು – ಕಾಲಕ್ಕೆ ತಕ್ಕಂತೆ ಬದಲಾವಣೆ ಗಳಾಗಲು ಆರಂಭವಾಯಿತು. ಜನರ ನೋಟ ಬದಲಾಯಿತು. ಆಸಕ್ತಿ ವಿಭಿನ್ನವಾಗಿ ಕಲೆಯನ್ನು ಒಂದು ಉನ್ನತಸ್ಥಾನದಲ್ಲಿ ಇಡಲು ತೀರ್ಮಾನಿಸಿದನು. ಇದರ ಪರಿಣಾಮವೇ ಹಲವಾರು ಕಲಾಗ್ಯಾಲರಿಗಳು ಹುಟ್ಟಿಕೊಂಡವು. ಆಧುನಿಕತೆಯ ಸೆಳೆತಕ್ಕೆ ಒಳಗಾದ ಮಾನವ ತನ್ನ ನೋಟ, ಆಸಕ್ತಿಯನ್ನು ಕಾಲಕ್ಕೆ ತಕ್ಕಂತೆ ಬದಲಾಯಿಸಿಕೊಂಡನು. ಗ್ಯಾಲರಿಗಳ ಮೂಲಕ ಕಲೆ ವಾಣಿಜ್ಯೀಕರಣಗೊಂಡಿತು. ಜನರ ಇಚ್ಛೆಗೆ ತಕ್ಕಂತೆ ಕಲಾಗ್ಯಾಲರಿಗಳಲ್ಲಿ ಪ್ರದರ್ಶನ ಮತ್ತು ಮಾರಾಟದ ವ್ಯವಸ್ಥೆ ಏರ್ಪಾಡಾಯಿತು. ಕಲಾಸಕ್ತರೆಲ್ಲ ತಮ್ಮ ಬಿಡುವಿನ ಸಮಯದಲ್ಲೋ ಬಿಡುವನ್ನು ಮಾಡಿಕೊಂಡೋ ಗ್ಯಾಲರಿಗಳಿಗೆ ಬಂದು ವೀಕ್ಷಿಸಿ ತಮ್ಮ ಇಚ್ಛೆಯ ಚಿತ್ರವನ್ನು ಖರೀದಿಸಲು ಆರಂಭಿಸಿದರು.

ಕಲಾವಿದರು ತಾವು ರಚಿಸಿದ ಕಲಾಕೃತಿಗಳನ್ನು ಒಂದೇ ಕಡೆ ಪ್ರದರ್ಶಿಸಿ ಸರಿಯಾದ ಮೌಲ್ಯವನ್ನು ಅಥವಾ ರಿಯಾಯಿತಿ ದರದಲ್ಲಿ ಮಾರಾಟ ಮಾಡುವ ವ್ಯವಸ್ಥೆಯನ್ನು ಮಾಡಲಾಯಿತು. ಕಲೆಯು ಜೀವಂತವಾಗಿ ಉಳಿಯಬೇಕಾದರೆ ಕಲಾಸಕ್ತರನ್ನು ತಲುಪಬೇಕಾದರೆ ಇದು ಸೂಕ್ತ ವೇದಿಕೆ ಎಂದು ನಂಬಿದ್ದರು. ಆದರೆ ಕೆಲವೊಂದು ಕಾರಣಗಳಿಂದ ಗ್ಯಾಲರಿಗಳು ಅಷ್ಟರ ಮಟ್ಟಿಗೆ ಯಶಸ್ಸನ್ನು ಕಾಣುವಲ್ಲಿ ವಿಫಲವಾದವು. ಚಿತ್ರಕಲೆ ಧನವಂತರ ಹವ್ಯಾಸವಾಯಿತು. ಅಥವಾ ಕಲಾವಿದನಿಗೆ ಹೊರಲಾಗದ ಆರ್ಥಿಕ ಹೊರೆಯಾಯಿತು. ಇಂಥ ಸಂದರ್ಭದಲ್ಲಿ ಚಿತ್ರಕಲೆ ಹುಡುಕಿಕೊಂಡದ್ದು ಚಿತ್ರ ಸಂತೆಯ ಮಾದರಿ. ಇದನ್ನು ಹಳ್ಳಿಗಳಲ್ಲಿ ಆಯೋಜಿಸುವ ರೀತಿಯಲ್ಲಿ ಸಂತೆಯ ಮೂಲಕ ಕಡಿಮೆ ದರದಲ್ಲಿ ಪ್ರದರ್ಶಿಸುವ ಆಲೋಚನೆ ಹೊಳೆದವು. ದೇಶದ ಎಲ್ಲ ಕಡೆ ಸಂತೆಯ ಕಲ್ಪನೆ ಮೂಡಲು ಆರಂಭವಾಯಿತು.





ಆದರೆ ನಮ್ಮ ಬೆಂಗಳೂರಿನಲ್ಲಿ ಹಲವಾರು ಕಲಾಗ್ಯಾಲರಿಗಳಿವೆ. ಉದಾಹರಣೆಗೆ, ಕರ್ನಾಟಕ ಚಿತ್ರಕಲಾ ಪರಿಷತ್ತು, ಸುಮುಖ ಗ್ಯಾಲರಿ, ಜೀ ಗ್ಯಾಲರಿ, ವೆಂಕಟಪ್ಪ ಆರ್ಟ್ ಗ್ಯಾಲರಿ, ಕಿಂಕಣಿ ಕಲಾಗ್ಯಾಲರಿ, ಟೈಂ ಅಂಡ್ ಸ್ಪೇಸ್ ಕಲಾಗ್ಯಾಲರಿ, ಸ್ಕೈ ಗ್ಯಾಲರಿ.

ಜನರನ್ನು ತಲುಪುವ ಮಟ್ಟಿಗೆ ಕಲೆಯು ತನ್ನದೇ ಆದ ಪ್ರಮುಖ ಪಾತ್ರವನ್ನು ವಹಿಸಿತು. ಉದಾಹರಣೆಗೆ, ಬೀದಿನಾಟಕಗಳು – ನಾಟಕ ರಂಗಮಂದಿರದಿಂದ ಬೀದಿಗೆ ಬಂದು ನಂತರದ ದಿನಗಳಲ್ಲಿ ಜನರ ನಡುವೆ ಸಮಾಜದ ನೈಜ ಘಟನೆಯನ್ನು ಆಧರಿಸಿ ನಟನೆ ಮಾಡಿದಾಗ ಜನರಿಗೆ ಅದು ನೇರವಾಗಿ ತಲುಪಲು ಆರಂಭವಾಯಿತು. ನಾವು ರಸ್ತೆಯ ಮೂಲಕ ಸಾಗುತ್ತಿರುವಾಗ ರಸ್ತೆಯ ಮಧ್ಯೆ ದೇವರ ಅಥವಾ ಇನ್ನಾವುದೋ ಚಿತ್ರವನ್ನು ಬಿಡಿಸಿ ತನ್ನ ಕಲೆಯ ಅನಾವರಣ ಮಾಡುತ್ತಾನೆ. ಇದನ್ನು ನೋಡಿದ ಪ್ರೇಕ್ಷಕ ಕಲಾವಿದನ ಸಾಧನೆಗೆ ಮೆಚ್ಚುಗೆ ವ್ಯಕ್ತಪಡಿಸುವುದಲ್ಲದೇ ಎಲ್ಲರೂ ಆ ವ್ಯಕ್ತಿಯನ್ನು ಬೆನ್ನುತಟ್ಟಿ ಪ್ರೋತ್ಸಾಹಿಸಿದಾಗ, ಸ್ವಲ್ಪ ಹಣದ ಸಹಾಯ ನೀಡಿದಾಗ ಅವನಿಗೆ ಆಗುವ ಸಂತೋಷ ಹೇಳತೀರದು.

**ಸಂತೆಯಲ್ಲಿ ಚಿತ್ರ... ಚಿತ್ತಾರ**

ನಮ್ಮಲ್ಲಿ ಹಳ್ಳಿಗಳಲ್ಲಿ ಸಂತೆಗಳೂ ನಡೆಯುವುದನ್ನು ನಾವು ನೋಡಿದ್ದೇವೆ. ಕೇಳಿದ್ದೇವೆ. ಸಂತೆಗಳು ವ್ಯಾಪಾರದ ಮಾರುಕಟ್ಟೆಗಳಾಗಿವೆ. ಗ್ರಾಮೀಣ ಪ್ರದೇಶದಲ್ಲಿ ಒಂದೊಂದು ದಿನ ಸಂತೆಯನ್ನು ಆಯೋಜಿಸಿ ಸುತ್ತ ಊರಿನ ಜನರೆಲ್ಲರೂ ಬಂದು ಖರೀದಿಸಿ ಸಂತೋಷಪಡುವವರನ್ನು ನಾವು ಕಾಣುತ್ತೇವೆ. ಮೊದಲು ಜಾತ್ರೆಗಳ ಪರಿಕಲ್ಪನೆ ಇದ್ದರೂ ನಂತರದ ದಿನಗಳಲ್ಲಿ ಸಂತೆಗಳು ಬಹಳ ಪ್ರಾಮುಖ್ಯತೆಯನ್ನು ಪಡೆದುಕೊಂಡವು. ಹೀಗೆ ಸಂತೆಯ ಪರಿಕಲ್ಪನೆಯೊಂದಿಗೆ ಚಿತ್ರಕಲಾ ಪ್ರದರ್ಶನ ಹಾಗೂ ಮಾರಾಟ ಮಾಡುವ ನಿಟ್ಟಿನಲ್ಲಿ ದೇಶ ಅಥವಾ ರಾಜ್ಯದಲ್ಲಿ ಬಹಳಷ್ಟು ಪ್ರಯತ್ನಗಳು ಆರಂಭವಾದವು. ಎಲ್ಲರಿಗೂ ಕಲೆಯು ದೊರಕುವಂತಾಗಬೇಕು, ಕಲಾವಿದರು ಬೆಳೆಯಬೇಕು, ಕಲೆಯು ಜನ–ಮನ ತಲುಪಲು ಕಾರಣವಾಗಬೇಕೆಂಬ ನಿಟ್ಟಿನಲ್ಲಿ ಹಲವಾರು ಪ್ರಯತ್ನಗಳು ನಡೆದು ಬಹಳಷ್ಟು ಯಶಸ್ಸನ್ನು ಕಂಡಿವೆ.

ಚಿತ್ರಸಂತೆ : 'ಚಿತ್ರಸಂತೆ' ಎಂಬ ಶಿರೋ ನಾಮೆಯಡಿಯಲ್ಲಿ ಕರ್ನಾಟಕ ಚಿತ್ರಕಲಾ ಪರಿಷತ್ತು ಕಳೆದ ೧೦ ವರ್ಷಗಳಿಂದ ನಡೆಸುತ್ತಾ ಬಂದಿದೆ. ಚಿತ್ರಸಂತೆಯು ಅಖಿಲಭಾರತದ ಮಟ್ಟದ ಒಂದು ದಿನದ ವಾರ್ಷಿಕ ಕಲಾಸಂತೆಯಾಗಿದೆ. ಇಪ್ಪತ್ತರಿಂದ ಎಂಬತ್ತರ ವಯೋಮಾನದ ಕಲಾವಿದರೆಲ್ಲರೂ ಇದರಲ್ಲಿ ಭಾಗವಹಿಸುತ್ತಿದ್ದಾರೆ. ಒಂದೇ ದಿನದಲ್ಲಿ ಸುಮಾರು ೨ ಸಾವಿರಕ್ಕಿಂತ ಹೆಚ್ಚು ಕಲಾವಿದರು ತಮ್ಮ ಕಲಾಕೃತಿಗಳನ್ನು ತಂದು ಕಲಾಸಕ್ತರ ಕೈಗೆಟುಕುವ ದರದಲ್ಲಿ ನೀಡುವ ಆಲೋಚನೆ ಮಾಡಿದ್ದಾರೆ. ಇದು ಕಲಾವಿದರಿಗೆ ಉತ್ತೇಜನ ಮಾಡಲು ಸೂಕ್ತವಾದ ವೇದಿಕೆಯಾಗಿ ಹೊರಹೊಮ್ಮಿದೆ. ಈ ಚಿತ್ರ ಸಂತೆಯು ಮುಂಬಯಿಯ 'ಕಾಲಾಘೋಡಾ', ಶಾಂತಿನಿಕೇತನದ 'ನಂದನ್‌ಮೇಳ' ಮತ್ತು ಬರೋಡದ 'ಕಲಾಮೇಳ'ದೊಂದಿಗೆ ಸಾಮ್ಯತೆಯನ್ನು ಹೊಂದಿದೆ. ಕರ್ನಾಟಕದಾದ್ಯಂತ ಎಲ್ಲಾ ಕಲಾಗ್ಯಾಲರಿಗಳಿಗೆ ವರ್ಷಾದ್ಯಂತ ಭೇಟಿಕೊಡುವ ಕಲಾಸಕ್ತರಿಗಿಂತಲೂ ಚಿತ್ರಸಂತೆಗೆ ಭೇಟಿ ಕೊಡುವ ಪ್ರೇಕ್ಷಕರ ಸಂಖ್ಯೆ ಹೆಚ್ಚಿದೆ. ಹೆಚ್ಚು ಜನರಿಗೆ ಕಲೆಯನ್ನು ತಲುಪಿಸುವುದರ ಮೂಲಕ ಕಲಾಭಿಮಾನಿಗಳ ಬಳಗವನ್ನು ಹೆಚ್ಚಿಸುವುದು ಚಿತ್ರ ಸಂತೆಯ ಉದ್ದೇಶವಾಗಿದೆ.

ಕುಮಾರಕೃಪಾ ರಸ್ತೆಯಲ್ಲಿರುವ ಕರ್ನಾಟಕ ಚಿತ್ರಕಲಾ ಪರಿಷತ್ತು ಪ್ರತಿವರ್ಷದಂತೆ ಈ ವರ್ಷವೂ (೨೦೧೫) ಜನವರಿ ೫ರಂದು ಆಯೋಜಿಸಿತ್ತು. ಇಲ್ಲಿ ಬಂದ ಜನರಿಗೆ ಒಂದೇ ಸೂರಿನಡಿ ಹಲವು ನಮೂನೆಯ ಕಲಾಕೃತಿಗಳನ್ನು ನೋಡುವ ಅವಕಾಶಸಿಕ್ಕಿತು. ಹಲವಾರು ಕಲಾವಿದರ ಸಾಂಪ್ರದಾಯಿಕ, ಆಧುನಿಕ, ಸಮಕಾಲೀನ ಕಲಾಕೃತಿಗಳು ಪ್ರದರ್ಶಿಸಲ್ಪಟ್ಟವು. ೨ರಿಂದ ೩ ಲಕ್ಷ ಜನರು 'ಚಿತ್ರಸಂತೆ'ಯಲ್ಲಿ ಭಾಗವಹಿಸಿ ತಮ್ಮಿಚ್ಛೆಯ ಹಲವಾರು ಕಲಾಚಿತ್ರ ಖರೀದಿಸಿ ಸಂತೋಷಪಟ್ಟರು. ಎಲ್ಲಿಯೋ ಮೂಲೆಗೆ ಸೇರಿದ ಕಲಾವಿದರ ಆಸೆ ಚಿಗುರೊಡೆಯುವಂತೆ ಮಾಡಿತು. ಕಲಾವಿದನಿಗೆ ಪ್ರೋತ್ಸಾಹ ನೀಡುವ ನಿಟ್ಟಿನಲ್ಲಿ ಇಂತಹ ಕಲೆಯನ್ನು ಜೀವಂತವಾಗಿಡುವ ನಿಟ್ಟಿನಲ್ಲಿ ಮಾಡಿದ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಪ್ರಯತ್ನವನ್ನು ಶ್ಲಾಘಿಸಲೇಬೇಕು. ಹೀಗೆಯೇ ಹಲವಾರು ಕಲಾಸಂಸ್ಥೆಗಳು ಬೇರೆ ಬೇರೆ ಕಲೆಗೆ ಪ್ರೋತ್ಸಾಹಿಸುವ ನಿಟ್ಟಿನಲ್ಲಿ ಮುಂದುವರಿದರೆ ಯಶಸ್ಸು ಕಟ್ಟಿಟ್ಟ ಬುತ್ತಿಯಲ್ಲವೇ? ಕಲೆಗೆ ಅಳಿವಿಲ್ಲ ಅದರ ಉಳಿವಿಗಾಗಿ ಶ್ರಮಿಸೋಣ. ಕಲಾವಿದರನ್ನು ಬೆಳೆಸೋಣ.

**ಬಳಕೂರು ವಿ. ಎಸ್. ನಾಯಕ**
ಪ್ರಾಧ್ಯಾಪಕರು, ನಂ. ೧೬೮, ತಳಮಹಡಿ, ೧ನೇ ಅಡ್ಡರಸ್ತೆ, ತೆಂಗಿನ ಮರದ ರಸ್ತೆ
ಕೊದಂಡರಾಮಪುರ, ಮಲ್ಲೇಶ್ವರಂ, ಬೆಂಗಳೂರು – ೫೬೦ ೦೦೩

# ತಿಳಿವು





ಎಳವೆಯಲ್ಲೆ ತಿಳಿವು ಬಹುದಾಶ್ಚರ್ಯದಂಕ
ವೃದ್ಧಾಪ್ಯದಲಿ ದುರ್ಯೋಧನ ಹಗೆಗೆ ಬಿದ್ದರದು ಅರಿವೆ
ಆತಂಕದಲೆಗಳ ಸುಳಿಗೆ ಸಿಕ್ಕ ಹಡಗಿನ ದುಗುಡವೆ
ಹತಾಶೆಯಂಚಿಗೆ ದೂಡಲ್ಪಟ್ಟ ಕುರೂಪದ ಕುರುಹೆ

ನರೆ ಬಂದುದು ಮುತ್ಸದ್ದಿತನವಲ್ಲ ಬುದ್ಧ ಬೆಳಕೂ ಅಲ್ಲ
ಅನುಭವದಾಲಾಪಗಳು ಅನುಭಾವದಲಿ ಮಿಂದು
ನವರಸರಾಗಗಳ ಶ್ರುತಿಲಯದಿ ನುಡಿಸಬೇಕು
ಕೋಟಿಮನಸುಗಳ ಮೀಟಿ ಮೇಟಿಯ ರೀತಿ
ಸತ್ಯದಾವೃತ್ತಿಯನೂ ಪ್ರಾಮಾಣಿಸುವುದು ಜೀವಮೊರೆತ

ಜಗದ ಜಾಗೃತಿಯ ಹಗಲುಗನಸುಗಳಿಗೆ
ಮಿಥ್ಯೆಯಂಚಿನಲಿ ಸತ್ಯದ ಮಿಂಚು ಕಾಣದು
ಗುಡುಗಿನ ಶಬ್ದಕೆ ಗಡಿಕಟ್ಟುವ ಭ್ರಮೆಯಲಿ
ಬಡಗಿ ಕೆತ್ತಿದ ಶಿಲ್ಪವನು ವಿಕಲ್ಪಗೊಳಿಸುವದೆ
ವಿಲಾಸದಹಂಕಾರದಿ ಅಜ್ಞಾನ ಹಾಸಿಗೆಯಲಿ
ಮಲಗಿ ಸುಜ್ಞಾನ ಬಯಸುವುದು ಬಲ್ಲಿದರ ಬಾಳೆ?

**ಡಾ॥ ಎಲ್. ಹನುಮಂತಯ್ಯ**
ಸಂ. ೨೦೭ 'ಎ', ೩ನೇ 'ಡಿ' ಅಡ್ಡರಸ್ತೆ, ೨ನೇ ಬ್ಲಾಕ್
೩ನೇ ಹಂತ ಬಸವೇಶ್ವರ ನಗರ, ಬೆಂಗಳೂರು – ೫೬೦ ೦೭೯



# ಜಡೆಮುನಿಯೂ ಏಳೆಡೆಸರ್ಪವೂ

ಈರಪ್ಪ ಎಂ. ಕಂಬಳಿ

**'ಮನೆ**ಯೇ ಮೊದಲ ಪಾಠಶಾಲೆ, ತಾಯಿಯೆ ಮಗುವಿಗೆ ಮೊದಲ ಗುರು' ಎಂಬ ಮಾತನ್ನು ನಿರ್ವಿವಾದವಾಗಿ ಒಪ್ಪಿಕೊಳ್ಳುವದಾದರೆ, ಮೊದಲು ಆಕೆಯತ್ತ ಗಮನ ಹರಿಸಬೇಕು. ಶತಶತಮಾನಗಳಿಂದ ಕತ್ತಲೆಯ ಕೂಪದಲ್ಲಿಟ್ಟ ಪ್ರಯುಕ್ತ ಆಕೆಯ ಮನೋಭೂಮಿಕೆ ಕಳೆಯಿಂದ ಪೂರ್ತಿ ಮುಕ್ತವಾಗಿಲ್ಲದಿರುವದೂ ಅಷ್ಟೇ ಸತ್ಯ. ಸುಶಿಕ್ಷಿತ ತಾಯಿಯೊಬ್ಬಳು ಈಗಲೂ ತನ್ನ ಮಗುವಿಗೆ ತುತ್ತು ನೀಡುವಾಗ ಇಲ್ಲದ 'ಗುಮ್ಮ'ನನ್ನು ತೋರಿಸಿ ಬಾಯಿ ತೆರೆಸುತ್ತಾಳೆ. ಇಲ್ಲಿಂದಲೇ ಶುರುವಿಟ್ಟುಕೊಳ್ಳುತ್ತದೆ ಅವೈಜ್ಞಾನಿಕ ಭಯ. ಕತ್ತಲಾದರೆ ಸಾಕು – ಅಲ್ಲಿ ಹೋಗಬೇಡ, ಇಲ್ಲಿ ಹೋಗಬೇಡ, ಇಲ್ಲದ ದೆವ್ವ – ಭೂತಗಳು ಮೆಟ್ಟಿಕೊಳ್ಳುವ ಭಯ. ಮಕ್ಕಳ ಆ ಮುಗ್ಧಮನಸ್ಸುಗಳಲ್ಲಿ ಇಂಥ ಭಯದ ಬೀಜ ಬಿತ್ತುವುದು ಸರಿಯೆ ? ಇದು ನನ್ನ ಪೂರ್ವ– ಪ್ರಾಥಮಿಕ ಪ್ರಶ್ನೆ.

ಅಂಥ ಅವ್ಯಕ್ತ ಭಯದ ಬೆನ್ನುಬಿದ್ದವರಿಗೆ ಪರಿಹಾರವಾಗಿ ದೇವರು – ಧರ್ಮದ ಹೆಸರಿನಲ್ಲಿ ಭಕ್ತಿಯ ಹುಸಿನಂಬಿಕೆಯೆಂಬೋ ಉಪಶಮನ ಬೇರೆ. ಈ ಭಯ – ಭಕ್ತಿಗಳಿಂದಲೇ ಅಮಾಯಕ ಜನರನ್ನು ಶೋಷಿಸುವ ಮಾರ್ಗೋಪಾಯಗಳನ್ನಾಗಿ ಮಾಡಿಕೊಂಡ, ಚರಿತ್ರೆಯುದ್ದಕ್ಕೂ ಕೆಲವೇ ಕೆಲವು ಚಾಣಾಕ್ಷಮತಿಗಳು ದೇವರು – ಧರ್ಮದ 'ಶ್ರದ್ಧೆ' (ನಂಬಿಕೆ)ಯನ್ನೇ ಬಂಡವಾಳ ಮಾಡಿಕೊಂಡು ತಮ್ಮ ಸ್ವಾರ್ಥ ಸಾಧನೆಯ (ಬೇಳೆ ಬೇಯಿಸಿಕೊಳ್ಳುವ) ಕಸರತ್ತು ಮಾಡಿಕೊಂಡು ಬಂದಿರುವುದು ಜಗಜ್ಜಾಹೀರು–ಸೂರ್ಯನಷ್ಟೇ ಸತ್ಯ. ಯಾವಾಗಲೂ ಹಾಗೇ, ಸತ್ಯಕ್ಕೆ ಒಂದೇ ಮುಖವಾದರೆ – ಸುಳ್ಳಿಗೆ ಸಾವಿರ ಮುಖ. ವಾಸ್ತವವಾಗಿ ದೇವರು ಎನ್ನುವದು 'ಇಲ್ಲ'ವೆಂದಿರಾದರೆ, ವಾದವೇ ಬೇಡ, ಅಲ್ಲಿಗೇ ಮುಗಿಯಿತು. ಆದರೆ, ಅದೇ 'ದೇವರು ಇದ್ದಾನೆ' ಎಂದು ವಾದಿಸುವವರಿಗೆ 'ಹಾಗಾದರೆ ಎಲ್ಲಿ, ಹ್ಯಾಗಿದ್ದಾನೆ, ನೀನು ನೋಡಿದ್ದೆಯಾದರೆ ನನಗೂ ಇಷ್ಟು ತೋರಿಸು' ಎಂದು ದುಂಬಾಲು ಬಿದ್ದಿರಾದರೆ ಆಗ ಅದಕ್ಕವರು ನೂರೆಂಟು ಸುಳ್ಳು ಹೇಳುವ ಮೂಲಕ ತಿಪ್ಪೆ ಸಾರಿಸಲು ಶುರು.

ತ್ಯಾಗದ ಸಂಕೇತವೆಂದೇ ಭಾವಿಸಲಾಗುತ್ತಿದ್ದ ಕಾವಿ ಈಗ ಬಣ್ಣ (ಭಂಡ) ಗೆಟ್ಟಿದೆ. ಸ್ವಾರ್ಥ ಲಾಲಸೆಯ–ಸುಖಭೋಗದ ಸಕಲ ಅನಾಚಾರಗಳಿಗೆ ರಕ್ಷಣಾ ಕವಚವಾಗುತ್ತಿದೆ. ವೀರಭದ್ರ ಚೆನ್ನಮಲ್ಲಸ್ವಾಮಿಗಳು ಹೇಳಿದಂತೆ ಮಠಗಳು ಸ್ವಿಸ್ ಬ್ಯಾಂಕುಗಳಾಗುತ್ತಿರುವುದು ಸುಳ್ಳೆ ? ಬಾಬಾಗಳ ಆಶ್ರಮ–ಒಂದೊಂದೂ ಜಾತೀಯ ಮಠಗಳು ಅಕ್ರಮ ಸಂಪತ್ತಿನ ದಾಸ್ತಾನಿಗೆ ಕೋಟೆ–ಖೋಲಿಗಳಾಗುತ್ತಿರುವುದು ನಮ್ಮ ಮುಂದಿರುವ ನಿದರ್ಶನಗಳಾಗಿವೆ. ಪ್ರಪಂಚದಲ್ಲಿ ಇವರೆಲ್ಲ ಪ್ರಶ್ನಾತೀತರೆ ? ಈ ತೆರನಾದ ದಾರಿ ತಪ್ಪಿದ ಧರ್ಮ; ಅಂಥ ಧರ್ಮಾಧಿಕಾರಿಗಳ ಮತ್ತು ಅಧಿಕಾರಸ್ಥ ರಾಜಕಾರಣಿಗಳ ಅಪವಿತ್ರ ಮೈತ್ರಿ ದೇಶದ ಭವಿಷ್ಯತ್ತಿಗೆ ಮಾರಕವಾಗದೆ ಇದ್ದೀತೆ ?

ಬೆಂಗಳೂರು ಜಲಮಂಡಳಿಯ ಜತೆಜತೆಗೇ ಒಳಚರಂಡಿಯೂ ತಳುಕು ಬಿದ್ದಿದೆ. 'ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಅಂತ' ನಗರವಾಸಿಗಳು ನಿತ್ಯ ದಂಡಿಯಾಗಿ ವಿಸರ್ಜಿಸುವ ಮಲಮೂತ್ರಾದಿಗಳನ್ನು ಸಾಗಿಸುವ ಒಳಚರಂಡಿಯ ಪಕ್ಕಕ್ಕೇ ಕುಡಿಯುವ ನೀರು ಪೂರೈಸುವ ಪೈಪುಗಳೂ ಇರುತ್ತವೆ, ಮಂಡಳಿ ತನ್ನ ಹೆಸರಲ್ಲಿಯೇ ಎರಡನ್ನೂ ಇಟ್ಟುಕೊಂಡ ತೆರದಲ್ಲಿಯೇ. ಹಲವು ಕಡೆ, ಹಲವು ಬಾರಿ ಪೈಪು ಒಡೆದು ಚರಂಡಿ ನೀರು ಕುಡಿಯುವ ನೀರೊಂದಿಗೆ ಬೆರೆತು ವಿಷಮಯವಾಗುವ ನಿದರ್ಶನಗಳು ಆಗಾಗ ವರದಿಯಾಗುತ್ತಿರುತ್ತವೆ. ಧರ್ಮನಿರಪೇಕ್ಷತೆಯನ್ನು ಎತ್ತಿ ಹಿಡಿದ ಭಾರತದ ಸಂವಿಧಾನದ ಆಶಯವನ್ನು ಬದಿಗಿಟ್ಟಂತೆ, ಧರ್ಮ ಮತ್ತು ರಾಜಕೀಯಗಳ ಪರಸ್ಪರ ಹೊಕ್ಕು ಬಳಕೆಯಾಗುವಾಗ ಯಾವುದರಿಂದ ಯಾವುದು ಕೆಟ್ಟಿತು ಎಂದು ಆರೋಪಿಸುವ ಮೊದಲೇ ಎಚ್ಚೆತ್ತುಕೊಳ್ಳುವುದು ಸೂಕ್ತವಲ್ಲವೆ !

ಬೆಂಗಳೂರೆಂಬೋ ಮಹಾನಗರದ ಹೊಟ್ಟೆಯೊಳಗೆ ಈಗ ಹಾದಿಗೊಂದು ಬೀದಿಗೊಂದು ದೇವಸ್ಥಾನಗಳು ಕ್ಯಾನ್ಸರ್ ಗಡ್ಡೆಗಳಂತೆ ಬೆಳೆಯುತ್ತಿರುವುದು ಸುಗಮ ಸಂಚಾರಕ್ಕೆ ಅಡ್ಡಿಯಾಗುವುದು ಒತ್ತಟ್ಟಿಗಿರಲಿ, ನಗರವಾಸಿಗಳ ಆತ್ಮಸ್ಥೈರ್ಯ(ವಿಲ್ ಪವರ್)ವನ್ನು ಕುಗ್ಗಿಸುವ ನಿಟ್ಟಿನಲ್ಲಿ ತಮ್ಮದೇ ಆದ ಕೊಡುಗೆ ನೀಡುತ್ತಿವೆ! ಅವುಗಳಿಗೆ ಮೌಢ್ಯಾಧಾರಿತ ಮನಸ್ಸಿನ ಲೋಕಲ್ ಪುಢಾರಿಗಳ / ವ್ಯಾಪಾರಿಗಳ ಕುಮ್ಮಕ್ಕು ಸಿಕ್ಕರಂತೂ ಮುಗಿಯಿತು. ದೇವಸ್ಥಾನಗಳು ಬಿಗ್ ಇಂಡಸ್ಟ್ರಿಗಳಾಗುತ್ತಿವೆ. ದೇವರು–ಧರ್ಮದ ಬಗೆಗೆ ಜನರ ಮನಸ್ಸಿನೊಳಗಿನ ಆ 'ನಂಬಿಕೆ'ಯನ್ನೇ ಎನ್‌ಕ್ಯಾಶ್ ಮಾಡಿಕೊಳ್ಳುವ ಪುರೋಹಿತಶಾಹಿ ನಯವಂಚಕರಿಗೆ ಖಂಡಿತ ಅದರ ಲಾಭ ದಕ್ಕುತ್ತದೆ. ಹೀಗಾಗಿ, ಜನರಲ್ಲಿ ಮೌಢ್ಯಾಚರಣೆ ಬೆಳೆದಷ್ಟೂ ಅದರ ಪ್ರಯೋಜನ ಅವರಿಗೆ ! ಇತ್ತೀಚೆಗೆ, ಮಹಾನಗರದಲ್ಲಿ ದೇವಸ್ಥಾನ ಕಟ್ಟುವದೆಂದರೆ ಅದು ಕೂಡ ಒಂದು ಲಾಭದಾಯಕ ವ್ಯಾಪಾರ–ಉದ್ದಿಮೆಯಾಗಿದೆ. ಪೌರೋಹಿತ್ಯವೂ ಇಲ್ಲಿ ಈಗ ಆಕರ್ಷಕ ವೃತ್ತಿಪರ–ದಂಧೆಯಾಗುತ್ತಿದೆ, ಬಲ್ಲಿರಾ ? ವೈಚಾರಿಕ ಕಣ್ಣನ್ನೇ ಕಳಕೊಂಡವರಂತೆ, ದೇವಸ್ಥಾನಗಳ

ಮುಂದೆ ಸಾಲುಗಟ್ಟಿರುವುದು ಬಳ್ಳಿಗುರುಡರನ್ನು ನೋಡಿದಂತಾಗುತ್ತದೆ, ಥೇಟು !

ನಂಬಿಕೆ–ಮೂಢನಂಬಿಕೆಯ ಬಗೆಗೇ ತೀವ್ರ ಚರ್ಚೆಯಾಗುತ್ತಿರುವ ಈ ಹೊತ್ತಿನಲ್ಲಿ, ದಟ್ಟವಾಗಿ ಬೇರು ಬಿಟ್ಟಿರುವ ಜನಸಾಮಾನ್ಯರ ಮನಸ್ಸಿನೊಳಗಿನ ಆ 'ನಂಬಿಕೆ'ಯನ್ನೇ ಕತ್ತರಿಸಿ ತೆಗೆದು ಇಲ್ಲವಾಗಿಸಿದರೆ ಏನೋ ಅನಾಹುತವೇ ಆಗಿಬಿಡುತ್ತದೆನ್ನುವ 'ಅವ್ಯಕ್ತ ಭಯ' ಬಹಳಷ್ಟು ಮಂದಿಗಿದೆ. ಮುಗ್ಧತೆಯಿಂದಲೊ ಅಜ್ಞಾನದಿಂದಲೊ ಪ್ರೇರಿತವಾದ ಆ ಮನೋಭಾವವನ್ನು ಹೋಗಲಾಡಿಸುವ ಸಮರ್ಪಕ ಮಾರ್ಗೋಪಾಯಗಳನ್ನು ನಾವೀಗ ಕಂಡುಕೊಳ್ಳಬೇಕಿದೆ. ಹೈದರಾಬಾದ್ ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಬಾನಾಮತಿ, ಮಾಟ–ಮಂತ್ರಗಳ ಹಾವಳಿಯೂ ಇದೆ. ಅವಿದ್ಯೆ, ಬಡತನಗಳಿಂದಾಗಿ ಅಮಾಯಕ ಜನ ಅಂಥವಕ್ಕೆಲ್ಲ ಬಲಿಪಶುವಾಗುತ್ತಿರುವುದನ್ನು ಕಣ್ಣಾರೆ ಕಂಡಿದ್ದೇನೆ.

'ಊರು ಸುಟ್ಟರೂ ಹನುಮಪ್ಪ ಹೊರಗೇ' ಎಂಬ ಗಾದೆಯಂತೆಯೇ ಅಕ್ಷರಶಃ ನಮ್ಮ ಮನೆತನದ್ದು ಸಾಕ್ಷಾತ್ 'ಹನುಮದ್ ವಿಲಾಸ'. ವೀರಾಪುರದ ಅಪ್ಪ ವೀರಪ್ಪ ಅರ್ಥಾತ್ ಹನುಮಪ್ಪ, ಶತಮಾನದ ಹಿಂದೆಯೇ ಪ್ಲೇಗಿನಿಂದಾಗಿ ವೀರಾಪುರ ಊರೆಲ್ಲ ಖಾಲಿಯಾಗಿ ಹೋಗಿ, ಊರ ಹೊರಗೆ ನಿಂತಿದ್ದ ಹನುಮ ಮಾತ್ರ ಗಟ್ಟಿಯಾಗಿ ಉಳಿದು, ಈಗ ಆ ವೀರಾಪುರದ ಅಪ್ಪ 'ವೀರಪ್ಪ' ಎಂಬೋ ಹೆಸರಿನಲ್ಲಿ ಅಸರಂತ ಪೂಜೆಗೊಳ್ಳುತ್ತಲೇ ನೆಲೆ ನಿಂತಿದ್ದ. ಭಾಳಾ ಹಿಂದೆ ಅದೇ ಊರಿಂದ ವಲಸೆ ಬಂದವರಾಗಿ, ನನ್ನ ಪೂರ್ವಿಕರು ಸದರೀ ವೀರನ ಹೆಸರನ್ನೇ ನನಗಿಟ್ಟ ದೆಸೆಯಿಂದಾಗಿ, ಬಾಲ್ಯದಲ್ಲಿ ಪ್ರತಿ ಅಮವಾಸ್ಯೆಯಂದು ಬಾಡಿಗೆ ಸೈಕಲ್ ಏರಿ ಕಾಯಿ ಒಡೆಸಿಕೊಂಡು ಬರುವಂತೆ ಈ ಬಾಲಕ ಈರಪ್ಪನನ್ನು ಈರಾಪುರಕ್ಕೆ ಅಟ್ಟುತ್ತಲಿದ್ದರು, ನನ್ನ ಹೆತ್ತವರು. ಆ ವಯಸ್ಸಿನಲ್ಲಿ ಸಹಜವಾಗಿರುವ ಸೈಕಲ್ ಸವಾರಿಯ ಆ ಖುಷಿಗೆ ಹುರ್ರಾ ಎಂದು ಅದನ್ನು ಶಿರಸಾವಹಿಸಿ ಪಾಲಿಸುತ್ತಿದ್ದೆನ್ನಿರಿ.

ಅವೇ ದಿನಗಳಲ್ಲಿ ಹತ್ತಿರದ ರ್‍ಯಾವಣಕಿ ಎಂಬೋ ಹಳ್ಳಿಯ ಅಂಚಿಗೆ ಊರವರೇ ಕಟ್ಟಿಸಿಕೊಟ್ಟಿದ್ದ ಮೂರಂಕಣದ ಮನೆಯ ಆಶ್ರಮದಲ್ಲಿದ್ದ ಕಾವಿ ತೊಟ್ಟ ಮುದುಕನೊಬ್ಬ ನನ್ನ ಕುತೂಹಲ ಕೆರಳಿಸಿದ್ದ. ಒಂದು ಬಾರಿ ಕುಡಿಯಲು ನೀರು ಕೇಳಲು ಹೋದವನಿಗೆ, ಅಂದಿನಿಂದ ನನ್ನ–ಆತನ ನಡುವೆ ವಿಶ್ವಾಸ ಕುದುರಿತ್ತು. ಹಳ್ಳಿಯವರು ಆತನಿಗೆಂದು ಇಟ್ಟು ಹೋಗಿರುತ್ತಿದ್ದ ಎಡೆಯನ್ನು ಉಣ್ಣುವಂತೆಯೂ ಕೆಲವು ಗಂಟೆ ಇದ್ದು ವಿಶ್ರಮಿಸಿಕೊಂಡು ಊರಿಗೆ ತೆರಳುವಂತೆಯೂ ತಾಕೀತು ಮಾಡುತ್ತಿದ್ದ, ನಾನೂ ನಿರಾಕರಿಸಲಾಗದೆ 'ಯಾಕಾಗಲೊಲ್ಲದು' ಅಂದುಕೊಂಡು ಟೆಂಟು ಹೊಡೆಯುತ್ತಿದ್ದೆ. ಕಾವಿ ಮೇಲಿನ ಗೌರವಕ್ಕಾಗಿಯಲ್ಲ. ಕೆಟ್ಟ ಕುತೂಹಲದಿಂದಾಗಿ.

ಈತ ಊರವರ ಇಷ್ಟೊಂದು ವಿಶ್ವಾಸಗಳಿಸುವುದರ ಹಿಂದೆ ಇರುವ ಕಾರಣವಾದರೂ ಏನು ? ಎಂಬ ಕುತೂಹಲಕ್ಕೆ ಕೆಲವೇ ತಿಂಗಳಲ್ಲಿ ಸತ್ಯ ಸಂಗತಿ ನನ್ನ ಅರಿವಿಗೆ ಬಂದಿತ್ತು. ಮುಗ್ಧ ಹಳ್ಳಿಗರು ಕಾಯಿಲೆ–ಕಸಾಲೆ ಎಂದು ಪರಿಹಾರ ಬಯಸಿ ಈತನ ಬಳಿ ಬಂದವರಿಗೆ, ಕಾಗದದ ಚೂರು ಇಲ್ಲವೇ ತಾಮ್ರದ ತಗಡಿನಲ್ಲಿ ಚೌಕಾಕಾರ ಬರೆದು ಅವುಗಳಲ್ಲಿ 'ಹ್ರಾಂ ಹ್ರೀಂ ಹ್ರೂಂ' ಎಂಬ ಅಕ್ಷರಗಳನ್ನು ತುಂಬಿ ಮಡಿಸಿ ದಾರ ಬಿಗಿದು, ಕಣ್ಮುಚ್ಚಿ ಮಂತ್ರಿಸಿದಂತೆ ಮಾಡಿ ಅವರಿಗೆ ರಟ್ಟೆಗೆ ಕಟ್ಟಿಕೊಳ್ಳಲು ಕೊಡುತ್ತಿದ್ದ. ಬಹಳ ಜನ ಒಟ್ಟೊಟ್ಟಿಗೆ ಬಂದಾಗ ನನ್ನ ಕೈಯಲ್ಲಿಯೂ ಯಂತ್ರಗಳನ್ನು ಬರೆಸಿ ಕೊಡಲಾರಂಭಿಸಿದ್ದ. ಒಂದು ದಿನ ಪಕ್ಕದ ಹಳ್ಳಿಗೆ ಹೋದ ಆತನಿಲ್ಲದ ಹೊತ್ತಿನಲ್ಲಿ, ಕೆಟ್ಟ ಕುತೂಹಲದಿಂದ ನಾಗೊಂದಿಗೆಯ ಮೇಲಿಟ್ಟದ್ದ ದೊಡ್ಡ ಗಂಟು ಬಿಚ್ಚಿ ತಪಾಸಿಸಿದಾಗ ಅದರಲ್ಲಿ 'ಚೀನಾ–ಮಲೆಯಾಳೀ–ಬಂಗಾಲೀ ಜಾದೂ' ಎಂಬ ಶೀರ್ಷಿಕೆಯ ಅರೆ ಕ್ಯಾಲಿಕೊ ಬೈಂಡ್ ಆದ, ಗದಗಿನಲ್ಲಿ ಮುದ್ರಿಸಿದ್ದ ಪುಸ್ತಕ ಕೈಗೆ ಸಿಕ್ಕಿತು. ವಾಸ್ತವವಾಗಿ ಆತ ಅದರಲ್ಲಿ ಹೇಳಿದ್ದ ವಿವರಗಳನ್ವಯ ಯಂತ್ರಗಳ ಕಾಪಿ ಮಾಡಿ ಕೊಡುತ್ತಿದ್ದದ್ದು ಈಗ ನನಗೆ ಮನವರಿಕೆಯಾಗಿತ್ತು.

ವಾಪಸ್ಸು ಬಂದ ಮೇಲೆ, "ನೀವು ಮಾಡುತ್ತಿರುವುದು ತಪ್ಪಲ್ಲವೆ ? ಇದರಿಂದ ರೋಗ ಹ್ಯಾಗೆ ಗುಣವಾಗುತ್ತದೆ ?" ಎಂದು ಕೇಳಿದ್ದೇ ತಡ, ಮುಗುಳ್ನಕ್ಕ ಆತ ಏನನ್ನೂ ಹೇಳದೆ ಮರೆಮಾಚತೊಡಗಿದ್ದ. ಮುಂದಿನ ಅಮವಾಸ್ಯೆಗೆ ಹೋದಾಗ, ಆತನ ಆ ಆಶ್ರಮಕ್ಕೆ ಹೋಗಲೊ ಬೇಡವೊ ಎಂಬ ತಳ್ಳಂಕದಲ್ಲಿ

ಕಾವ್ಯಲೋಕ

# ವಾರ್ತೆ ಹಂಚುವವರ ಹಾಡು

**ಕುತ್ಯಾಳ ನಾಗಪ್ಪ ಗೌಡ (ಕಿರಣ)**
'ಕಿರಣ ಕುಟೀರ', ಸುಳ್ಯ
(ದಕ್ಷಿಣ ಕನ್ನಡ) ೫೭೪ ೨೩೯

ದಿನದಿನದ ಸುದ್ದಿ, ಜನಮನದ ಸುದ್ದಿ
ನಮ್ಮೂರ ನಿಮ್ಮೂರ ಮನೆಮನೆಯ ಸುದ್ದಿ
ಸುದ್ದಿ ಬಂದಿದೆ ನೋಡಿ ಸುದ್ದಿ.

ದೇಶ ವಿದೇಶದ ದ್ವೇಷದ ಸುದ್ದಿ
ಭ್ರಷ್ಟರ ದುಷ್ಟರ ಕೂಟದ ಸುದ್ದಿ
ಆಟದ ಬೇಟದ ಓಟದ ಸುದ್ದಿ
ಸುದ್ದಿ ಬಂದಿದೆ ನೋಡಿ ಸುದ್ದಿ.

ದೀಪದ ಕೆಳಗಿನ ಕತ್ತಲ ಸುದ್ದಿ
ಗುಟ್ಟಿನ ಕೃತ್ಯವು ರಟ್ಟಾದ ಸುದ್ದಿ
ದನಗಳ ವೇಷದ ಹುಲಿಗಳ ಸುದ್ದಿ
ಸುದ್ದಿ ಬಂದಿದೆ ನೋಡಿ ಸುದ್ದಿ.

ಸಂಬಳ ಪಡೆಯದೆ ಕುರಿಗಳ ಕಾಯುವ
ತೋಳದ ಬಳಗದ ಸೇವೆಯ ಸುದ್ದಿ
ಸುದ್ದಿ ಬಂದಿದೆ ನೋಡಿ ಸುದ್ದಿ.

ನೀರಿಲ್ಲದೂರಿನ ಬವಣೆಯ ಸುದ್ದಿ
ನೀರುಕ್ಕಿ ಮುಳುಗಿದ ಊರಿನ ಸುದ್ದಿ
ಬೆಳೆನಾಶ ನೆರೆ ಬರ ಹಸಿವಿನ ಸುದ್ದಿ
ಸುದ್ದಿ ಬಂದಿದೆ ನೋಡಿ ಸುದ್ದಿ.

ಜೋಮನ ಶ್ರೀಸಾಮಾನ್ಯನ ಸುದ್ದಿ
ವಿರಸದ ಸರಸದ ವಿನಯದ ಸುದ್ದಿ
ಓದಿದ ಮಕ್ಕಳ ವಿಜಯದ ಸುದ್ದಿ
ಸುದ್ದಿ ಬಂದಿದೆ ನೋಡಿ ಸುದ್ದಿ.

ದುಡಿಯುವ ರೈತರ ಬೆವರಿನ ಸುದ್ದಿ
ಬೆಲೆಗಳು ಗಗನಕೆ ತಲಪಿದ ಸುದ್ದಿ
ರೈತನ ಸಾಲದ ವೃದ್ಧಿಯ ಸುದ್ದಿ
ಸುದ್ದಿ ಬಂದಿದೆ ನೋಡಿ ಸುದ್ದಿ.

ಗಂಡ ಹೆಂಡತಿ ಗುದ್ದಾಡಿದ ಸುದ್ದಿ
ನೋಡಿದ ಹಿರಿಯರೊದ್ದಾಡಿದ ಸುದ್ದಿ
ಆಡುವ ಮಕ್ಕಳು ಬಡವಾದ ಸುದ್ದಿ
ಸುದ್ದಿ ಬಂದಿದೆ ನೋಡಿ ಸುದ್ದಿ.



ಹಿರಿಯರನೊಪ್ಪದ ಕಿರಿಯರ ಸುದ್ದಿ
ಕಿರಿಯರನೊಪ್ಪದ ಹಿರಿಯರ ಸುದ್ದಿ
ತಲೆಮಾರಿನಂತರ ಹೆಚ್ಚಿದ ಸುದ್ದಿ
ಸುದ್ದಿ ಬಂದಿದೆ ನೋಡಿ ಸುದ್ದಿ.

ಅನುಮಾನಿಸುತ್ತಲೇ ಸೈಕಲ್ ಸ್ಟ್ಯಾಂಡು ಹಾಕಿ ಒಳ ಹೋಗುತ್ತಿದ್ದಂತೆಯೇ ಅದೇ ಮುಗುಳ್ನಗೆಯಲ್ಲಿ ಕರೆದು ಕೂರಿಸಿದ್ದ. "ನಾನು ಕಾಲೇಜಿಗೆ ಹಚ್ಚಲು ನಾಕೈದು ವರ್ಷ ಬೇರೆ ಊರಿಗೆ ಹೋಗಲಿದ್ದೇನೆ. ಮುಂದಿನ ಅಮವಾಸ್ಯೆಯಿಂದ ಕಾಯಿ ಒಡೆಸಲೂ ಇತ್ತ ಬರುವದಿಲ್ಲ" ಎಂದೂ ತಿಳಿಸಿದೆ. "ಮುಂದೆ ಯಾವಾಗಾದರೂ ನೀನು ಇತ್ತ ಬಂದಾಗ ನಾನು ಮತ್ತೆ ನಿನಗೆ ಸಿಗುವದಿಲ್ಲವೆಂದೂ ಈಗಾಗಲೇ ಅಂಗಳದಲ್ಲಿ ತೋಡುತ್ತಿರುವ ಸಮಾಧಿಯಲ್ಲಿ ಹೋಗಿ ಜೀವಂತ ಐಕ್ಯವಾಗುವ ನಿರ್ಧಾರ ತೆಗೆದುಕೊಂಡಿರುವದಾಗಿ" ತಿಳಿಸಿದ್ದ. ಆತನ ಆ ಮಾತನ್ನು ಅಷ್ಟಾಗಿ ಸೀರಿಯಸ್ಸಾಗಿ ತೆಗೆದುಕೊಂಡಿರಲಿಲ್ಲ. ಧಾರವಾಡ, ಬೆಂಗಳೂರು ಎಂದು ನಾನೂ ಮರೆತುಹೋದೆ. ಇತ್ತೀಚೆಗೆ ಆ ಊರಿನವರೊಬ್ಬರು ಅಚಾನಕ್ ಸಿಕ್ಕಾಗ ಮುದುಕ ಏನಾದ ? ಎಂದು ಕೇಳಿದ್ದಕ್ಕೆ ನಿಜವಾಗಿಯೂ ಜೀವಂತ ಸಮಾಧಿ ಸೇರಿದನೆಂದು ತಿಳಿಸಿದರು. ಆತ ಎಲ್ಲಿಂದ ಬಂದಿದ್ದ, ಏನು ಕತೆ ಒಂದೂ ಸುಳುಹು ಕೊಡುತ್ತಿರಲಿಲ್ಲವಂತೆ ! ನೊಂದವರಿಗೆ ಒಂದು ಸಾಂತ್ವನದ ಮಾತು ಸಾಕಾಗುತ್ತಿತ್ತು – ಆತನನ್ನು ನಂಬಲು, ಗೌರವಿಸಲು. ಇಂಥವರನ್ನು, ಇಂಥವರ ಕೈಚಳಕವನ್ನು ನೋಡಿದಾಗ 'ನಂಬಿಕೆ ಮತ್ತು ಮೂಢನಂಬಿಕೆ'ಗಳ ನಡುವಿನ ತೆಳು ಗೆರೆಯೇ ಗಮನಕ್ಕೆ ಬಾರದೆ ಹೋಗುತ್ತದೆ, ಎಷ್ಟೋ ಬಾರಿ !

ಪ್ರಭುತ್ವ ಯಾವಾಗಲೂ ಗುಲಾಮಗಿರಿಯನ್ನು ಪೋಷಿಸುತ್ತದೆಂದು ಕಾಣಿಸುತ್ತದೆ. ದೇವರು–ಧರ್ಮದಂಥ 'ನಂಬಿಕೆ'ಯನ್ನು ಬಹುಜನ ಸಮುದಾಯದ ಮನಸ್ಸಿನಲ್ಲಿ ಹಾಗಾಗೇ ಜೀವಂತವಾಗಿರುವಂತೆ ನೋಡಿ ಕೊಳ್ಳುವುದು ಆಳುವ ವರ್ಗಕ್ಕೆ ಅದು ಕ್ಷೇಮಕರವಾಗಿ ಪರಿಣಮಿಸುತ್ತದೆ. ಆಗ ಪ್ರಶ್ನಿಸುವ ಮನಸ್ಸುಗಳೇ ಇಲ್ಲವಾಗುವ ಮೂಲಕ ಶೋಷಣೆಗೆ ನಿರಾಯಾಸವೆಂದೇ ಭಾವಿಸುತ್ತದೆ. ಹೀಗಾಗಿ, ಪುರೋಹಿತಶಾಹಿ ಜನ ಆಯಕಟ್ಟಿನ ಜಾಗ–ಕೆಚ್ಚಲಿಗೆ ಅಂಟಿದ ಉಣ್ಣಿಗಳಂತೆ ಆಳರಸರ ಪಕ್ಕದಲ್ಲಿಯೇ ಇದ್ದು ಅಂಥ 'ನಂಬಿಕೆ'ಯನ್ನು ಕಾಪಾಡಿಕೊಂಡು ಬಂದದ್ದು ಇತಿಹಾಸ. ಅಲ್ಲಿ ದುಡಿಯುವ ವರ್ಗದ ಬಹುಜನ ಸಮುದಾಯದ ಹಿತ ಧಿಕ್ಕರಿಸಿದರೇನಂತೆ, ತಮ್ಮ ಮತ್ತು ಆಳುವವರ ಹಿತವಷ್ಟೇ ಮುಖ್ಯ. ವಿಜ್ಞಾನ ಮತ್ತು ತಂತ್ರಜ್ಞಾನ ಇಷ್ಟೊಂದು ಸುಖ–ಸವಲತ್ತು ನೀಡಿರುವಾಗಲೂ ವೈಚಾರಿಕ ಕಣ್ಣನ್ನು ತೆರೆಯದಂತೆ ಮಾಡುವ ಹುನ್ನಾರ ಯಾರದು ? ಎಂಬ ಪ್ರಶ್ನೆ ಮತ್ತೆ ಮತ್ತೆ ಕಾಡುತ್ತದೆ. ಎಲ್ಲಕ್ಕೂ ಕಾರಣ ಕೆಲವೇ ಕೆಲವು ಅಂಥ ಚಾಣಾಕ್ಷಮತಿಗಳೇ ಅನ್ನುವುದು ನಿರ್ವಿವಾದ.

'ಚಾಣಾಕ್ಷಮತಿ'ಗೆ ಅಗಾಧ ಪಾಂಡಿತ್ಯವಾಗಲಿ ಜ್ಞಾನ ದೇಗುಲದ ಪ್ರಮಾಣಪತ್ರ ಗಳಾಗಲಿ ಬೇಕಾಗಿಲ್ಲ. ಅಮಾಯಕರನ್ನು ಸುಲಭವಾಗಿ ನಂಬಿಸಿ ಮೋಸಗೊಳಿಸ ಬಹುದಾದ 'ಕಲೆ'ಯೊಂದನ್ನು ಕರಗತಮಾಡಿಕೊಂಡಿದ್ದರೆ ಸಾಕು. ಸ್ವಘೋಷಿತ ದೇವಮಾನವರುಗಳಾದ ಬಾಬಾಗಳು–ಧರ್ಮಾಧಿಕಾರಿಗಳು ಮಾಡಿಕೊಂಡು ಬಂದಿದ್ದೂ ಅದನ್ನೇ. ಮತ್ತೆ ಕೆಲವರು ಪರಂಪರೆಯಿಂದ ಅನಾಯಾಸವಾಗಿ ದಕ್ಕಿದ ಮಠೀ(ಠೀ)ಯ ಅವಕಾಶದಿಂದ ಲಭ್ಯವಾದ ಸ್ಥಾನಮಾನಗಳಿಗೆ ತಕ್ಕ ಹಾಗೆ ಬಾಯನ್ನೇ ಬಂಡವಾಳ ಮಾಡಿಕೊಂಡಂತೆ; ಜಟೆ ಬಿಟ್ಟೋ ಕಾವಿ ತೊಟ್ಟೋ ಅಮಾಯಕ ಜನರನ್ನು ನಂಬಿಸುತ್ತ ಸ್ವಸುಖ ಸಾಧನೆಯಲ್ಲಿ ಮುಳುಗುವವರ ಸಂತತಿಯೂ ದೊಡ್ಡದಿದೆ. ಬಹುಜನ ಸಮುದಾಯದ ಮನೋಭೂಮಿಕೆಯಲ್ಲಿನ ಆ 'ನಂಬಿಕೆ'ಯ ಮೇಲೇ ಬಂದಳಿಕೆಯಂತೆ ನಳನಳಿಸುವ 'ಪರಾವಲಂಬೀ ಜೀವಿ'ಗಳ ಒಂದು ವರ್ಗವೂ ಹೀಗೇ ಜತೆಗಿದೆ.

ಈ 'ಚಾಣಾಕ್ಷಮತಿ' ಅನ್ನುವದು ಹೇಗೆ ಕೆಲಸ ಮಾಡುತ್ತದೆನ್ನುವುದಕ್ಕೆ ನನ್ನ ಬಳಿ ಒಂದು ಹಳೆಯ ನಿದರ್ಶನವಿದೆ. ನನ್ನ ಹಳ್ಳಿಯಲ್ಲಿ ಕರಿಯಪ್ಪಜ್ಜನೆಂಬೋ ಜೊಂಡುಮೀಸೆ ಮಾವನಿದ್ದ. ಅದೂ ಐವತ್ತರ ದಶಕದಲ್ಲಿ. ಐದ್ರುಪಾಯಿ ಸಂಬಳದ ದಫೇದಾರ. ಅದರಲ್ಲೇ ದೌಲತ್ತು ಮಾಡುವಾತ. ದೂರದ ಕೊಪ್ಪಳಕ್ಕೆ ಪನಿಶ್‌ಮೆಂಟ್ ವರ್ಗಾವಣೆಯ ಮೇಲೆ ಹೋಗಲೇಬೇಕಾಯಿತು, ಗಂಟುಮೂಟೆ ಕಟ್ಟಿದ್ದ. ಗೌಳಿಗರ ಕೇರಿಯ ಜಗುಲಿಯ ತಟ್ಟೀಮನೆಯಲ್ಲಿ ಒಂಟಿಯಾಗಿ ವಾಸ. ಎಷ್ಟೊಂದು ಹಿಂಡುವ ದನವಿದ್ದರೂ ಈತನಿಗೆ ಹಾಲು ಹೋಗಲಿ, ಮಜ್ಜಿಗೆ ಕೊಡುವದಕ್ಕೂ ಅವರ ಕೈ ಬರುತ್ತಿರಲಿಲ್ಲವಂತೆ. ಸರಿಯಾದ ಸಮಯ ನೋಡಿ, ಅವರಿಗೆ ಬುದ್ಧಿ ಕಲಿಸಲು ಈತ ಹೊಂಚುಹಾಕಿದ್ದ. ಅದೊಂದು ದಿನ, ತನ್ನ ಬಟ್ಟೆ ನೇತುಹಾಕಲು ಬೇಕಾದ ಹಗ್ಗಕ್ಕಾಗಿ ಕತ್ತಾಳಿ ನಾರನ್ನು ತಂದು, ಸ್ವಯಂ ತೊಡೆಯ ಮೇಲೆ ಹೊಸೆಯುತ್ತ ಕೂತಿದ್ದವನ ಬಳಿ ಅಂಥ ಅವಕಾಶ ತಾನಾಗೇ ಹುಡುಕಿಕೊಂಡು ಬಂತು. ಭೂಮಿಗೆ ಬಿದ್ದು ಇನ್ನೂ ಒಂದು ವಾರವೂ ಆಗಿರದ ಎಳೆಗರುವೊಂದು ಜಿಗಿಯುತ್ತ–ನೆಗೆಯುತ್ತ ಈತನ ಬಳಿ ಸಾರಿದಾಗ, ಬಿಡದೆ ಅದನ್ನು ಗಟ್ಟಿಯಾಗಿ ಹಿಡಿದುಕೊಂಡವನೇ, ಉಪಾಯವಾಗಿ ಅದರ ನಾಲಿಗೆಯನ್ನು ಹೊರಗೆಳೆದು, ಹೊಸೆಯುತ್ತಿದ್ದ ಗಟ್ಟಿಯಾದ ನಾರಿನ ಎಳೆಯೊಂದನ್ನು ತೆಗೆದು ಅದಕ್ಕೆ ಬಿಗಿದು ಕೈ ಬಿಟ್ಟ. ಮರಳಿ ಓಡುತ್ತ ಹೋದ ಕರು ದನದ ಹಕ್ಕೆ ಸೇರಿತ್ತು.

ಎರಡು ದಿನ ಬಿಟ್ಟು ನೋಡಲಾಗಿ, ಜನವೆಲ್ಲ ನೆರೆದಿದ್ದರು. ಆ ಎಳೆಗರು ಹಾಲು ಕುಡಿಯದೆ ನಿತ್ರಾಣವಾಗಿ ಮಲಗಿತ್ತು. ಅಂದುಕೊಂಡಂತೆ ನೆರೆದಿದ್ದವರಲ್ಲಿ ಯಾರೋ 'ಅದಕ್ಕೆ ಗಾಳಿ ಸೋಂಕಿದೆ' ಎಂದು ಉದ್ಗಾರವೆತ್ತಿದ್ದರು. ನಮ್ಮೀ ಮೀಸೆಯೂ ಅಮಾಯಕನಂತೆ ನಟಿಸುತ್ತ ಗುಂಪಿನೊಳಗೆ ತಾನೂ ತೂರಿ ಹೋಗಿ ಕರುವನ್ನು ಮುಟ್ಟಿ ತಟ್ಟಿ ಪರೀಕ್ಷಿಸಿದಂತೆ ಮಾಡಿ, ಪರವಾಯಿಲ್ಲ ತನ್ನ ಪಿಲಾನು ಕೆಲಸ ಮಾಡಿದೆಯೆಂದು ಒಳಗೊಳಗೇ ಬೀಗುತ್ತ ಹೊರ ಬಂದ. ಅಲ್ಲೇ ನಿಂತಿದ್ದ, ಅವರ ಮನೆಯ ಹಿರಿಯ ಹುಡುಗನನ್ನು ಹೊರ ಅಂಗಳಕ್ಕೆ ಕರೆದೊಯ್ದು, ಹೆಗಲ ಮೇಲೆ ಕೈಯಿಕ್ಕಿ, ಗುಟ್ಟಾಗಿ ತಲೆಯೊಳಗೊಂದು ಹುಳ ಹಾಕಿ, ಕಿವಿಗೆ ಹೂ ಮುಡಿಸಿದ್ದ. ಮುಳುಗುತ್ತಿರುವವನು ಹುಲ್ಲುಕಡ್ಡಿಗೂ ಕೈಚಾಚುವಂತೆ, ಕ್ಷಣಾರ್ಧದಲ್ಲಿ ಹುಡುಗ ಒಳಹೋಗಿ ತನ್ನವ್ವನನ್ನು ಒಪ್ಪಿಸಿ, ಅಡಕಲ ಗಡಿಗೆಯಲ್ಲಿ ಬಚ್ಚಿಟ್ಟಿದ್ದ ಐದು ಬೆಳ್ಳಿ ಗಟ್ಟಿ ರೂಪಾಯಿ ತಂದು ಮೀಸೆ ಮಾವನ ಕೈಗಿಕ್ಕಿ ಅವಸರಿಸಿದ್ದ. ಇವತ್ತಿನ ದರದಲ್ಲಿ ಅವು ಸಾವಿರಾರು ರೂಪಾಯಿ.

ಮೀಸೆ ಕರಿಯಜ್ಜ ಪೇಟೆಗೆ ಹೋದವನೆ, ನಾರುಬೇರು–ಲೋಬಾನಗಳಂಥ ನಾಕಾಣೆ ಸರಕನ್ನು ಕೊಂಡು ದೋತ್ರದ ಚುಂಗಿನಲ್ಲಿ ಕಟ್ಟಿಕೊಂಡು ಹತ್ತು ನಿಮಿಷದಲ್ಲೇ ಹಾಜರಾಗಿದ್ದ. ಮನೆಮಂದಿಗೆ ಬೆಂಕಿಯ ಕೆಂಡ ತರುವಂತೆ ಹೇಳಿ, ನೆರೆದ ಜನರನ್ನೆಲ್ಲ ದನದ ಕೊಟ್ಟಿಗೆಯಿಂದ ಹೊರದಬ್ಬಿದ್ದ. ಅಲ್ಲಿ ದಟ್ಟವಾದ ಹೊಗೆಯೆಬ್ಬಿಸುವ ಮೂಲಕ ಬೇರೆಯವರಿಗೆ ಏನೂ ಕಾಣದಂತೆ ಅಯೋಮಯ ಸೀನು ಸೃಷ್ಟಿ ಮಾಡಿ, ಸದರೀ ಕರುವಿನ ಬಾಯ್ಗೆ ಬೆರಳು ಹಾಕಿ ತಾನೇ ಕಟ್ಟಿದ್ದ ನಾರಿನ ಎಳೆಯನ್ನು ಹರಿದು, ಅದರ ತಾಯಿಯ ಕೆಚ್ಚಲಿಗೆ ಬಿಟ್ಟಾಗ ಆ ಕರು ದಡಬಡಾಯಿಸಿ ಹಾಲು ಕುಡಿಯುತ್ತಿರುವುದನ್ನು ತೋರಿಸಿ, ಪವಾಡ ಎಸಗಿದ ಗತ್ತಿನಲ್ಲಿ ಮೀಸೆಯಲ್ಲಿಯೇ ನಗುತ್ತ ಹೊರ ನಡೆದಿದ್ದ. ಆತ ಆ ಊರಲ್ಲಿರುವಷ್ಟೂ ದಿನ, ಮಹಾಮಾಟಗಾರ–ನಾಟೀವೈದ್ಯ ಎಂದೇ ಕೇರಿಯ ಜನ ಭ್ರಮಿಸಿದ್ದರು. ಬಾಯಿ ಇದ್ದವ ಬರಗಾಲದಲ್ಲೂ ಬದುಕಿದ ಎನ್ನುವಂತೆ ! ಬಾಯಿ ಬಿಟ್ಟು ಈತ ಕೇಳದಿದ್ದರೂ ಅಂದಿನಿಂದ ಹಾಲು–ತುಪ್ಪದ ಹೊಳೆಯೇ ಹರಿಯಲಾರಂಭಿಸಿತ್ತು. ಮೋಸ ಹೋಗುವ ಅಮಾಯಕರಿರುವವರೆಗೂ ಮೋಸ ಮಾಡುವವರಿಗೇನು ಬರ ? ಇದು ಎಲ್ಲ ಕಾಲಕ್ಕೂ ಸಲ್ಲುವ ಮಾತೇ ಸರಿ. ಅತಿಮಾನುಷ ಶಕ್ತಿಯೆಂದೂ ವಶೀಕರಣ ವಿದ್ಯೆ ಎಂದು ನಂಬಿಸುವವರದು ಇದೇ ಬಗೆಯ ತಂತ್ರಗಳು – ಮೋಡಿ ಮಾಡುವ ಕೈಚಳಕಗಳು. ಆದರೆ ಮನೋವಿಜ್ಞಾನದಲ್ಲಿ ಬರುವ ಹಿಪ್ನಾಟಿಸಂ ಸಂಗತಿ ಬೇರೆ.

ಇನ್ನು ಈ 'ಜಡೆಮುನಿ ಮತ್ತು ಏಳೆಡೆಸರ್ಪ'ಗಳನ್ನು ಕೇಳಬೇಕೆ ? ಭಾರತೀಯ ಪುರಾಣ ಪರಂಪರೆಯಲ್ಲಿ ಮಾತ್ರವಲ್ಲ ; ಜನಪದರ ಮನದಂಗಳದಲ್ಲಿ ಕೂಡ ಭಾರೀ ಮಹತ್ವ ಪಡೆದ ಐಟಂಗಳು. ಜನಮನದಲ್ಲಿ ಭಯಂಕರ 'ಭಯ–ಭಕ್ತಿ' ಹುಟ್ಟು ಹಾಕಿರುವ ಹಳೆಯ ಸರಕುಗಳು ಇವೆರಡೂ. ಗಡ್ಡಮೀಸೆಗಳ ಸಮೇತ ತಲೆಗೂದಲನ್ನು ಜೂಟ್ ನಾರಿನಂತೆ ಬೇಕಾಬಿಟ್ಟಿ ಬೆಳೆಸಿದ್ದ, ಕಾವಿ ತೊಟ್ಟ 'ಜಟಾಜೂಟಿ'ಗಳನ್ನು ಕಂಡರೆ ಸಾಮಾನ್ಯ ಜನ ಕಾಲಿಗೆರಗುವುದುಂಟು. ವಿಪರೀತ ತಪಸ್ಸಿನ ಫಲವಾಗಿ ಅವರು ಗಳಿಸಿದ ಕೋಪಕ್ಕೆ ತಾವೆಲ್ಲಿ ಸುಟ್ಟು ಕರಕಲಾಗಿಬಿಡುತ್ತೇವೆಯೊ ಎಂಬ ಅವ್ಯಕ್ತ ಭಯ, ಈ ಹಿಂದೆ ತಾವು ಕೇಳಿದ್ದ ಕಟ್ಟುಕತೆಗಳಿಂದಾಗಿ. ಹಾಗೆಯೇ ವಿಷಸರ್ಪ–ನಾಗರ ಕೂಡ ಭಾರತೀಯ ಪುರಾಣ ಪ್ರಸಂಗಗಳಲ್ಲಿ ವಿಶೇಷ ಸ್ಥಾನಮಾನ ಗಳಿಸಿದ್ದು ನಿಜ. ಭಾರತೀಯರಲ್ಲಿ ಹಾಗೆ ರಕ್ತಗತವಾಗಿರುವ, ಜಡೆಮುನಿ ಮತ್ತು ಏಳೆಡೆಸರ್ಪಗಳು ಹುಟ್ಟಿದ್ದೂ ಅಂಥ ಭ್ರಮಾಧೀನ ಮನೋಭೂಮಿಕೆಯ ಕಪೋಲಕಲ್ಪಿತ ಕಟ್ಟುಕತೆಗಳಾಗಿ; ಭಯ–ಭಕ್ತಿಗಳ ಆರೋಪಗಳಿಂದಾಗಿ !

ಫೀನಿಕ್ಸ್ ಹಕ್ಕಿಯಾಗಲಿ, ನಮ್ಮ ದೇಶದ ಎರಡು ತಲೆಯ ಗಂಡಭೇರುಂಡ ಪಕ್ಷಿಯಾಗಲಿ ಕಲ್ಪನೆಗಳಷ್ಟೆ. ಬೆಳದಿಂಗಳನ್ನು ಕುಡಿದು ಬದುಕುತ್ತದೆನ್ನುವ ಚಕೋರ ಹಕ್ಕಿ; ನೀರೊಳಗಿದ್ದೂ ಬೆವರು ಕಿತ್ತ ದುರ್ಯೋಧನ; ಮಾವಿನ ಕೆಂದಳಿರು ಎಂದು ಮೋಸಹೋಗಿ ತರಳೆಯರ ಕೆಂದುಟಿಯ ಕಚ್ಚಿದ ಗಿಣಿಗಳು – ಇವೆಲ್ಲ

ಕವಿಯ ಕಲ್ಪನಾ ವಿಲಾಸ. ಕಾವ್ಯಗಳಲ್ಲಿ ಬರುವ ಇಂಥವನ್ನೆಲ್ಲ ಕಾವ್ಯದ ಸೊಗಸೆಂದೇ ಪರಿಭಾವಿಸಿ ಅನುಭವಿಸಬೇಕೇ ಹೊರತು, ಅವಕ್ಕೆ ಇಲ್ಲಸಲ್ಲದ ಅರ್ಥ ಆರೋಪಿಸುವುದು ತರವಲ್ಲ. ಅದನ್ನೇ ಪ್ರಾಚೀನ ಕನ್ನಡ ಕವಿ ನೇಮಿಚಂದ್ರನು ತನ್ನ 'ಲೀಲಾವತಿ ಪ್ರಬಂಧ'ದಲ್ಲಿ, "ಲಂಕೆಗೆ ಕಪಿ ಸೈನ್ಯವು ಸೇತುವೆಯನ್ನು ಕಟ್ಟಿತೊ ಇಲ್ಲವೊ; ಆಕಾಶವನ್ನು ವಾಮನ ಮೆಟ್ಟಿದನೊ ಇಲ್ಲವೊ; ಆದರೆ ಕವಿಗಳು ಮಾತ್ರ ತಮ್ಮ ಕಾವ್ಯಗಳಲ್ಲಿ ಕಟ್ಟಿದರು, ಮೆಟ್ಟಿದರು" ಎಂದು ನುಡಿದಿರುವುದು ಎಷ್ಟು ಸಮಂಜಸ!




ಹಳ್ಳಿಯ ಪರಿಸರದಲ್ಲಿ, ಮಾಲೀಕರು ತಮ್ಮ ತೋಟದ ತೆಂಗಿನಕಾಯಿ ಕಳುವಾಗದಿರಲೆಂದು, ತಮ್ಮ ತೋಟದ ಹತ್ತಿರವಿರುವ ಹಾಳುಮಂಟಪದಲ್ಲಿ ಇತ್ತೀಚೆಗೆ ಎಲ್ಲಿಂದಲೊ ಬಂದ ಜಡೆಮುನಿಯೊಂದು ವಾಸವಾಗಿದೆಯೆಂದೂ; ಹಗಲು ಹೊತ್ತಿನಲ್ಲಿ ಅದು ಯಾರ ಕಣ್ಣಿಗೂ ಬೀಳದೆ, ರಾತ್ರಿ ಮಾತ್ರ ಕೆಂಗಣ್ಣು ಬಿಟ್ಟುಕೊಂಡು ಸಂಚಾರ ಹೊರಡುತ್ತದೆಂದೂ ಆಳು ಮಕ್ಕಳ ಕಿವಿಗೆ ಹಾಕಿ ಒಂದು ನಮೂನಿ ವದಂತಿ ಹರಿಬಿಡುವುದುಂಟು. ಮತ್ತೊಂದು ಕಡೆ ಹಾಳುಮಂಟಪವಿಲ್ಲದ ಕಡೆಯಲ್ಲಿ, ಫಸಲು ಕೊಯ್ಲಿಗೆ ಬಂದಾಗ ಹೊಲದ ಬಳಿಯಿರುವ ಹಳೆಯ ಹುಣಸೆಮರದ ಡೊಂಗರಿನಲ್ಲಿ ಏಳೆಡೆಸರ್ಪವೊಂದು ಅದೆಲ್ಲಿತ್ತೊ ಬಂದು ಸೇರಿಕೊಂಡಿದೆಯೆಂದೂ ರಾತ್ರಿಯ ಕಾವಳಿನಲ್ಲಿ ಅದರ ಬುಸುಗುಡುವ ಶಬ್ದ ಅಷ್ಟು ದೂರಕ್ಕೆ ಕೇಳಿಸುತ್ತದೆಂದೂ ಪುಕಾರು ಹಬ್ಬಿಸುತ್ತಾರೆ. 'ಹಾವು ಅಂದರೆ ಜೀವ ಹರಣವೇ ಹಾರ್‍ಯಾವು'. ಇನ್ನು ಕೇಳಬೇಕೆ? ಜನ ಹಗಲು ಹೊತ್ತಿನಲ್ಲಿಯೂ ಅತ್ತ ಸುಳಿದರೆ ಕೇಳಿರಿ, ಜೀವ ಭಯ!

ಇಂಥ ವದಂತಿಗಳನ್ನು ಹರಿಬಿಡುವುದಕ್ಕೆ ಮುಖ್ಯವಾದ ಎರಡು ಕಾರಣಗಳು ಇರುತ್ತವೆ. ಕದಿಯಲು ಬರುವವರನ್ನು ಹೆದರಿಸುವುದು ಒಂದಾದರೆ; ತೋಟದ ಮನೆಗಳಲ್ಲಿ ತಾವು ನಡೆಸುವ ಹಲ್ಕಾ-ಭಾನಗಡಿಗಳು ಗೊತ್ತಾಗಬಾರದೆಂಬಂತೆ ಯಾರೂ ಅತ್ತಕಡೆ ಸುಳಿಯದಿರಲೆಂಬುದು ಮತ್ತೊಂದು. ಅದೇನೇ ಇರಲಿ. ಈ ಏಳು ಹೆಡೆಗಳಿರುವ ಹಾವು ಎಲ್ಲಿಯಾದರು ಇರುವುದುಂಟೆ? ಜೀವಜಾಲದಲ್ಲಿ ಅಕಸ್ಮಾತ್ ಆಗಿ ಅಪವಾದವೆಂಬಂತೆ ಎರಡು ತಲೆಯ ಹಾವು ಅಪರೂಪವಾಗಿ ಹುಟ್ಟಿರಬಹುದಾದರೂ ಏಳು ಹೆಡೆಯ ಹಾವು / ಏಳು ಮಕ್ಕಳ ತಾಯಿ ಎಂಬುದೆಲ್ಲಾ ಬಿಲ್‌ಕುಲ್ ಕಟ್ಟುಕತೆ. ಈ ಏಳರ ಸಂಖ್ಯೆಯೇ ಹಾಗೇನೊ. ಸಪ್ತರ್ಷಿಮಂಡಲ, ಸಪ್ತಸಾಗರ, ಏಳು ವರ್ಣ, ಏಳು ಸ್ವರ, ಏಳುಸುತ್ತಿನ ಕೋಟೆ, ಏಳುಕೊಂಡಲವಾಸ, ಏಳೇಳು ಜನ್ಮ, ಸೆವೆನ್ ವಂಡರ್ಸ್! ಅದೇನು ಕಾರಣಕ್ಕೋ ಪ್ರಪಂಚದ ತುಂಬ ಈ ಏಳರ ಮೇಲಿನ ವ್ಯಾಮೋಹ ಅಧಿಕ. ಹಳ್ಳಿಯ ಪರಿಸರ ಹೋಗಲಿ, ಹಗಲೂ ರಾತ್ರಿ ಸಖತ್ ವಿದ್ಯುತ್ ಮುಕ್ಕಳಿಸುತ್ತ ಸದಾ ಬೆಳಕಿನಲ್ಲೇ ಮುಳುಗೇಳುವ ನಗರಗಳಲ್ಲೂ 'ಕೂಗುಮಾರಿ' ಸುದ್ದಿ ಯಾಗಿದ್ದಿದೆ. ಇಂಥವುಗಳ ಹಿಂದೆ ಚಾಣಾಕ್ಷಮತಿಯೊಬ್ಬನ ಕೈವಾಡ ಇದ್ದೇ ಇರುತ್ತದೆನ್ನುವದನ್ನು ಅಲ್ಲಗಳೆಯಲಾಗದಲ್ಲವೆ?

ಪುರಾಣ-ಪುಣ್ಯಕತೆಗಳೆಂದು ಹೇಳಲಾಗುವ ಕಟ್ಟು ಕತೆಗಳಲ್ಲಿ ಬರುವ ಚಿತ್ರಗಳೋ, ವಾಹ್! ಆರೈಕೆಯಿಲ್ಲದೇ ಅಡ್ಡಾದಿಡ್ಡೀ ಬೆಳೆದ ಗಡ್ಡ - ಮೀಸೆಗಳು, ಜಡ್ಡುಗಟ್ಟಿದ ತಲೆಗೂದಲ ಆ 'ರುಸಿಮುನಿ'ಗಳ ಸುತ್ತ ಹುತ್ತದಂತೇ ಬೆಳೆದ ವದಂತಿಗಳಿಗೇ ಜನ ಅರ್ಥ ಭಯ ಬೀಳಬೇಕು. ಶಿವನ ಕೆಂಜೆಡೆ ಇರಲಿ; ಇನ್ನು ಏಳೆಡೆಸರ್ಪದ ಕತೆ ಕೇಳಿ. ಥೇಟ್ ಕೊಡೆಯಂತೇ ಏಳು ಹೆಡೆ ಬಿಚ್ಚಿ ಮಲಗಿದ್ದ ಸರ್ಪದ ಮೆತ್ತನೆಯ ಮೈಮೇಲೆ ಫೋಮ್ ಬೆಡ್ ಮೇಲೆ ಪವಡಿಸಿದಂತೇ ಥೇಟು ಶ್ರೀಮನ್ನಾರಾಯಣನ ಆ ಮಲಗಿದ ಭಂಗಿಯ ಕ್ಯಾಲೆಂಡರ್ ನೋಡೀ ನೋಡೀ ಅಂಥ ಜಡೆಮುನಿಗಳೂ ಏಳೆಡೆಸರ್ಪಗಳೂ ಎಲ್ಲಿಲ್ಲದ ಭಕ್ತಿ-ಭಯಗಳಿಂದಾಗಿ ಜನಸಾಮಾನ್ಯರ ಮನಸ್ಸಿನಲ್ಲಿ ಶಾಶ್ವತವಾಗಿ ಮನೆಮಾಡಿಕೊಂಡಿವೆ. ಅದಕ್ಕೆ ಬಹು ವರ್ಣದ ಆಕರ್ಷಕ ಕ್ಯಾಲೆಂಡರುಗಳೂ ನಾನಾ ನಮೂನೆಯ ಚಿತ್ರಪಟಗಳೂ ತಮ್ಮ ಕೊಡುಗೆ ನೀಡಿವೆ!

ಕಾಡಿನ ಕತ್ತಲೆಯ ದಾರಿಯಲ್ಲಿ ಒಬ್ಬಂಟಿಯಾಗಿ ಹೊರಟವನಿಗೆ 'ತನ್ನ ನೆರಳಿಗೆ ತಾನೇ ಅಂಜಿದಂತೆ' ಅನ್ನಿಸಬಹುದು; ಇಲ್ಲಾ ಕಾಡಿನ ನೀರವತೆಯಲ್ಲಿ ಅಪರಿಚಿತ ಹಕ್ಕಿಯ ಕೂಗು, ಕಾಡು ಮೃಗಗಳ ಘರ್ಜನೆ, ಗಾಳಿ ಬಿಟ್ಟಾಗ ಬಿದಿರುಮೆಳೆ ಹೊರಡಿಸುವ ಶಬ್ದಗಳು ತುಸು ಭಯ ಹುಟ್ಟಿಸಬಹುದು. ಆದರೆ, ಇಂಥ ಕಡೆ ಕೂಡ ಚಾಲಾಕಿ ಮನುಷ್ಯರೇ ವಿಕಾರ ಶಬ್ದಗಳನ್ನು ಹೊರಡಿಸುವ ಮೂಲಕ ದೆಯ್ಯ - ಭೂತಗಳ ಆವಾಹನೆ ಎಂದು ನಂಬಿಸುವುದು; ದೇವರು ಮೈಮೇಲೆ ಬಂದು ಹೇಳಿಕೆ ನೀಡುವುದು ಇವೆಲ್ಲ ಚಾಣಾಕ್ಷಮತಿಗಳ ಹುನ್ನಾರವೇ ಸೈ! ಭೂತ - ಕೋಲಗಳೆಲ್ಲ ಇನ್ನೂ ನಮ್ಮ ಪಶ್ಚಿಮಘಟ್ಟದ ದಟ್ಟ ಕಾಡಿನ / ಕರಾವಳಿ ಪರಿಸರದಲ್ಲಿ ಇನ್ನೂ ಕಾಣಬಹುದಾಗಿದೆ. ಮದುವೆಯಾಗದವರು / ಮಕ್ಕಳಾಗದವರು ಕುಕ್ಕೆ ನಾಗರಕಲ್ಲಿಗೆ ನಡೆದುಕೊಳ್ಳುವ; ಎಂಜಲೆಲೆ ಮೇಲೆ ಹೊರಳಾಡುವಂಥ ಆಚರಣೆಗಳಿನ್ನೂ ಇಲ್ಲಿ ಉಳಿದಿರುವದೇ ಒಂದು ನಾಚಿಕೇಗೇಡಿನ ಸಂಗತಿಯಾಗಿದೆ.

ಅಕ್ಷರಪ್ರಪಂಚಕ್ಕೆ ಕಣ್ಣುಬಿಟ್ಟಾಗಿನಿಂದ ನಾನು, ಈ ದೇವರು-ದೆವ್ವಗಳು ಮೈಮೇಲೆ ಬರುವ ಪ್ರಸಂಗಗಳನ್ನು ಸಾಕಷ್ಟು ಹತ್ತಿರದಿಂದ ಪ್ರಾಯೋಗಿಕವಾಗೇ ಅವಲೋಕಿಸಿದ್ದೇನೆ. ಅವುಗಳ ಹಿಂದೆ ಬಹುತೇಕ ಪ್ರಕರಣಗಳಲ್ಲಿ ಮನೋವ್ಯಾಪಾರದ ಸಮಸ್ಯೆಯಿರುವುದನ್ನು ಮನಗಂಡಿದ್ದೇನೆ. ಶಿಕ್ಷಣ ನಮ್ಮನ್ನು ವಿವೇಕವಂತರನ್ನಾಗಿಯೂ ವಿಚಾರವಂತರನ್ನಾಗಿಯೂ ಮಾಡುವಲ್ಲಿ ಹಿಂದೆ ಬಿದ್ದಿದೆ ಅನ್ನಿಸುತ್ತದೆ. ವೈಜ್ಞಾನಿಕ ಆಲೋಚನೆಯಿಲ್ಲದ ಶಿಕ್ಷಣದಿಂದಾಗಿ 'ಎಜುಕೇಟೆಡ್ ಫೂಲ್ಸ್' ಸಂಖ್ಯೆ ಏರುತ್ತಿದೆ. ನಿಜಕ್ಕೂ ಇದು ಆತಂಕಕಾರಿಯಾದ ಸಂಗತಿ. ಸಾಮಾಜಿಕ ಜವಾಬ್ದಾರಿಯಿರುವ ಅಧಿಕಾರಸ್ಥ ರಾಜಕಾರಣಿಗಳೂ ಇಂಥವಕ್ಕೆಲ್ಲ ಕುಮ್ಮಕ್ಕು ಕೊಡುತ್ತ ಹೋದರಂತೂ ತೀರಿತು. ಮರವೇರಿದ್ದ ಮಂಗ್ಯಾನ ಕುಂಡಿ ಕೆಳಗಿದ್ದವರಿಗೆಲ್ಲ ಕಾಣುತ್ತದೆನ್ನುವ ಎಚ್ಚರ ಇರಬೇಕಷ್ಟೆ! ಅವರ ಜತೆಗೆ, ದೂರದರ್ಶನದಂಥ ಪರಿಣಾಮಕಾರಿ ಮಾಧ್ಯಮವೂ ಮೌಢ್ಯಗಳ ಪ್ರಚಾರಕ್ಕೆ ಟೊಂಕಕಟ್ಟಿ ನಿಂತವರಂತೆ ವರ್ತಿಸುವದೆಂದರೆ ಹೇಗೆ! ನಿಜವಾಗಿಯೂ ನಾಗರಿಕ ಜಗತ್ತಿಗೆ ಅದೇನು ಗರಬಡಿದಿದೆಯೊ? ಮಾನಸಿಕವಾಗಿ ಮತ್ತೆ ನಮ್ಮನ್ನು ಗುಲಾಮಗಿರಿಗೆ ತಳ್ಳುವ ಹುನ್ನಾರವೊ? ಎಲ್ಲ ಅಯೋಮಯ! ಮೂಢನಂಬಿಕೆಗಳ ಆಚರಣೆಗೆ ತಡೆಯೊಡ್ಡುವ ಕ್ರಮವಾಗಿ ಹೊಸ ಕಾನೂನು ಮಾಡಲು ಹೊರಟಾಗ 'ಧರ್ಮದೇಟು' ತಮ್ಮ ಮರ್ಮಾಂಗಕ್ಕೇ ಬಿದ್ದ ಹಾಗೆ ಚೀರಾಡುವವರನ್ನು ಕಂಡು ಕನಿಕರವಾಗುತ್ತದೆ. ನಂಬಿಕೆ-ಮೂಢನಂಬಿಕೆಗಳ ನಡುವಿನ ಸೂಕ್ಷ್ಮ ವ್ಯತ್ಯಾಸವರಿಯದ, ಇಂಥ ಹುಚ್ಚರ ಸಂತೆಯಲ್ಲಿ ಕಬೀರನಂತೆ ನಿಂತು 'ದೆವ್ವ' ಬಿಡಿಸುವ ಬಗೆಯಾದರೂ ಯಾವುದು ಎಂದು ಯೋಚಿಸಬೇಕಾಗಿದೆ?

ಅಂದ ಹಾಗೆ, ದೇಶ-ಕಾಲ-ಭಾಷೆ-ಜನಾಂಗಗಳನ್ನೂ ಮೀರಿದಂತೆ ದೆವ್ವದ ಬಗೆಗೇ ಬೇಕಾದಷ್ಟು ರೋಚಕ ಕತೆಗಳಿವೆ. ಪ್ರಪಂಚದ ಅತ್ಯಂತ ಸಣ್ಣ ಕತೆ ಎಂದು ಹೇಳಲಾಗುವ ಅದರ ವಸ್ತು ಕೂಡ 'ನಮ್ಮ ದುರಾದೃಷ್ಟಕ್ಕೆ' ದೆವ್ವವೇ ಆಗಿರಬೇಕೇ! ಆ ಕತೆಯಾದರೂ ಹೀಗಿದೆ: "ರಾತ್ರಿಯ ಭೀಕರ ಕಗ್ಗತ್ತಲೆಯನ್ನು ಸೀಳಿಕೊಂಡು ಓಡುತ್ತಿದ್ದ ನಿರ್ಜನ ರೈಲಿನಲ್ಲಿ ಒಂಟಿಯಾಗಿ ಪ್ರಯಾಣಿಸುತ್ತಿದ್ದಾತನ ಎದುರು, ಅದೆಲ್ಲಿದ್ದನೋ ಧುತ್ತೆಂದು ಪ್ರತ್ಯಕ್ಷನಾಗಿದ್ದ ವ್ಯಕ್ತಿಯೊಂದು 'ನೀವು ಎಂದಾದರು ದೆವ್ವವನ್ನು ಕಂಡಿದ್ದೀರಾ?' ಎಂದು ಮಾತಿಗೆಳೆದಿದ್ದ. ಅದಕ್ಕೆ ಪ್ರತಿಯಾಗಿ, ಈತ ನಿಧಾನವಾಗಿ 'ಇಲ್ಲವಲ್ಲ' ಎಂದು ಹೇಳುತ್ತ, ಆತನತ್ತ ತಿರುಗುವ ಹೊತ್ತಿಗೆ, ಅಲ್ಲಿ ಯಾರೂ ಇರಲಿಲ್ಲ!" ಒಂಟಿತನವೇ ಮನುಷ್ಯನ ಬಹು ದೊಡ್ಡ ಶತ್ರುವಲ್ಲವೆ? ಹಾಗೆ ಏಕಾಂತದಲ್ಲಿಯೇ ದೇವರು - ದೆವ್ವಗಳು ವಕ್ಕರಿಸಲು ಹೇಳಿ ಮಾಡಿಸಿದ ಪ್ರಶಸ್ತ ಸಮಯ! ಎಲ್ಲ ಮನೋವ್ಯಾಪಾರಕ್ಕೆ ಸಲ್ಲುವ ಸಂಗತಿಗಳೇ ಸೈ.

**ಈರಪ್ಪ ಎಂ. ಕಂಬಳಿ**
ಉಪ ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ
ವಿಶ್ವೇಶ್ವರಯ್ಯ ಕೇಂದ್ರ, ಪೋಡಿಯಂ ಬ್ಲಾಕ್, ಡಾ॥ ಅಂಬೇಡ್ಕರ್ ವೀಧಿ, ಬೆಂಗಳೂರು – ೫೬೦ ೦೦೧

# ಕಲ್ಲು ಹೂವು: ದೇಹ ಒಂದು ಜೀವ ಎರಡು

ವಿಜ್ಞಾನ ಪ್ರಪಂಚದ ಸಂಶೋಧನಾ ಕ್ಷೇತ್ರದಲ್ಲಿ ಕಗ್ಗಂಟಿನಂತೆಯೆ ಕಾಡುವ ಕಲ್ಲು ಹೂವುಗಳ ಬಗ್ಗೆ ಸರಿಯಾದ ವಿವರಗಳನ್ನು ಕಲೆಹಾಕುವುದು ಅಗತ್ಯವಿದೆ. ಆಧುನಿಕ ಸಮಾಜದ ಪ್ರಗತಿ ಮತ್ತು ಸುಸ್ಥಿರ ಬದುಕಿನ ನಿರ್ಮಾಣದ ದಿಸೆಯಲ್ಲಿ ಕಲ್ಲು ಹೂವುಗಳಂತಹ ವಿಶಿಷ್ಟ ಜೀವಿಗಳು ಸಹಾಯ ಮಾಡಬಲ್ಲವೆ ? ಎಂಬ ಪ್ರಶ್ನೆಗೆ ಉತ್ತರ ಹುಡುಕುವ ಸತ್ಕಾರ್ಯ ಸಂಶೋಧನೆಯಿಂದ ಆಗಬೇಕಾಗಿದೆ. ವಿಸ್ಮಯ ವಿಶ್ವದ ಗರ್ಭದೊಳಗಡಗಿರುವ ರಹಸ್ಯಗಳನ್ನು ಅರಿಯುವೆಡೆಯಲ್ಲಿ ಮಾನವನ ಸತತ ಪ್ರಯತ್ನಗಳು ಬದುಕಿನ ಮಜಲುಗಳನ್ನು ಬದಲಾಯಿಸುತ್ತಲೇ ಇವೆ.

**ಡಾ॥ ಗಾಯತ್ರಿ ದೇವರಾಜ್**
**ಸ್ವಾಮಿ ಸಿ. ಟಿ.**
**ದೇವರಾಜ ಟಿ. ಎನ್.**
**ಸಂಜೀವ ನಾಯಕ**

'ಕಲ್ಲರಳಿ ಹೂವಾಗಿ' ಎಂಬುದು ಪ್ರಖ್ಯಾತವಾದ ಕನ್ನಡದ ಮಾತು. ಚಿತ್ರದುರ್ಗದ ಕಲ್ಲಿನ ಕೋಟೆಯೊಂದಿಗೆ ಬೆಸೆದುಕೊಂಡಿರುವ ಈ ಮಾತಿಗೂ ಈಗ ನಾವು ಹೇಳಹೊರಟಿರುವ ಕಲ್ಲು ಹೂವಿನ ಕಥೆಗೂ ಎಲ್ಲೋ ಒಂದೆಡೆ ಸಂಬಂಧವಿರಬಹುದೇನೋ. ಕಲ್ಲು ಹೂವು ಹೆಸರೇ ವಿರೋಧಾಭಾಸವಾಗಿದೆ. ಕಲ್ಲು–ಗಟ್ಟಿ ಹೂವು–ಮೃದು. ಹೆಸರಿನಷ್ಟೆ ವಿಶೇಷ ಅದರ ರಚನೆ, ಬೆಳವಣಿಗೆ ಮತ್ತು ವಿಕಸನದಲ್ಲಿ ಅಡಗಿದೆ. ಬನ್ನಿ, ಕಲ್ಲು ಹೂವುಗಳ ಬಗ್ಗೆ ಅರಿಯಲು ಚಿಕ್ಕದೊಂದು ಪ್ರಯತ್ನ ಮಾಡೋಣ.

ಪುರಾತನ ಸ್ಮಾರಕ, ಹಳೆಯ ಕಟ್ಟಡ, ಕಲ್ಲುಬಂಡೆಗಳು ಹಾಗೂ ಕಾಡಿನಲ್ಲಿರುವ ಮರಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅವುಗಳ ಮೇಲೆ ಕಪ್ಪು, ಬಿಳಿ, ಹಸಿರು, ಕಂದು ಮತ್ತು ಹಳದಿ ಬಣ್ಣದ ಚಿಕ್ಕ ಸಸ್ಯಗಳನ್ನು ಕಾಣುತ್ತೇವೆ. ಈ ಎಲ್ಲಾ ಸಸ್ಯಗಳು ಒಂದೇ ಜಾತಿಯ ಸಸ್ಯಗಳಲ್ಲ. ಇವುಗಳಲ್ಲಿ ಪಾಚಿ, ಶಿಲೀಂಧ್ರ, ಹಾವಸೆ ಮತ್ತು ಇತರೆ ಜಾತಿಯ ಸಸ್ಯಗಳಿರುತ್ತವೆ. ಈ ಪೈಕಿ ಕಾಣುವ ಸಸ್ಯವರ್ಗಗಳಲ್ಲಿ ಕಲ್ಲು ಹೂವು ಸಹ ಒಂದು.

ಕಲ್ಲು ಹೂವಿನ ದೇಹಕ್ಕೆ ಥ್ಯಾಲಸ್ ಎಂದು ಹೆಸರು ಹಾಗೂ ಯಾವ ವಸ್ತುವಿನ ಮೇಲೆ ಅದು ಬೆಳೆಯುತ್ತದೆಯೋ ಆ ವಸ್ತು ಅದಕ್ಕೆ ತಳಹದಿ ಎನ್ನಬಹುದು. ಥ್ಯಾಲಸ್ ಎಂದರೆ ಬೇರು, ತಾಳು, ಎಲೆ ಮೊದಲಾದ ಬೇರ್ಪಾಟುಗಳಿಲ್ಲದ ಸಸ್ಯ. ಕಲ್ಲು ಹೂವಿನ ಥ್ಯಾಲಸ್‌ನಲ್ಲಿನ ಶಿಲೀಂಧ್ರವನ್ನು ಮೈಕೊಬಯಾಂಟ್ ಎಂತಲೂ, ಪಾಚಿಯನ್ನು ಪೈಕೊಬಯಾಂಟ್ ಅಥವಾ ಫೋಟೋಬಯಾಂಟ್ ಎಂದೂ ಮತ್ತು ನೀಲಿ ಹಸಿರು ಬ್ಯಾಕ್ಟೀರಿಯವನ್ನು ಸಯನೋಬಯಾಂಟ್ ಎಂದೂ ಕರೆಯಬಹುದು.

ಸ್ಮಾರಕಗಳ ಮೇಲಿರುವ ಕಲ್ಲು ಹೂವುಗಳು ಸ್ಮಾರಕಗಳಿಗೆ ಹಾನಿಕಾರಕ ವಾಗಿವೆ. ಶಿಲೀಂಧ್ರದ ತಂತುಗಳು ತಳಹದಿಯೊಳಗೆ ೦.೬ ಮಿ.ಮೀ.ನಿಂದ ೧೬ ಮಿ.ಮೀ.ವರೆಗೂ ಒಳಹೊಕ್ಕುವ ಸಾಮರ್ಥ್ಯ ಹೊಂದಿವೆ. ಕಲ್ಲು ಹೂವಿನ ಆಮ್ಲಗಳಾದ ಇಂಗಾಲದ ಡೈಆಕ್ಸೈಡ್ ಕಲ್ಲು ಹೂವಿನ ಆಮ್ಲ, ಆಕ್ಸಾಲಿಕ್ ಆಮ್ಲಗಳು ತಳಹದಿಗೆ ಹಾನಿಯನ್ನುಂಟುಮಾಡುತ್ತವೆ.

ಕಲ್ಲು ಹೂವು ನೋಡಲು ಜೀವಿಯ ತರಹ ಕಂಡರೂ, ಅದು ನಿಜವಾಗಿ ಎರಡು ಜೀವಿಗಳ ಸಮಾಗಮದ ಒಂದು "ಸಂಯೋಗ ಜೀವಿ" ಸಸ್ಯ. ಆಹಾರಕ್ಕಾಗಿ ಇತರರನ್ನು ಅವಲಂಬಿಸಿರುವ ಪರಾವಲಂಬಿ ಶಿಲೀಂಧ್ರವು ತನ್ನ ಆಹಾರವನ್ನು ಸ್ವಯಂ ತಯಾರಿಸಬಲ್ಲ ಪಾಚಿಯ ಜೊತೆ ಸ್ಥಿರವಾದ ಸ್ನೇಹ ಬೆಳಸಿ ಕಲ್ಲು ಹೂವಾಗುತ್ತದೆ. ಇಲ್ಲಿ ಗಮನಿಸಬೇಕಾದ ಅಂಶವೇನೆಂದರೆ ಶಿಲೀಂಧ್ರ ಮತ್ತು ಪಾಚಿ ಒಮ್ಮೆ ಜೊತೆಯಾದ ನಂತರ ಅವುಗಳ ಸ್ವಭಾವವನ್ನು ತೊರೆದು ಒಂದೇ ಜೀವಿಯ ತರಹ ವರ್ತಿಸುತ್ತವೆ.

ಕಲ್ಲು ಹೂವುಗಳನ್ನು ಅವುಗಳ ಸ್ವರೂಪದ ಆಧಾರದ ಮೇಲೆ ಮುಖ್ಯವಾಗಿ ಮೂರು ವಿಧಗಳಾಗಿ ವಿಂಗಡಿಸಿದ್ದಾರೆ: ೧) ಕ್ರಸ್ಟೋಸ್, ೨) ಫೋಲಿಯೋಸ್, ೩) ಫ್ರುಟಿಕೋಸ್. ಇವಲ್ಲದೆ ಇನ್ನೂ ಅನೇಕ ಮಧ್ಯಂತರ ರೂಪದ ಕಲ್ಲು ಹೂವುಗಳು ಕಂಡುಬರುತ್ತವೆ.

ಕ್ರಸ್ಟೋಸ್ ರೂಪದ ಥ್ಯಾಲಸ್ ತಳಹದಿಗೆ ಗಟ್ಟಿಯಾಗಿ ಅಂಟಿಕೊಂಡಿರುತ್ತದೆ. ಫೋಲಿಯೋಸ್ ರೂಪದ ಥ್ಯಾಲಸ್ ಎಲೆಯಾಕಾರದ್ದಾಗಿದ್ದು, ತಳಹದಿಗೆ ಬಿಡಿಯಾಗಿ ಅಂಟಿಕೊಂಡಿರುತ್ತದೆ. ಫ್ರುಟಿಕೋಸ್ ತಂತುವಿನಾಕಾರದ ಥ್ಯಾಲಸ್ ತಳಹದಿಗೆ ಒಂದು ಅಂಕುರದಲ್ಲಿ ಮಾತ್ರ ಅಂಟಿಕೊಂಡಿದ್ದು, ಉಳಿದ ಭಾಗ ಕೆಳಮುಖವಾಗಿ ಜೋತಾಡುತ್ತಿರುತ್ತದೆ. ಪ್ರಪಂಚದಲ್ಲಿ ಒಟ್ಟು ಇಂತಹ ೨೦,೦೦೦ ಪ್ರಜಾತಿಯ ಕಲ್ಲು ಹೂವುಗಳನ್ನು ಪತ್ತೆ ಹಚ್ಚಲಾಗಿದೆ. ಭಾರತದಲ್ಲಿ ಒಟ್ಟು ೨,೩೩೦ ಪ್ರಜಾತಿ ಗಳಿದ್ದು ಕರ್ನಾಟಕದಲ್ಲಿ ೪೨೫ ಪ್ರಜಾತಿಯ ಕಲ್ಲು ಹೂವುಗಳನ್ನು ದಾಖಲಿಸ ಲಾಗಿದೆ. ಕಲ್ಲು ಹೂವುಗಳ ಉಪಯೋಗ ಅನೇಕ ಬಗೆಗಳಲ್ಲಿ ಮಾನವನಿಗೆ ಲಭಿಸಿದೆ. ಕಲ್ಲು ಹೂವುಗಳು ಪರಿಸರ ಬದಲಾವಣೆ ಮತ್ತು ವಾಯುಮಾಲಿನ್ಯಕ್ಕೆ ಸೂಕ್ಷ್ಮವಾಗಿ ಪ್ರತಿಕ್ರಿಯಿಸುವುದರಿಂದ ಇವುಗಳನ್ನು 'ಮಾಲಿನ್ಯ ಸೂಚಕ'ವಾಗಿ ಉಪಯೋಗಿಸಲಾಗುತ್ತದೆ. ಕೆಲವೊಂದು ಕಲ್ಲು ಹೂವುಗಳು ಔಷಧೀಯ ಗುಣಗಳನ್ನು ಹೊಂದಿವೆ. ಹಿಂದಿನ ಕಾಲದಲ್ಲಿ ಆಮ್ಲ–ಲವಣ ಸೂಚಕ ಕಾಗದವನ್ನು ಕಲ್ಲು ಹೂವುಗಳಿಂದ ತಯಾರಿಸಲಾಗುತಿತ್ತು. ಅಲ್ಲದೆ ನಾವು ದಿನನಿತ್ಯ ಬಳಸುವ ಸಂಬಾರ ಅಥವಾ ಮಸಾಲೆ ಪದಾರ್ಥಗಳಲ್ಲೂ ಕಲ್ಲು ಹೂಗಳ ಬೆರಕೆಯನ್ನು ಕಾಣಬಹುದು.



*ಚಿತ್ರದುರ್ಗದ ಕಲ್ಲಿನ ಕೋಟೆಯಲ್ಲಿ ಕಂಡುಬಂದ ಕಲ್ಲು ಹೂವು*

**ಕಲ್ಲು ಹೂವಿನ ಇತಿಹಾಸ ಮತ್ತು ಬೆಳವಣಿಗೆ**

ಸಸ್ಯಶಾಸ್ತ್ರದ ಪಿತಾಮಹ ಥಿಯೋಪ್ರಾಸ್ಟಸ್ (ಕ್ರಿ. ಪೂ. ೩೭೦–೨೮೫) ಪ್ರಥಮ ಬಾರಿಗೆ 'ಲೈಕೆನ್' ಪದವನ್ನು ಬಳಸಿದ್ದಾರೆ. ಗ್ರೀಕ್ ಭಾಷೆಯಲ್ಲಿ ಲೈಕೆನ್ ಎಂದರೆ ಆಲೀವ್ ಮರದ ಮೇಲಿನ ಬಾಹ್ಯ ಬೆಳವಣಿಗೆ ಎಂದರ್ಥ. ಕ್ರಿ. ಶ. ೧೭೦೦ರಲ್ಲಿ ಟೋರ್ನೆ ಪೊರ್ಟ ಕಲ್ಲು ಹೂವು ಸಸ್ಯ ಪ್ರಭೇದದ ಒಂದು ಜಾತಿ ಎಂದು ಪ್ರತಿಪಾದಿಸಿದ. ಕಲ್ಲು ಹೂವಿನ ದೇಹದಲ್ಲಿ ಪಾಚಿ ಮತ್ತು ಶಿಲೀಂಧ್ರಗಳ ಇರುವಿಕೆಯನ್ನು ೧೮೬೭ರಲ್ಲಿ ಸ್ವಿಟ್ಜರ್ಲೆಂಡ್‌ನ ಸಸ್ಯಶಾಸ್ತ್ರಜ್ಞ ಸೈಮನ್ ಸ್ಕ್ವೆಂಡ್ನರ್ ಪ್ರಥಮ ಬಾರಿಗೆ ಪ್ರತಿಪಾದಿಸಿದ. ಈತನ ಪ್ರಕಾರ ಶಿಲೀಂಧ್ರವು ಪಾಚಿಯ ಪರಾವಲಂಬಿಯಾಗಿದೆ, ಆದರೆ ಕಲ್ಲು ಹೂವಿನ ರೂಪ, ಬೆಳವಣಿಗೆ, ಪ್ರಜನನ, ಶರೀರಶಾಸ್ತ್ರ ಮತ್ತು ದೀರ್ಘಾಯು ಗುಣಗಳು ಈ ವಾದವನ್ನು ಅಸಮರ್ಥಿಸಿದವು. ತದನಂತರದಲ್ಲಿ ಕಲ್ಲು ಹೂವಿನಲ್ಲಿನ ಪಾಚಿ ಮತ್ತು ಶಿಲೀಂಧ್ರಗಳ ನಡುವಿನ ವ್ಯವಸ್ಥೆಯ ಬಗ್ಗೆ ಬಹಳಷ್ಟು ತರ್ಕಗಳು ಕೇಳಿ ಬಂದವು, ಅವುಗಳಲ್ಲಿ, ಎರಡು ಜೀವಿಗಳು (ಪಾಚಿ ಮತ್ತು ಶಿಲೀಂಧ್ರ) ಪರಸ್ಪರ ತಮ್ಮ ಉಪಯೋಗಕ್ಕಾಗಿ ಅನ್ಯೋನ್ಯವಾಗಿ ಬದುಕುತ್ತವೆ ಮತ್ತು ಈ ಸಂಬಂಧವನ್ನು ಅನ್ಯೋನ್ಯ ಸಂಬಂಧ ಎಂದು ರೇಯಿನ್ಕಿ ೧೮೭೨ರಲ್ಲಿ ಪ್ರತಿಪಾದಿಸಿದ. ನಂತರ ಡಿ ಬಾರಿ ೧೮೭೯ರಲ್ಲಿ ಸಹಜೀವನ ಎಂಬ ಪದವನ್ನು ಕಲ್ಲು ಹೂವುಗಳ ಸಹಜೀವಿಗಳ ಸಂಬಂಧವನ್ನು ತಿಳಿಸಲು ಬಳಸಿದ. ಈತನ ಪ್ರಕಾರ ಈ ಸಂಬಂಧವು ಎರಡು ಜೀವಿಗಳು ಅನುಕೂಲಕರವಾಗಿದ್ದು, ಅನುಕೂಲತೆಯ ಪ್ರಮಾಣವು ಸಮಾನವಾಗಿರಬೇಕೆಂದಿಲ್ಲ ಎಂದು ಪ್ರತಿಪಾದಿಸಿದ. ೧೯೦೨ರಲ್ಲಿ ಎಲೆನ್ಕಿನ್‌ನು ಕಲ್ಲು ಹೂವುಗಳು ಭಿನ್ನ ಜೀವಿಗಳ ಜೀವನವನ್ನು ಪರಾವಲಂಬಿ ಅಥವಾ ಸತ್ತ ಜೀವಿಯ ಮೇಲೆ ಬೆಳೆಯುವ ಸಂಬಂಧವೆಂದು ಅದಕ್ಕೆ ಪೂರಕವಾಗಿ ಸತ್ತಂತಹ ಪಾಚಿಯ ಕೋಶಗಳು ಕಲ್ಲು ಹೂವಿನ ದೇಹದಲ್ಲಿ ಯಾವಾಗಲೂ ಇರುತ್ತವೆಂದು ಪ್ರತಿಪಾದಿಸಿದ. ೧೯೧೦ರಲ್ಲಿ ಡಾನಿಲೋವ್‌ನು ಶಿಲೀಂಧ್ರದ ಆಹಾರ ಸ್ವೀಕರಿಸುವ ಕೊಳವೆಗಳು ಪಾಚಿಯ ಕೋಶಗಳಲ್ಲಿ ಇರುವುದನ್ನು ತೋರಿಸಿ ಪರಾವಲಂಬಿ ವ್ಯವಸ್ಥೆಗೆ ಸಾಕ್ಷ್ಯ ಒದಗಿಸಿದ. ೧೯೧೬ರಲ್ಲಿ ನಿಯನ್ ಬರ್ಗ್ ಪಾಚಿಯು ಶಿಲೀಂಧ್ರದಿಂದ ಉಪಕಾರ ಪಡೆದುಕೊಳ್ಳುತ್ತದೆ ಹಾಗೂ ಹಾನಿಯನ್ನು ಅನುಭವಿಸುತ್ತದೆ; ಈ ಕಾರಣದಿಂದಾಗಿ ಕಲ್ಲು ಹೂವಿನಲ್ಲಿ ಒಡೆಯ ಮತ್ತು ಸೇವಕ ರೀತಿಯ ವ್ಯವಸ್ಥೆಯನ್ನು ಕಾಣಬಹುದು ಎನ್ನುತ್ತಾನೆ.

ಇಷ್ಟೇ ಅಲ್ಲದೆ, ಮೋರೆ, ಕ್ಲೆಮೆಂಟ್ ಮತ್ತು ಶೀರ್ ಎಂಬ ವಿಜ್ಞಾನಿಗಳು ಪರಾವಲಂಬಿ ವ್ಯವಸ್ಥೆಯನ್ನು ಎತ್ತಿ ಹಿಡಿದರೆ ಅಹಮ್ಮದಿಯನ್ ಮತ್ತು ಜಾಕೋಬ್‌ರು ನಿರ್ಬಂಧಿತ ಅಥವಾ 'ಸುಧಾರಿತ ಪರಾವಲಂಬಿ ವ್ಯವಸ್ಥೆ' ಎಂದು ಪ್ರತಿಪಾದಿಸಿದರು. ಪರಾವಲಂಬಿ ಶಿಲೀಂಧ್ರವು ಪಾಚಿಗೆ ಸಂಪೂರ್ಣವಾಗಿ ಹಾನಿ ಮಾಡದೆ ಸುಧಾರಿತ ರೀತಿಯಲ್ಲಿ ಸುಧಾರಿತ ಕಲ್ಲು ಹೂವಿನ ದೇಹದ ಬೆಳವಣಿಗೆಯನ್ನು ಕಾಪಾಡುತ್ತದೆ ಎಂಬುದು ಈ ವ್ಯವಸ್ಥೆಯ ಅಂಶವಾಗಿದೆ. ಆದಾಗ್ಯೂ, ಸಹಜೀವನ ಪದವನ್ನು ಕಲ್ಲು ಹೂವಿನಲ್ಲಿನ ಜೀವಿಗಳ ಸಂಬಂಧವನ್ನು ತಿಳಿಸಲು ಸರ್ವೇಸಾಮಾನ್ಯವಾಗಿ ಬಳಸುತ್ತಾರೆ.

ಶರೀರಶಾಸ್ತ್ರದ ಅಧ್ಯಯನವನ್ನು ಆಧಾರವಾಗಿಟ್ಟುಕೊಂಡು ಕ್ವಿಸ್ಪೆಲ್ ೧೯೧೫ರಲ್ಲಿ ಕಲ್ಲು ಹೂವಿನ ಸಹಜೀವನ ಸಿದ್ಧಾಂತವನ್ನು ಪ್ರಚುರಪಡಿಸಿದನು, ನಂತರ ಬೇರೆ ವಿಜ್ಞಾನಿಗಳು ಸಹ ಈ ವಾದಕ್ಕೆ ಒತ್ತುಕೊಟ್ಟರು. ಈ ಸಿದ್ಧಾಂತದ ಪ್ರಕಾರ ಪಾಚಿಯು ವಾತಾವರಣದಲ್ಲಿನ ತೇವಾಂಶ ಮತ್ತು ಇಂಗಾಲದ ಡೈಆಕ್ಸೈಡ್ ಅನಿಲವನ್ನು ಶಿಲೀಂಧ್ರದ ಕೋಶಗಳ ಮೂಲಕ ಹೀರಿಕೊಳ್ಳುತ್ತದೆ. ಅಲ್ಲದೆ, ಶಿಲೀಂಧ್ರವು ಪಾಚಿಗೆ ಅನಾವೃಷ್ಟಿಯಂತಹ ಸಂದರ್ಭ, ಸಾರಜನಕದ ಚರಟ ಮತ್ತು ಆಸ್ಕಾರ್ಬಿಕ್ ಆಮ್ಲದಿಂದ ರಕ್ಷಣೆ ನೀಡುತ್ತದೆ. ಶಿಲೀಂಧ್ರವು ಪರಾವಲಂಬಿಯಾಗಿದ್ದು ಆಹಾರವನ್ನು ಪಾಚಿಯಿಂದ ಪಡೆಯುತ್ತದೆ, ಪಾಚಿಯು ಇದೇ ರೀತಿ ವಿಟಮಿನ್‌ಗಳನ್ನು ಶಿಲೀಂಧ್ರದಿಂದ ಪಡೆಯುತ್ತದೆ. ಈ ಕಾರಣದಿಂದ ಕಲ್ಲು ಹೂವಿನ ಬೆಳವಣಿಗೆ ತುಂಬಾ ನಿಧಾನಗತಿಯದ್ದಾಗಿದೆ ಹಾಗೂ ಶಿಲೀಂಧ್ರ ಮತ್ತು ಪಾಚಿಯ ನಡುವೆ ಸಮತೋಲಿತ ರೀತಿಯಲ್ಲಿ ಆಹಾರ ಮತ್ತು ಪೋಷಕಾಂಶಗಳ ವಿನಿಮಯ ನಡೆಯುತ್ತದೆ ಎಂದು ಅಧ್ಯಯನಕಾರರು ತಿಳಿಸಿದ್ದಾರೆ.

**ಕಲ್ಲು ಹೂವಿನ ವಿಕಸನ**

ಕಲ್ಲು ಹೂವಿನ ಅಸ್ತಿತ್ವ ಪ್ರಾಚೀನ ಕಾಲದ್ದಾಗಿದ್ದು, ಇಂದಿಗೂ ಕಂಡುಬರುವ ಸಸ್ಯವರ್ಗವಾಗಿದೆ. ಪಳೆಯುಳಿಕೆಗಳ ಲಭ್ಯತೆಯನ್ನು ಗಮನಿಸಿದಾಗ ಕಲ್ಲು ಹೂವಿನ ದಾಖಲೆ ವಿರಳವೆನಿಸಿದರೂ ಸಹ ದಾಖಲಾರ್ಹವಾಗಿದೆ. ಕಲ್ಲು ಹೂವಿನ ಉಪ ಅಥವಾ ಕೆಳ ಪಳೆಯುಳಿಕೆಗಳನ್ನು ಹಿಮ ಪ್ರವಾಹ, ಜೌಗು ಪ್ರದೇಶ ಮತ್ತು ಇತರೆ ಮೂಲಗಳಿಂದ ತೆಗೆಯಲಾಗಿದೆ. ಇದು ಕಲ್ಲು ಹೂವುಗಳ ಪ್ರಾಚೀನ ಇರುವಿಕೆಯನ್ನು ಸ್ಪಷ್ಟಪಡಿಸುತ್ತದೆ. ಆದಾಗ್ಯೂ ಅವು ಕೇವಲ ಹತ್ತು ಸಾವಿರ ವರ್ಷಗಳ ಹಿಂದಿನವಷ್ಟೇ ಹೊರತು ಮಿಲಿಯ ವರ್ಷಗಳಷ್ಟು ಹಿಂದಿನವಲ್ಲ ಎಂದು ವಿಜ್ಞಾನಿಗಳು ಅಂದಾಜಿಸಿದ್ದರು.

ಕಲ್ಲು ಹೂವುಗಳು ನಿರ್ಲಿಂಗ ರೀತಿಯ ಪ್ರಜನನಾಂಗಗಳನ್ನು ಹೊಂದಿರದಿದ್ದರೂ ಅವು ಬಹು ದೂರದವರೆಗೂ ಅಂದರೆ ಪ್ರಪಂಚದ ವಿವಿಧ ಭಾಗಗಳಲ್ಲಿ ಚದುರಿರುವುದನ್ನು ಗಮನಿಸಿದಾಗ ಕಲ್ಲು ಹೂವುಗಳು ೨೫೦ ಮಿಲಿಯನ್ ವರ್ಷಗಳ ಹಿಂದೆ ಘಟಿಸಿದಂತಹ ಖಂಡಾಂತರ ಚದುರುವಿಕೆ ಪ್ರಕ್ರಿಯೆಯಲ್ಲಿ ವಿವಿಧ ಭಾಗಗಳಲ್ಲಿ ಚದುರಿರಬಹುದಾಗಿದೆ. ಡೇವಿಡ್ ಜೆ. ಹಿಲ್ ೨೦೦೯ರ ತನ್ನ ಪ್ರಬಂಧದಲ್ಲಿ ಕಲ್ಲು ಹೂವಿನ ಸಹ ಜೀವಿಗಳಾದ ಪಾಚಿ ಮತ್ತು ಶಿಲೀಂಧ್ರಗಳಲ್ಲಿ ಪಾಚಿಯು ಶಿಲೀಂಧ್ರಕ್ಕೆ ಹೋಲಿಸಿದರೆ ಕಲ್ಲು ಹೂವಾಗುವ ಪ್ರಕ್ರಿಯೆಯಲ್ಲಿ ಸೀಮಿತ ವಿಕಸನ ಸಾಮರ್ಥ್ಯ ಹೊಂದಿದೆ ಎಂದು ಅದಕ್ಕೆ ಕಾರಣ ಡಾರ್ವಿನ್‌ನ ಸ್ವಾಭಾವಿಕ ಆಯ್ಕೆಯಂತೆ ಪಾಚಿಯ ಕೋಶಗಳ ಆಯ್ಕೆ ಒಂದು ಕಲ್ಲು ಹೂವಿಗಿಂತ ಬೇರೆಯೊಂದಕ್ಕೆ ಅನುಕ್ರಮ ಆಯ್ಕೆಯನ್ನು ಹೊಂದಿಲ್ಲದಿರುವುದು ಮತ್ತು ಕಲ್ಲು ಹೂವಿನಲ್ಲಿನ ಪಾಚಿಯು ಲಿಂಗ ರೀತಿಯ ಪ್ರಜನನ ಕ್ರಿಯೆ ತೋರದಿರುವುದು ಆಗಿದೆ ಎಂದು ಹೇಳಿರುತ್ತಾನೆ.

ಡೇನಿಯಲ್ ಹೆಕ್‌ಮನ್ ಎಂಬ ವಿಜ್ಞಾನಿಯು ೨೦೦೧ರ ಸೈನ್ಸ್ ನಿಯತಕಾಲಿಕದಲ್ಲಿ, ಭೂಮಿಯ ಮೇಲೆ ಯುಕ್ಯಾರಿಯೋಟ್‌ಗಳ ಉಗಮವಾಗಲು ಸಮಾಗಮ ಜೀವಿಗಳ ಪಾತ್ರ ಹಿರಿದು. ಇದರಲ್ಲಿ ತನ್ನ ಆಹಾರವನ್ನು ತಾನೇ ತಯಾರಿಸುವ ಪಾಚಿ ಮತ್ತು ಪಾಚಿಯ ಮೇಲೆ ಆಹಾರಕ್ಕೆ ಅವಲಂಬಿತವಾದ ಶಿಲೀಂಧ್ರಗಳಿಂದ ಆಗಿದೆ. ಆದಾಗ್ಯೂ ಕಲ್ಲು ಹೂವು ಅಥವಾ ಸಮಾಗಮ ಜೀವಿಗಳ ಉಗಮ ಮತ್ತು ವಾತಾವರಣಕ್ಕೆ ಹೊಂದಿಕೊಂಡ ಸಮಯ ನಿಖರವಾಗಿ ತಿಳಿದುಬಂದಿಲ್ಲ. ನೆಲದ ಮೇಲಿನ ಶಿಲೀಂಧ್ರ ಮತ್ತು ಸಸ್ಯಗಳ ಪಳೆಯುಳಿಕೆ ಕಂಡುಬಂದಿರುವುದು ೪೮೦ರಿಂದ ೪೬೦ ಮಿಲಿಯ ವರ್ಷಗಳ ಹಿಂದೆ ಎಂಬ ಮಾಹಿತಿ ಲಭ್ಯವಿದೆ. ಅಣ್ವಿಕ ಅಧ್ಯಯನದ ಪ್ರಕಾರ ನೆಲದ ಮೇಲಿನ ಜೀವಿಗಳ ಉಗಮವಾಗಿದ್ದು ೬೦೦ ಮಿಲಿಯ ವರ್ಷಗಳ ಹಿಂದೆ. ಸಾರಜನಕದ ಸಂರಚನೆಯ ಅಧ್ಯಯನವು ಪಾಚಿ ಮತ್ತು ಶಿಲೀಂಧ್ರಗಳು ೧೦೦೦ ಮಿಲಿಯನ್ ವರ್ಷಗಳಷ್ಟು ಹಿಂದಿನದಾಗಿದ್ದು, ನೆಲದ ಮೇಲಿನ ಸಸ್ಯಗಳು ೭೦೦ ಮಿಲಿಯನ್ ವರ್ಷಗಳಷ್ಟು ಹಿಂದಿನದಾಗಿವೆ. ಅಂದರೆ ಕಲ್ಲು ಹೂವಿನ ಪಾಚಿ ಮತ್ತು ಶಿಲೀಂಧ್ರಗಳ ಹೊಂದಾಣಿಕೆಯು ಬಲು ಹಳೆಯದೆಂದು ಈ ಲೇಖನ ದೃಢಪಡಿಸುತ್ತದೆ.

ಲುಟ್ಜೋನಿ ಮತ್ತವರ ಗುಂಪು ನೇಚರ್ ಪತ್ರಿಕೆಯ ಲೇಖನದಲ್ಲಿ, ಶಿಲೀಂಧ್ರ ಜಾತಿಗಳಲ್ಲಿ ಐದನೇ ಒಂದು ಭಾಗದಷ್ಟು ಶಿಲೀಂಧ್ರಗಳು ಹಸಿರು ಪಾಚಿ, ನೀಲಿ ಹಸಿರು ಬ್ಯಾಕ್ಟೀರಿಯ (ಸಯನೋಬ್ಯಾಕ್ಟೀರಿಯ) ಅಥವಾ ಎರಡರ ಜೊತೆಯಲ್ಲೂ ಇರುವಂತಹದ್ದು. ಈ ಸಂಬಂಧವನ್ನು ಕಲ್ಲು ಹೂವುಗಳೆಂದು ಮತ್ತು ಈ ರೀತಿಯ ಸಂಬಂಧಕ್ಕೆ ಪ್ರಮುಖವಾದ ಕಾರಣ ಶಿಲೀಂಧ್ರವು ತನ್ನ ಆಹಾರವನ್ನು

ಪಡೆದುಕೊಳ್ಳುವುದೇ ಆಗಿದೆ. ಅಲ್ಲದೆ ಕಲ್ಲು ಹೂವುಗಳ ಉಗಮವು ಬಹಳಷ್ಟು ಸಂದರ್ಭಗಳಲ್ಲಿ ಅನಿರ್ಬಂಧಿತ ರೀತಿಯಲ್ಲಿಯದಾಗಿದ್ದು ಇದಕ್ಕೆ ಪೂರಕವಾಗಿ ಆಸ್ಕೋಮೈಸಿಟಿಸ್‌ನ ಕುಟುಂಬದಲ್ಲಿ ಕಲ್ಲು ಹೂವಾಗುವ ಪ್ರಕ್ರಿಯೆಯಲ್ಲಿ ಭಾಗವಹಿಸುವ ಮತ್ತು ಭಾಗವಹಿಸದ ಹಾಗೂ ಈ ಎರಡರ ಮಿಶ್ರಿತವಾದ ಶಿಲೀಂಧ್ರಗಳನ್ನು ಕಾಣಬಹುದು. ಆಸ್ಕೋಮೈಕೋಟಾದ ಜೀವ ವರ್ಗೀಕರಣದ ತುಲನಾತ್ಮಕ ವಿಶ್ಲೇಷಣಾಧ್ಯಯನದಲ್ಲಿ ಈ ವರ್ಗವು ಪ್ರತಿಶತ ೯೮ರಷ್ಟು ಕಲ್ಲು ಹೂವಾಗುವ ಶಿಲೀಂಧ್ರಗಳನ್ನು ಹೊಂದಿದೆ ಎಂಬುದು ತಿಳಿದುಬಂದಿರುತ್ತದೆ.

ಬಯಾಸಿಯನ್ ಜಾತಿ ವಿಕಸನೀಯ ಮರದ ಮಾದರಿ ಮತ್ತು ವಿಕಾಸದ ಸಂಖ್ಯಾಶಾಸ್ತ್ರದ ಮಾದರಿ ವಿಧಾನವನ್ನು ಬಳಸಿ ಮಾಡಿದ ಅಧ್ಯಯನದಲ್ಲಿ ಜಾತಿ ವಿಕಸನೀಯ ಮರ ಮತ್ತು ಪೂರ್ವಜರ ಪುನಾರಚನೆಯ ಅಂಶಗಳ ಅನಿಶ್ಚಿತತೆಯನ್ನು ಸಹ ಗಣನೆಗೆ ತೆಗೆದುಕೊಂಡಿದ್ದಾರೆ. ಈ ಎಲ್ಲಾ ಫಲಿತಾಂಶಗಳು ಕಲ್ಲು ಹೂವುಗಳ ವಿಕಸನ ಈಗ ತಿಳಿದಿರುವುದಕ್ಕಿಂತ ಹಿಂದೆ ಆಗಿದೆ ಎಂಬುದನ್ನು ತೋರಿಸುತ್ತದೆ. ಅಲ್ಲದೆ, ಕಲ್ಲು ಹೂವಾಗುವಿಕೆಯು ಆಸ್ಕೋಮೈಕೋಟಾದ ವಿಕಸನದಲ್ಲಿ ಅತೀ ವಿರಳವಾಗಿದೆ. ಆದರೆ ಕಲ್ಲು ಹೂವಿನ ಸಹಜೀವನದಲ್ಲಿ ಅದು ಅನೇಕ ಸ್ವಂತ ನಷ್ಟಗಳನ್ನು ಅನುಭವಿಸಿದೆ, ಇದೆಲ್ಲದರ ಪರಿಣಾಮವಾಗಿ ಆಸ್ಕೋಮೈಕೋಟಾದ ವಂಶಾವಳಿಯಲ್ಲಿ ಪ್ರಮುಖವಾಗಿ ಕಲ್ಲು ಹೂವಾಗುವ ಪ್ರಕ್ರಿಯೆಯಲ್ಲಿ ಭಾಗಿಯಾಗದ ಶಿಲೀಂಧ್ರ ಜಾತಿಗಳು ಕಲ್ಲು ಹೂವಾಗುವ ಶಿಲೀಂಧ್ರ ಜಾತಿಗಳಿಂದ ಜನ್ಯವಾಗಿವೆ. ಈ ವರ್ಗವು ಮುಖ್ಯವಾಗಿ ಮಾನವರಿಗೆ ಅನುಕೂಲ ಮತ್ತು ತೊಂದರೆಗಳನ್ನು ಕೊಡುವ ಪೆನಿಸಿಲ್ಲಿಯಮ್ ಮತ್ತು ಅಸ್ಪರ್ಜಿಲ್ಲಸ್‌ಗಳನ್ನು ಸಹ ಒಳಗೊಂಡಿದೆ.

ಕ್ಸುನ್ಲಾಯ್ ಯಾನ್ ಮತ್ತು ಸಂಗಡಿಗರು ಕಲ್ಲು ಹೂವುಗಳನ್ನು ಹೋಲುವ ಪಳೆಯುಳಿಕೆಗಳನ್ನು ದಕ್ಷಿಣ ಚೀನಾದ ವೆನ್ಶಾಗ್‌ನಲ್ಲಿ ಅನ್ವೇಷಿಸಿದ್ದಾರೆ. ಇವು ಭೂಮಿಯ ಉಗಮದ ವಿವಿಧ ಹಂತಗಳಲ್ಲಿ ಒಂದಾದ ದುಶಾಂತೋ ಸಂದರ್ಭದಲ್ಲಿ, ಅಂದರೆ ಸುಮಾರು ೫೫೧ರಿಂದ ೬೩೫ ಮಿಲಿಯ ವರ್ಷಗಳ ಮಧ್ಯದಲ್ಲಿ ಇದ್ದಿರಬಹುದೆಂದು ಅಂದಾಜಿಸಲಾಗಿದೆ. ಈ ಪಳೆಯುಳಿಕೆಗಳನ್ನು ಅಭ್ಯಸಿಸಿದಾಗ ಅವುಗಳಲ್ಲಿ ಶಿಲೀಂಧ್ರದ ತಂತುಗಳು ದುಂಡನೆಯ ಪಾಚಿ ಅಥವಾ ಸಯನೋ ಬ್ಯಾಕ್ಟೀರಿಯದ ಜೊತೆ ನಿಕಟವಾದ ಸಂಬಂಧವನ್ನು ಹೊಂದಿರುವುದು ತಿಳಿದು ಬರುತ್ತದೆ. ಈ ಅಧ್ಯಯನದಿಂದ ರಸನಾಳಗಳನ್ನೊಳಗೊಂಡ ಸಸ್ಯಗಳ ವಿಕಸನಕ್ಕೂ ಮೊದಲೇ ಶಿಲೀಂಧ್ರವು ತನ್ನ ಆಹಾರವನ್ನು ತಯಾರಿಸುವ ಜೀವಿಗಳೊಡನೆ ಸಹ ಜೀವನದೊಂದಿಗೆ ಬೆಸೆದುಕೊಂಡಿದೆ ಎಂದು ತಿಳಿದುಬರುತ್ತದೆ.

ಕಲ್ಲು ಹೂವುಗಳನ್ನು ಹೋಲುವ ಪಳೆಯುಳಿಕೆಗಳು ನಿಕಟವಾಗಿ ಜೊತೆಯಾದಂತಹ ದುಂಡನೆಯ ಕೋಶ (ಪಾಚಿ ಅಥವಾ ಸಯನೋಬ್ಯಾಕ್ಟೀರಿಯ) ಮತ್ತು ತೆಳುವಾದ ಎಳೆಯಂತಹ ಶಿಲೀಂಧ್ರಗಳನ್ನು ಹೊಂದಿವೆ. ದುಂಡನೆಯ ಕೋಶಗಳು ಸುಮಾರು ೬–೧೫ ಮೈಕ್ರೋಮೀಟರ್ ವ್ಯಾಸವನ್ನು ಹೊಂದಿದ್ದು ಗುಂಪಾಗಿ ಕಂಡು ಬಂದಿವೆ. ಈ ಕೋಶಗಳ ಮೇಲೆ ಕವಚವು ಕಂಡುಬಂದಿದ್ದು ಅದು ಸಾಮಾನ್ಯವಾಗಿ ಸಯನೋಬ್ಯಾಕ್ಟೀರಿಯ ಅಥವಾ ಪಾಚಿಯ ಕವಚವನ್ನು ಹೋಲುತ್ತದೆ. ಶಿಲೀಂಧ್ರದ ತಂತುಗಳು ೦.೫–೦.೯ ಮೈಕ್ರೋಮೀಟರ್ ಅಗಲ ಮತ್ತು ೫೦ ಮೈಕ್ರೋಮೀಟರ್ ವರೆಗಿನ ಉದ್ದವನ್ನು ಹೊಂದಿವೆ.



ಕಲ್ಲು ಹೂವಿನ ಅಪೋಥೀಸಿಯ

ಧರನಿ ಧರ್ ಅವಸ್ಥಿ ಅವರು ತಮ್ಮ ಲೇಖನ 'ಎವಲ್ಯೂಷನರಿ ಟ್ರೆಂಡ್ಸ್ ಇನ್ ಲೈಕೆನ್ ಸಿಂಬಯಾಸಿಸ್'ನಲ್ಲಿ ಕಲ್ಲು ಹೂವಿನ ಸಹಜೀವಿಗಳ ವಿಕಸನದ ಬಗ್ಗೆ ವಿಸ್ತೃತವಾಗಿ ಬರೆದಿದ್ದಾರೆ. ಇಂಟರ್‌ನ್ಯಾಷನಲ್ ಬೊಟಾನಿಕಲ್ ನೊಮೆನ್‌ಕ್ಲೇಚರ್ ನಿರೂಪಿಸಿದ ಪ್ರಕಾರ ಕಲ್ಲು ಹೂವಿನ ಜಾತಿಯ ಹೆಸರು ಶಿಲೀಂಧ್ರ ಎಂದೇ ಉಳಿಯ ಬೇಕಾಗುತ್ತದೆ. ಕಲ್ಲು ಹೂವಾಗುವಿಕೆಯಲ್ಲಿ ಶಿಲೀಂಧ್ರವು ಪಾಚಿಯ ಜೊತೆ ಸಹಜೀವನ ಸಂಬಂಧದಲ್ಲಿ ಭಾಗಿಯಾಗುತ್ತದೆ. ಶಿಲೀಂಧ್ರವು ಸಾಮಾನ್ಯವಾಗಿ ಆಸ್ಕೋ ಮೈಕೋಟಾದ ಪ್ರಭೇದಗಳು ಕೆಲವೇ ಕೆಲವು ಮಾತ್ರ ಬೆಸಿಡಿಯೋ ಮೈಸಿಟಿಸ್‌ನ ಪ್ರಭೇದವು ಕಲ್ಲು ಹೂವಾಗುವಿಕೆಯಲ್ಲಿ ಭಾಗವಹಿಸುತ್ತವೆ. ತನ್ನ ಆಹಾರವನ್ನು ತಾನೇ ತಯಾರಿಸುವ ೮ ಜಾತಿಯ ಸಯನೋಬ್ಯಾಕ್ಟೀರಿಯ, ೧೯ ಜಾತಿಯ ಪಾಚಿಗಳು, ೧ ಜಾತಿಯ ಕ್ಸ್ಯಾಂತೋಫೈಸಿಯೆಗಳು ಕಲ್ಲು ಹೂವಿನಲ್ಲಿ ಇರುವುದು ಕಂಡುಬಂದಿದೆ. ಇವುಗಳಲ್ಲಿ ಗ್ಲೆಯೋಕಾಪ್ಸ್, ನಾಸ್ಟಾಕ್, ಸೈಟೋನಿಮಾಗಳು ನೀಲಿ ಹಸಿರು ಪಾಚಿಗಳಾಗಿವೆ. ಅಲ್ಲದೆ ಕೊಕೋಮಿಕ್ಸಾ, ಮಿರ್ಮೆಸಿಯ, ಟ್ರೆಬಾಕ್ಸಿಯ, ಪ್ಲಿನೊಕಾಕಸ್, ಟ್ರೆಂಟೋಪಿಲಾಗಳೂ ಪಾಚಿಗಳಾಗಿವೆ. ಕಲ್ಲು ಹೂವಿನ ದೇಹದ ರಚನೆಯನ್ನು ಗಮನಿಸಿದಾಗ ಅದು ಸರಳತೆಯಿಂದ ಕ್ಲಿಷ್ಟಕರವಾದ ವಿನ್ಯಾಸವನ್ನು ಹೊಂದಿದ್ದು, ಕ್ಲಿಷ್ಟ ರಚನೆಯು ವಿಕಸನದ ವಿವಿಧ ಹಂತಗಳಲ್ಲಿ ಮತ್ತು ಸಹಜೀವನದ ಸ್ವಭಾವದಿಂದಾಗಿದೆ.

**ನೀಲಿ–ಹಸಿರು ಬ್ಯಾಕ್ಟೀರಿಯಾ (ಸಯನೋಬ್ಯಾಕ್ಟೀರಿಯ) ಹೊಂದಿರುವ ಕಲ್ಲು ಹೂವು**

ನೀಲಿ–ಹಸಿರು ಬ್ಯಾಕ್ಟೀರಿಯ ಅತ್ಯಂತ ಹೇರಳವಾಗಿದ್ದ ಸಮಯದಲ್ಲಿ, ಆಗ ತಾನೆ ಉಗಮವಾದ ಶಿಲೀಂಧ್ರದ ಜೊತೆ ಸೇರಿ ಕಲ್ಲು ಹೂವಾಗುವ ಪ್ರಕ್ರಿಯೆಯಲ್ಲಿ ಭಾಗವಹಿಸಿದೆ. ನೀಲಿ–ಹಸಿರು ಬ್ಯಾಕ್ಟೀರಿಯವನ್ನು ಹೊಂದಿರುವ ಕಲ್ಲು ಹೂವು ಸರಳ ವಾದ ರಚನೆಯನ್ನು ಹೊಂದಿದೆ ಹಾಗೂ ಎರಡು ಸಹಜೀವಿಗಳು ಸಮಪ್ರಮಾಣದಲ್ಲಿ ಮತ್ತು ಏಕರೂಪದಲ್ಲಿ ಕಲ್ಲು ಹೂವಿನ ದೇಹದ ಉದ್ದಗಲಗಳಲ್ಲಿ ಹರಡಿವೆ. ಇದನ್ನು ಏಕರೂಪ ವಿಂಗಡಣಾ ಸ್ಥಿತಿ ಎಂದು ಕರೆಯುತ್ತಾರೆ. ಸಯನೋಲೈಕೆನ್‌ಗಳಲ್ಲಿ ನೀಲಿ–ಹಸಿರು ಬ್ಯಾಕ್ಟೀರಿಯ ಪ್ರಭಾವಿಯಾಗಿದೆ. ಲಿಕೆನೋಡಿಯಂ, ಪೋಲಿಕೇಡಿಯಂ, ಇಪಿಬಿ, ಜಲ್ಬ್ರಕನೆರೆಲ್ಲಾ ಕಲ್ಲು ಹೂವುಗಳಲ್ಲಿ ನೀಲಿ–ಹಸಿರು ಬ್ಯಾಕ್ಟೀರಿಯ ತಂತುಗಳು ದೇಹದ ರಚನೆಯನ್ನು ನಿಶ್ಚಯಿಸುತ್ತವೆ ಮತ್ತು ಶಿಲೀಂಧ್ರದ ತಂತುಗಳು ತೆಳುವಿನಿಂದ ದಪ್ಪವಾಗಿ ಪಾಚಿಯ ಕೋಶಗಳ ಸುತ್ತ ಸುತ್ತುವರಿದಿವೆ. ಪಾಚಿ ಮತ್ತು ಶಿಲೀಂಧ್ರಗಳು ಒಂದರ ಪಕ್ಕ ಮತ್ತೊಂದಿದ್ದರೂ ಬೇರೆ–ಬೇರೆಯಾಗಿವೆ. ಇಲ್ಲಿ ಆಹಾರ ಹೀರುವ ಕೊಳವೆಯನ್ನು ಕಾಣಬಹುದು. ಈ ಸ್ಥಿತಿಯನ್ನು ಸಹಜೀವನ ಸಂಬಂಧದ ಪ್ರಾಥಮಿಕ ಹಂತ ಎನ್ನಬಹುದು.

ಸ್ವಲ್ಪ ಮುಂದುವರಿದ ಪೈರೆನಾಪ್ಸಿಡೇಸಿ ಪ್ರಭೇದಗಳಲ್ಲಿ ಸ್ಪೀಶೀಸ್ ಕೊಲೆಮ್ಮಾ ಪೈಸ್ಮಾ ಮತ್ತು ಲೆಪ್ಟೋಜಿಯಂಗಳಲ್ಲಿ ಏಕರೂಪ ವಿಂಗಡಣಾ ಸ್ಥಿತಿ ಇದ್ದರೂ ಸಹ ಪೈಕೋ ಬಯಾಂಟ್‌ನ ಗುಣವು ಕಲ್ಲು ಹೂವಿನ ದೇಹದ ರಚನೆಯನ್ನು ನಿಶ್ಚಯಿಸುವಲ್ಲಿ ಯಾವುದೇ ಪಾತ್ರವನ್ನು ವಹಿಸುವುದಿಲ್ಲ. ಮುಂದುವರಿದ ಕಲ್ಲು ಹೂವು ಪ್ರಭೇದಗಳಲ್ಲಿ ಪಾಚಿಯ ಕೋಶಗಳು ಮೇಲಿನ ಕೊರ್ಟೆಕ್ಸ್ ಕೋಶದ ಕೆಳಭಾಗದಲ್ಲಿ ನಿರ್ಬಂಧಿತವಾಗಿವೆ ಮತ್ತು ಶಿಲೀಂಧ್ರವು ದೇಹದ ಬಹುಪಾಲು ಭಾಗದ ರಚನೆಯಲ್ಲಿ ಪ್ರಮುಖ ಪಾತ್ರ ವಹಿಸಿದೆ. ಈ ಸ್ಥಿತಿಯನ್ನು ಪೆಲ್ಟಿಜರೇಸಿಯೆ ಮತ್ತು ಸ್ಟಿಕ್ಟೇಸಿಯ ಪ್ರಭೇದಗಳಲ್ಲಿ ಕಾಣಬಹುದು. ನೀಲಿ–ಹಸಿರು ಬ್ಯಾಕ್ಟೀರಿಯ ತನ್ನ ಸುತ್ತ ಕವಚವನ್ನು ಹೊಂದಿದ್ದು ಶಿಲೀಂಧ್ರದೊಂದಿಗೆ ನಿಕಟವಾದ ಸಂಬಂಧ ಹೊಂದಲು ಅಡಚಣೆಯಾಗಿದೆ. ಇದು ನೀಲಿ–ಹಸಿರು ಬ್ಯಾಕ್ಟೀರಿಯ ಮತ್ತು ಶಿಲೀಂಧ್ರದ ಸಹ ಜೀವನದ ಪ್ರಾಥಮಿಕ ಹಂತವಾಗಿದ್ದು ಇಲ್ಲಿ ಮುಖ್ಯವಾಗಿ ಫೈಟೋಬಯಾಂಟ್ ಅನಿರ್ಬಂಧಿತ ರೀತಿಯಲ್ಲಿ ಇದ್ದು ಕಲ್ಲು ಹೂವಿನ ಸ್ಥಿತಿಗಿಂತ ಸ್ವಲ್ಪ ಭಿನ್ನವಾಗಿದೆ. ಆದರೆ ಪಾಚಿಯ ಕೋಶಗಳನ್ನೊಳಗೊಂಡ ಕಲ್ಲು ಹೂವುಗಳಲ್ಲಿ ಈ ಸ್ಥಿತಿ ತುಂಬಾ ವಿರಳವಾಗಿದೆ.

**ಕಲ್ಲು ಹೂವಿನ ಉಪಯೋಗಗಳು ಹಾಗೂ ವೈದ್ಯಕೀಯ ಉಪಯೋಗಗಳು**

ಕಲ್ಲು ಹೋವು ಸಿಟ್ರೇರಿಯಾ ಅಕುಲೇಟಾವನ್ನು ಅಸಿಟೋನ್, ಡೈಈಥೈಲ್ ಈಥರ್ ಮತ್ತು ಎಥನಾಲ್‌ನೊಂದಿಗೆ ಬೆರೆಸಿ ಸಾರವನ್ನು ತೆಗೆದು ಸೂಕ್ಷ್ಮಾಣು ಜೀವಿಗಳಾದಂತಹ ಸ್ಟಫೈಲೋಕಾಕಸ್ ಆರಿಯಸ್, ಇ ಕೋಲಿ, ಪ್ರೋಟಿಯಸ್ ವಲ್ಗಾರಿಸ್, ಬ್ಯಾಸಿಲಸ್ ಸಬ್ಟಿಲಿಸ್, ಬ್ಯಾಸಿಲಸ್ ಸೀರೀಸ್, ಸುಡೋಮನಾಸ್

ಎರೋಜಿನೋಸಾ ಮತ್ತು ಲಿಸ್ಟಿರಿಯೋ ಮಾನೋಸೈಟೋಜನ್‌ಗಳ ಮೇಲೆ ಪ್ರಯೋಗಿಸಿದಾಗ ಸೂಕ್ಷ್ಮಜೀವಿ ನಿರೋಧಕವಾಗಿ ಬ್ಯಾಕ್ಟೀರಿಯಗಳ ವಿರುದ್ಧ ವರ್ತಿಸಿದೆ, ಆದರೆ ಶಿಲೀಂಧ್ರಗಳ ವಿರುದ್ಧ ಯಾವುದೇ ಸೂಕ್ಷ್ಮಜೀವಿ ನಿರೋಧಕ ಕ್ರಿಯೆಯನ್ನು ತೋರಿಲ್ಲದಿರುವುದನ್ನು ಕಂಡುಹಿಡಿದಿದ್ದಾರೆ.

ರಾಮಿನೇಲಿಯ ಪೆರುವಿಯಾನ, ಬಲ್ಬೋಥ್ರಿಕ್ಸ್ ಇಸಿಡಿಜಾ, ಪಾರ್ಮೋಟ್ರಿಮಾ ಟಿಂಕ್ಟೋರಮ್ ಮತ್ತು ಕ್ಲಾಡಿಯ ಅಗ್ರಿಗೇಟಗಳು ಉತ್ಕರ್ಷಣ ನಿರೋಧಕ (ಆಂಟಿಆಕ್ಸಿಡೆಂಟ್) ಚಟುವಟಿಕೆ ಹೊಂದಿರುವುದನ್ನು ಸ್ವಾನ್ಲಿ ಮತ್ತು ಸಹಚರರು ಪ್ರಚುರಪಡಿಸಿರುವರು. ಎವರ್ನಿಯಾ ಸಿರ್ರಾಟಮ್ ಒಂದು ಫೋಲಿಯೋಸ್ ಕಲ್ಲು ಹೂವು ಉಷ್ಣವಲಯದ ಹಿಮಾಲಯದಲ್ಲಿ, ಮಧ್ಯ ಭಾರತ ಮತ್ತು ದಕ್ಷಿಣ ಭಾರತದ ಎತ್ತರ ಪ್ರದೇಶಗಳಲ್ಲಿ ಹುಲುಸಾಗಿ ಬೆಳೆಯುತ್ತದೆ. ಈ ಕಲ್ಲು ಹೂವಿನ ಸಾರ ಬ್ಯಾಕ್ಟೀರಿಯ, ಶಿಲೀಂಧ್ರಗಳಾದ ಆಸ್ಪರ್ಜಿಲ್ಲಸ್ ನೈಗರ್ ಮತ್ತು ಆಸ್ಪರ್ಜಿಲ್ಲಸ್ ಫುಮಿಗೇಟ್ಸ್, ಲಾಡಿಹುಳ ಹಾಗೂ ಸೊಳ್ಳೆ ಈಡೀಸ್ ಈಜಿಪ್ಟಿಯ ಎರಡು ಮತ್ತು ಮೂರನೇ ಅಂತರಕಾರಿ ಮರಿಗಳಿಗೆ ದುಃಸ್ವಪ್ನವಾಗಿದೆ.

**ಆಹಾರಪದಾರ್ಥಗಳಾಗಿ ಕಲ್ಲು ಹೂವು**

ಕಲ್ಲು ಹೂವುಗಳನ್ನು ವಿಶ್ವದಾದ್ಯಂತ ಅನೇಕ ಮಾನವ ಸಂಸ್ಕೃತಿಗಳು ಆಹಾರವಾಗಿ ಬಳಸಲಾಗುತ್ತಿದ್ದ ದಾಖಲೆಗಳಿವೆ. ಕಲ್ಲು ಹೂವುಗಳನ್ನು ಉತ್ತರ ಅಮೇರಿಕಾ, ಯುರೋಪ್, ಏಷ್ಯಾ ಮತ್ತು ಆಫ್ರಿಕಾದ ಜನರು ಸೇವಿಸುತ್ತಾರೆ. ಅಲ್ಲದೆ ಇತರೆ ಭಾಗದ ಜನರು ಬಳಸುತ್ತಾರೆ. ಉತ್ತರ ಯುರೋಪ್ ಮತ್ತು ಸ್ಕ್ಯಾಂಡಿನೇವಿಯಾದ ಜನರು ಸಿಟ್ರಾರಿಯಾ ಐಲಾಂಡಿಕವನ್ನು ಪ್ರಮುಖವಾಗಿ ಗಂಜಿ, ಪಡ್ಡಿಂಗ್, ಸೂಪ್ ಮತ್ತು ಸಲಾಡ್‌ಗಳ ರೂಪದಲ್ಲಿ ಸೇವಿಸುತ್ತಿದ್ದರು. ಕ್ಲಾಡೋನಿಯ ಜಾತಿಯ ಕಲ್ಲು ಹೂವು ಗಳನ್ನು ಆರ್ಕ್ಟಿಕ್ ಪ್ರದೇಶದಲ್ಲಿನ ಹಿಮಸಾರಂಗಗಳು ಆಹಾರವಾಗಿ ಸೇವಿಸುತ್ತವೆ. ಅಂಬಿಲಿಕೇರಿಯಾ ಎಸ್ಕುಲೆಂಟಾವನ್ನು ಜಪಾನ್ ಮತ್ತು ಕೊರಿಯದಲ್ಲಿ ಸಾಂಪ್ರದಾಯಿಕ ಆಹಾರಗಳಲ್ಲಿ ಬಳಸುತ್ತಾರೆ. ಭಾರತದಲ್ಲಿ ಪ್ರಮುಖವಾಗಿ ಗರಂ ಮಸಾಲ, ಸಾಂಬಾರ ಪುಡಿ ಮತ್ತು ಮಾಂಸಾಹಾರದಲ್ಲಿ ಬಳಸುವ ಮಸಾಲಗಳಲ್ಲಿ ಕಲ್ಲು ಹೂವಿನ ಪುಡಿ ಅಥವಾ ಇಡೀ ಕಲ್ಲು ಹೂವನ್ನೆ ಮುಖ್ಯವಾದ ಪದಾರ್ಥಗಳಾಗಿ ಬಳಸುತ್ತಾರೆ. ಪಾರ್ಮೋಟ್ರಿಮಾ ಟಿಂಕ್ಟೋರಮ್‌ನ್ನು ಬಹಳವಾಗಿ ಮಸಾಲೆ ಮತ್ತು ಸ್ವಾದ ಅಥವಾ ಸುವಾಸನೆಕಾರಕವಾಗಿ ಭಾರತದಲ್ಲಿ ಉಪಯೋಗಿಸಲಾಗುತ್ತಿದೆ.

ಕಲ್ಲು ಹೂವುಗಳು ಅನೇಕ ಪೌಷ್ಟಿಕಾಂಶಗಳನ್ನು ಹೊಂದಿವೆ. ಅವುಗಳಲ್ಲಿ ಶರ್ಕರಪಿಷ್ಟ ಪ್ರಮುಖವಾಗಿದ್ದು, ಇದು ಉತ್ತಮ ಮತ್ತು ಆರೋಗ್ಯಕರ ಆಹಾರವಾಗಿದೆ. ತೀವ್ರ ಬರಗಾಲದ ಸಂದರ್ಭಗಳಲ್ಲಿ ಬೋಸ್ನಿಯಾ ಮತ್ತು ಸರ್ಬಿಯಾ ಗಣರಾಜ್ಯದ ಗಡಿಭಾಗದಲ್ಲಿ ಏಳು ಜಾತಿಯ ಕಲ್ಲು ಹೂವುಗಳನ್ನು ಆಹಾರ ಪದಾರ್ಥವಾಗಿ ಬಳಸುತ್ತಾರೆ, ಅವುಗಳಲ್ಲಿ ಮುಖ್ಯವಾದುವು ಎವರ್ನಿಯ ಪುನಾಸ್ಟ್ರಿ, ಸುಡೆವರ್ನಿಯ ಪರ್‌ಪುರೇಸಿ, ಲೊಬೇರಿಯ ಪಲ್ಮೋನೇರಿಯ, ಉಸ್ನಿಯ ಬರ್ಬಾಟ ಮತ್ತು ಸಿಟ್ರಾರಿಯಾ ಐಲಾಂಡಿಕ. ಕಲ್ಲು ಹೂವು ರಾಮಲಿನ ಅನೇಕ ಬಗೆಯ ಗ್ಲುಕಾನ್ಸ್, ಗ್ಯಾಲಕ್ಟೋಸ್ಪಿಂಗೋಲಿಪಿಡ್ಸ್ ಮತ್ತು ಗ್ಯಲಾಕ್ಟೋಮನಾನ್ಸ್‌ಗಳನ್ನು ಹೊಂದಿವೆ. ರಾಮಲಿನ ಉಸ್ನಿಯ ಮತ್ತು ಸಿಟ್ರಾರಿಯಾ ಐಲಾಂಡಿಕ ಕಲ್ಲು ಹೂವುಗಳು ಅನೇಕ ಬಗೆಯ ಶರ್ಕರಪಿಷ್ಟಗಳನ್ನು ಹೊಂದಿವೆ.

ವಿಜ್ಞಾನ ಪ್ರಪಂಚದ ಸಂಶೋಧನಾ ಕ್ಷೇತ್ರದಲ್ಲಿ ಕಗ್ಗಂಟಿನಂತೆಯೆ ಕಾಡುವ ಕಲ್ಲು ಹೂವುಗಳ ಬಗ್ಗೆ ಸರಿಯಾದ ವಿವರಗಳನ್ನು ಕಲೆಹಾಕುವ ಅಗತ್ಯವಿದೆ. ಆಧುನಿಕ ಸಮಾಜದ ಪ್ರಗತಿ ಮತ್ತು ಸುಸ್ಥಿರ ಬದುಕಿನ ನಿರ್ಮಾಣದ ದಿಸೆಯಲ್ಲಿ ಕಲ್ಲು ಹೂವುಗಳಂತಹ ವಿಶಿಷ್ಟ ಜೀವಿಗಳು ಸಹಾಯ ಮಾಡಬಲ್ಲವೆ? ಎಂಬ ಪ್ರಶ್ನೆಗೆ ಉತ್ತರ ಹುಡುಕುವ ಸತ್ಕಾರ್ಯ ಸಂಶೋಧನೆಯಿಂದ ಆಗಬೇಕಾಗಿದೆ. ವಿಸ್ಮಯ ವಿಶ್ವದ ಗರ್ಭದೊಳಗಡಗಿರುವ ರಹಸ್ಯಗಳನ್ನು ಅರಿಯುವೆಡೆಯಲ್ಲಿ ಮಾನವನ ಸತತ ಪ್ರಯತ್ನಗಳು ಬದುಕಿನ ಮಜಲುಗಳನ್ನು ಬದಲಾಯಿಸುತ್ತಲೇ ಇವೆ.

*ಕಲ್ಲರಳಿ ಹೂವಾಗಲಿ*
*ದುರಂತಗಳು ದೂರಾಗಲಿ*
*ವಿಜ್ಞಾನ ನೌಕೆಯು ಕಡಲಲಿ*
*ಸಾಗಲಿ, ಸಚ್ಚಿದಾನಂದ ಸೇರಲಿ*

**ಡಾ॥ ಗಾಯತ್ರಿ ದೇವರಾಜ್, ಸ್ವಾಮಿ ಸಿ. ಟಿ.**
ಸೂಕ್ಷ್ಮಾಣು ಜೀವಶಾಸ್ತ್ರ ವಿಭಾಗ, ದಾವಣಗೆರೆ ವಿಶ್ವವಿದ್ಯಾನಿಲಯ, ದಾವಣಗೆರೆ – ೫೭೭ ೦೦೨
**ದೇವರಾಜ ಟಿ. ಎನ್.**
ತರಳಬಾಳು ಕೃಷಿ ವಿಜ್ಞಾನ ಕೇಂದ್ರ, ವಿದ್ಯಾನಗರ, ದಾವಣಗೆರೆ – ೫೭೭ ೦೦೪
**ಸಂಜೀವ ನಾಯಕ**
ಕಲ್ಲು ಹೂವು ವಿಜ್ಞಾನ ಪ್ರಯೋಗಾಲಯ, ಸಸ್ಯವೈವಿಧ್ಯ, ವರ್ಗೀಕರಣ ವಿಧಾನ ಮತ್ತು ಹರ್ಬೇರಿಯಂ ವಿಭಾಗ, ರಾಷ್ಟ್ರೀಯ ಸಸ್ಯವಿಜ್ಞಾನ ಸಂಶೋಧನಾ ಸಂಸ್ಥೆ
ಲಕ್ನೋ–೨೨೬ ೦೦೧

## ಸಾದರ ಸ್ವೀಕಾರ

**ರೈಲುಗಾಡಿ** (ಮಕ್ಕಳ ಕವನಗಳು) *ಅಕ್ಬರ್ ಸಿ. ಕಾಲಿಮಿರ್ಚಿ*
**ಪುಟ : viii + ೭೬ = ೮೪** *ಬೆಲೆ : ರೂ. ೭೦*

**ಕತ್ತಲೆಯ ಪ್ರೀತಿಗೆ...** (ಕವನ ಸಂಕಲನ)
*ಅಕ್ಬರ್ ಸಿ. ಕಾಲಿಮಿರ್ಚಿ*
**ಪುಟ : ೭೨** *ಬೆಲೆ ರೂ. ೫೦*

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಕನ್ನಡ ಮೈತ್ರಿ ಪ್ರಕಾಶನ,** ೭೩೧/೩, ನಂ. ೯, ಮಂಜುನಾಥ ಬಡಾವಣೆ, ತಾ॥ ಜಿ॥ ಕೊಪ್ಪಳ, ಭಾಗ್ಯನಗರ – ೫೮೩ ೨೩೮

**ಚಿಲಿಪಿಲಿ ಚೈತ್ರ** (ಮಕ್ಕಳ ಕವನ ಸಂಕಲನ)
*ಹನುಮಂತಪ್ಪ ಎನ್. ಉಪ್ಪಾರ*
**ಪುಟ : x + ೩೮ = ೪೮** *ಬೆಲೆ ರೂ. ೫೦*
**ಸ್ಫೂರ್ತಿ ಪ್ರಕಾಶನ, ಮಂಗಳೂರು,** ತಾಲೂಕು ಯಲಬುರ್ಗಾ, ಜಿಲ್ಲೆ ಕೊಪ್ಪಳ – ೫೮೩ ೨೩೦

**ಕಲ್ಪಶೋಧ** (ತುಮಕೂರು ಜಿಲ್ಲೆಯ ಸಂಶೋಧನಾ ಲೇಖನಗಳು) *ಡಾ॥ ಡಿ. ಎನ್. ಯೋಗೀಶ್ವರಪ್ಪ*
**ಪುಟ : xii + ४८०** *ಬೆಲೆ ರೂ. ४००*

**ಪ್ರಗತಿ ಗ್ರಾಫಿಕ್ಸ್,** ನಂ. ೧೧೯, ೩ನೇ ಅಡ್ಡರಸ್ತೆ, ೮ನೇ ಮೈನ್, ಹಂಪಿನಗರ (ಆರ್‌ಪಿಸಿ ಲೇಔಟ್ – ವಿಜಯನಗರ), ಬೆಂಗಳೂರು – ೫೬೦ ೧೦೪

**ನನ್ನ ಗುರು ಗೋಕಾಕ** *ಚಂದ್ರಶೇಖರ ಪಾಟೀಲ*
**ಪುಟ : vi + ४೦** *ಬೆಲೆ ರೂ. ೬೦*

**ಗೋ–ಕಾಕ್ ಗೋ–ಬ್ಯಾಕ್** (ಗೋಕಾಕ್ ಚಳುವಳಿ ಕುರಿತ ಬರಹಗಳು) *ಚಂದ್ರಶೇಖರ ಪಾಟೀಲ*
**ಪುಟ : ४೨** *ಬೆಲೆ ರೂ. ೫೦*

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಸಂಕ್ರಮಣ ಪ್ರಕಾಶನ,** ನಂ. ೧೫, ಜ್ಯೋತಿ ಲೇಔಟ್, ಯಲಚೇನಹಳ್ಳಿ, ಜೆ. ಪಿ. ನಗರ, ಬೆಂಗಳೂರು – ೭೮

**ಕೋಮು ಸೌಹಾರ್ದತೆ ಮತ್ತು ಸಮಕಾಲೀನತೆ**
*ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ*
**ಪುಟ : iv + ೨೦೦ = ೨೦೪** *ಬೆಲೆ ರೂ. ೧೫೦*
**ಸಿವಿಜಿ ಇಂಡಿಯಾ,** ಕಸ್ತೂರ್‌ಬಾ ಭವನ, ಗಾಂಧಿಭವನ ಆವರಣ, ಕುಮಾರಪಾರ್ಕ್ ಪೂರ್ವ, ಬೆಂಗಳೂರು – ೧

**ಮಠಗಳು ಮಾರಾಟಕ್ಕಿವೆ** (ಲೇಖನಗಳ ಸಂಕಲನ)
*ಲಿಂಗಣ್ಣ ಸತ್ಯಂಪೇಟೆ*
**ಪುಟ : xii + ೧೬೬** *ಬೆಲೆ ರೂ. ೧೨೫*
**ವಿಶ್ವಾರಾಧ್ಯ ಸತ್ಯಂಪೇಟೆ, ಬಸವ ಮಾರ್ಗ ಪ್ರತಿಷ್ಠಾನ,** ಬಸವ ಮಾರ್ಗ ಶ್ರೀ ಚರಬಸವೇಶ್ವರ ಕಾಲನಿ, ಶಹಾಪುರ – ೫೮೫ ೨೨೩, ಯಾದಗಿರಿ ಜಿಲ್ಲೆ

**ತುರುಗಾಹಿ ರಾಮಣ್ಣ** (ಸಮಗ್ರ ವಚನಗಳ ವಿಶ್ಲೇಷಣೆ)
*ಜಯದೇವಪ್ಪ ಜೈನಕೇರಿ*
**ಪುಟ : xxiv + ೬४ = ೯೮** *ಬೆಲೆ : ರೂ. ೮೦*

**ಸುವರ್ಣ ಸಿರಿ** (ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ ಹಾರಕೂಡ ಪ್ರಕಟಿಸಿದ ಕೃತಿಗಳ ಅವಲೋಕನ)
*ಡಾ॥ ಗವಿಸಿದ್ಧಪ್ಪ ಎಚ್. ಪಾಟೀಲ*
**ಪುಟ : xvi + ೧೩೨** *ಬೆಲೆ : ರೂ. ೯೦*

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ,** ಹಾರಕೂಡ – ೫೮೫ ४೩೭, ತಾಲೂಕು ಬಸವಕಲ್ಯಾಣ, ಜಿಲ್ಲೆ ಬೀದರ

ಡಾ|| ಡಿ. ಸಿ. ನಂಜುಂಡ

# ಸಮುದಾಯ ಸಹಭಾಗಿತ್ವ ವಿಕೇಂದ್ರೀಕರಣ ಮತ್ತು ಗ್ರಾಮೀಣಾಭಿವೃದ್ಧಿ




ಯಾವುದೇ ಸರಕಾರಿ ಯೋಜನೆಗಳ ಯಶಸ್ಸು ಸ್ಥಳೀಯ ಜನರ ಪರಿಣಾಮಕಾರಿ ಸಹಭಾಗಿತ್ವದಲ್ಲಿ ಅಡಕವಾಗಿದೆ. ಸುಧಾರಿತ ಆಡಳಿತವು ಮತ್ತು ಪೊಲಿಟಿಕಲ್ ಗವರ್ನೆನ್ಸ್ ಕಾರ್ಯಕ್ರಮಗಳ ಪರಿಣಾಮಕಾರಿ ಜಾರಿಯಲ್ಲಿ ಮುಖ್ಯ ಪಾತ್ರ ವಹಿಸುತ್ತವೆ. ಇವುಗಳ ಕೊರತೆಯಿಂದ ಇಂದು ಸಾಧ್ಯವಾಗುತ್ತಿಲ್ಲ. ಸ್ಥಳೀಯ ಜನರನ್ನು ಯೋಜನೆ ರೂಪಿಸುವಿಕೆ ಮತ್ತು ಜಾರಿಯಲ್ಲಿ ವಿಶ್ವಾಸಕ್ಕೆ ಪಡೆದಿಲ್ಲ. ನಿರ್ಧಾರ ಕೈಗೊಳ್ಳುವ ಹಕ್ಕು ಸಹ ಸ್ಥಳೀಯರಿಗೆ ನೀಡಲಾಗಿಲ್ಲ. ದೆಹಲಿಯಲ್ಲಿ ಕುಳಿತು ಹೊಸ ಹೊಸ ಯೋಜನೆಗಳನ್ನು ರವಾನಿಸುವುದರಿಂದ ಯಾವುದೇ ಪ್ರಯೋಜನವಿಲ್ಲ. ಭಾರತದಾದ್ಯಂತ ಬಹುಸಂಸ್ಕೃತಿಯ ಸಮಾಜಕ್ಕೆ ಏಕರೂಪ ವ್ಯವಸ್ಥೆ ಮತ್ತು ನೀತಿ ನಿರೂಪಣೆಯನ್ನು ಜಾರಿಗೊಳಿಸುವುದು ಸಾಧ್ಯವಿಲ್ಲ. ಸರ್ಕಾರದ ವಿಕೇಂದ್ರೀಕರಣ ವ್ಯವಸ್ಥೆಯು ಮೂಲಭೂತ ಸಮಸ್ಯೆಗಳನ್ನು ನಿವಾರಿಸಿ ಪರಿಣಾಮಕಾರಿ ಯೋಜನೆಗಳನ್ನು ರೂಪಿಸಬೇಕಾಗುತ್ತದೆ.







**ಭಾ**ರತವು ಪ್ರಮುಖವಾಗಿ ಕೃಷಿ ಆಧಾರಿತ ರಾಷ್ಟ್ರ. ಜಾಗತಿಕ ಮಟ್ಟದಲ್ಲಿ ಭಾರತದ ಬೆಳವಣಿಗೆಯನ್ನು ಕೃಷಿಯೊಂದೇ ನಿರ್ಧರಿಸುತ್ತದೆ. ಭಾರತದಲ್ಲಿ ಕೃಷಿ ಭೂಮಿ ಮತ್ತು ನೀರಿನ ಬಳಕೆಯ ವಿಚಾರದಲ್ಲಿ ಗರಿಷ್ಠ ಮಟ್ಟವನ್ನು ತಲುಪಿದೆ. ಕೃಷಿ ಕ್ಷೇತ್ರವು ಇಂದು ಸಂಪೂರ್ಣವಾಗಿ ತಾಂತ್ರಿಕತೆಯಿಂದ ಕೂಡಿದೆ. ಕೃಷಿ ಆಧಾರಿತ ಗ್ರಾಮೀಣ ಕ್ಷೇತ್ರವು ಇಂದು ಹಲವಾರು ಸಮಸ್ಯೆಗಳಿಂದ ಬಳಲುತ್ತಿದೆ. ಬಡತನ ನಿರ್ಮೂಲನೆ, ಅನಕ್ಷರತೆಯನ್ನು ಹೋಗಲಾಡಿಸುವುದು ಮತ್ತು ಸಮಾನ ಬೆಳವಣಿಗೆಯನ್ನು ಉಂಟುಮಾಡಲು ಇಂದು ಸರ್ಕಾರಗಳು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿವೆ. ಈಗಾಗಲೇ ಸರ್ಕಾರಗಳು ನೂರಾರು ಕೋಟಿ ರೂಪಾಯಿಗಳನ್ನು ವಿವಿಧ ಪಂಚವಾರ್ಷಿಕ ಯೋಜನೆಗಳ ಮೂಲಕ ಗ್ರಾಮೀಣ ಕ್ಷೇತ್ರಕ್ಕೆ ಖರ್ಚುಮಾಡಿವೆ. ಕೆಲವೊಂದು ಕಾರ್ಯಕ್ರಮಗಳು ಯಶಸ್ವಿಯಾಗಿವೆ. ಕೆಲವೊಂದು ಕಾರ್ಯಕ್ರಮಗಳು ದಯನೀಯ ವೈಫಲ್ಯ ಕಂಡಿವೆ ಕೂಡ. ಐ. ಆರ್. ಡಿ. ಪಿ.ಯಂತಹ ಕಾರ್ಯಕ್ರಮಗಳು ಗ್ರಾಮೀಣ ಭಾರತದಲ್ಲಿ ತಕ್ಕಮಟ್ಟಿಗೆ ಯಶಸ್ಸನ್ನು ಕಂಡಿವೆ. ಭಾರತದಲ್ಲಿ ಕಳೆದ ೬೦ ವರ್ಷಗಳಲ್ಲಿ ಸುಮಾರು ೯೦ ವಿವಿಧ ರೀತಿಯ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೆ ತರಲಾಗಿದೆ. ಪ್ರಪಂಚದ ಯಾವುದೇ ದೇಶದಲ್ಲೂ ಇಷ್ಟೊಂದು ಕಾರ್ಯಕ್ರಮಗಳನ್ನು ಇಷ್ಟು ಕ್ಷಿಪ್ರ ಅವಧಿಯಲ್ಲಿ ಜಾರಿಗೆ ತಂದಿರುವ ಉದಾಹರಣೆ ಇಲ್ಲ.

ಭಾರತದಲ್ಲಿ ಅಥವಾ ವಿಶ್ವದ ಯಾವುದೇ ಭಾಗದಲ್ಲಿ ಯಾವುದೇ ಯೋಜನೆಗಳನ್ನು ಜಾರಿಗೆ ತಂದರೂ ಅದರ ಯಶಸ್ಸು ನಿಂತಿರುವುದು ಸಮುದಾಯದ ಪರಿಣಾಮಕಾರಿ ಸಹಭಾಗಿತ್ವದ ಮೇಲೆ ಮಾತ್ರ. ಹನ್ನೊಂದನೇ ಪಂಚವಾರ್ಷಿಕ ಯೋಜನೆಯಲ್ಲಿ ಹಲವಾರು ಇಂತಹ ಸಹಭಾಗಿತ್ವದ ಯೋಜನೆಗಳಿಗೆ ಭಾರೀ ಪ್ರಾಮುಖ್ಯತೆ ನೀಡಲಾಗಿದೆ. ಸಮುದಾಯದ ಸಹಭಾಗಿತ್ವ ಎಂದರೆ ಸಂಬಂಧಿಸಿದ ಗ್ರಾಮೀಣ ಸಮುದಾಯವು ನಿರ್ದಿಷ್ಟ ಕಾರ್ಯಕ್ರಮದ ಯೋಜನೆ ಮತ್ತು ಜಾರಿಯಲ್ಲಿ ಸಂಪೂರ್ಣವಾಗಿ ತನ್ನನ್ನು ತಾನು ತೊಡಗಿಸಿಕೊಳ್ಳುವುದು ಎಂದರ್ಥ. ಇದರಲ್ಲಿ ಮುಖ್ಯವಾದುವು, ಸಮಸ್ಯೆಗಳನ್ನು ಗುರುತಿಸುವಿಕೆ, ಗುರಿಗಳ ನಿರ್ದೇಶನ, ಯೋಜನೆಯ ಫಲಾನುಭವಿಗಳನ್ನು ಗುರುತಿಸುವುದು, ಕಾರ್ಯಕ್ರಮಗಳ ಜಾರಿ, ಕಾರ್ಯಕ್ರಮಗಳ ಸಾಧಕ–ಬಾಧಕಗಳ ವಿಚಾರಣೆ ಹಾಗೂ ಹಣಕಾಸು ನಿರ್ವಹಣೆ, ಮುಂತಾದವುಗಳು ಸೇರುತ್ತವೆ. ಯಾವುದೇ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು ಕೇವಲ ಸರ್ಕಾರದಿಂದ ಮಾತ್ರ ಯಶಸ್ವಿಯಾಗಲು ಸಾಧ್ಯವಿಲ್ಲ. ಇವುಗಳಲ್ಲಿ ಸಮುದಾಯವು ಕ್ರಿಯಾತ್ಮಕವಾಗಿ ಮತ್ತು ರಚನಾತ್ಮಕವಾಗಿ ಭಾಗವಹಿಸಬೇಕಾಗುತ್ತದೆ. ಸರ್ಕಾರ ಮತ್ತು ಸರ್ಕಾರದ ಅಧಿಕಾರಿಗಳು ಕೇವಲ ಇಂತಹ ಯೋಜನೆಗಳಲ್ಲಿ ಮಧ್ಯವರ್ತಿಗಳಂತೆ ಕಾರ್ಯ ನಿರ್ವಹಿಸುತ್ತಾರಷ್ಟೆ. ಭಾರತದಲ್ಲಿ ಹಲವಾರು ಗ್ರಾಮೀಣ ಯೋಜನೆಗಳು

ಜಾರಿಗೆ ಬಂದಿದ್ದರೂ ಜನರ ಭಾಗವಹಿಸುವಿಕೆ ತುಂಬ ಕಡಿಮೆ. ಇಲ್ಲಿ ಜನರನ್ನು ಕೇವಲ ಫಲಾನುಭವಿಗಳಂತೆ ಮಾತ್ರ ನೋಡ ಲಾಗುತ್ತದೆ. ಯೋಜನೆಯ ಯಾವ ಹಂತದಲ್ಲೂ ಸರ್ಕಾರಗಳು ಇವರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವುದಿಲ್ಲ. ರಾಜಕೀಯ ಪಕ್ಷಗಳ ಮೇಲಾಟದಿಂದ ಇಂದು ಎಷ್ಟೋ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು ಹಾದಿ ತಪ್ಪಿವೆ. ಕೆಲವೊಮ್ಮೆ ಬೇರೆಬೇರೆ ಕ್ಷೇತ್ರದ ಅಭಿವೃದ್ಧಿಗೆ, ಗ್ರಾಮೀಣಾಭಿವೃದ್ಧಿಗೆ ನೀಡಿರುವ ಅನುದಾನವನ್ನು ಬಳಸಿ ಕೊಂಡಿರುವ ಉದಾಹರಣೆಗಳಿವೆ. ಇದರಿಂದ ಗ್ರಾಮೀಣಾಭಿವೃದ್ಧಿಗೆ ಹಣಕಾಸಿನ ಕೊರತೆ ಬಹಳಷ್ಟು ಸಲ ಉಂಟಾಗುತ್ತಿದೆ. ಅಧಿಕಾರಿಗಳ ಭ್ರಷ್ಟಾಚಾರದಿಂದ ಇಂದು ಎಷ್ಟೋ ಗ್ರಾಮೀಣ ಕಾರ್ಯಕ್ರಮಗಳು ಜನರನ್ನು ಸಕಾಲದಲ್ಲಿ ತಲುಪುತ್ತಿಲ್ಲ. ಹಲವಾರು ಗ್ರಾಮೀಣ ಯೋಜನೆಗಳು ಇನ್ನೂ ನೆನೆಗುದಿಗೆ ಬಿದ್ದಿವೆ. ಕಾರ್ಯಕ್ರಮದಲ್ಲಿ ಜನರ ಭಾಗವಹಿಸುವಿಕೆ ಮತ್ತು ಜನರನ್ನು ವಿವಿಧ ಯೋಜನೆಗಳಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳುವುದನ್ನು ಹೆಚ್ಚುಮಾಡಲು ಕೆಳಕಂಡ ವಿಧಾನವನ್ನು ಪಾಲಿಸಬೇಕಾಗುತ್ತದೆ ಮತ್ತು ಜನರಲ್ಲಿ ಅರಿವನ್ನು ಉಂಟುಮಾಡಬೇಕು :



೧. ಜನರಿಗಾಗಿ ರೂಪಿಸಿರುವ ಕಾರ್‍ಯಕ್ರಮಗಳು/ಯೋಜನೆಗಳು ತಮ್ಮದು ಎಂಬ ಭಾವನೆಯನ್ನು ಅವರಲ್ಲಿ ಮೂಡಿಸುವುದು.

೨. ಕಾರ್‍ಯಕ್ರಮಗಳ ಬಗ್ಗೆ ನಂಬಿಕೆ, ಆತ್ಮೀಯತೆ, ಭಾವನಾತ್ಮಕತೆಯನ್ನು ಜನರಲ್ಲಿ ಬೆಳೆಸುವುದು.

೩. ಕಾರ್ಯಕ್ರಮಗಳು ತಮ್ಮ ಅಭಿವೃದ್ಧಿಗೆ ಎಂಬ ಭಾವನೆ ಮೂಡಿಸುವುದು.

೪. ಪ್ರಾಮಾಣಿಕವಾಗಿ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಕಾರ್ಯಕ್ರಮ ಯಶಸ್ವಿಗೊಳ್ಳಲು ಸಹಕರಿಸುವಂತೆ ಮನವೊಲಿಸುವುದು.

ಇದು ಸರ್ಕಾರಗಳು/ಯೋಜನಾಧಿಕಾರಿಗಳು ಮೊದಲು ಮಾಡಬೇಕಾದ ಕೆಲಸ. ಅಲ್ಲದೆ;

೧. ಜನರಲ್ಲಿ ತಮ್ಮ ಸ್ವಂತ ಶಕ್ತಿಯ ಬಗ್ಗೆ ನಂಬಿಕೆ ಹುಟ್ಟುಹಾಕಿ ಸಬಲೀಕರಣದ ಮೂಲಕ ಗ್ರಾಮೀಣ ಬಡಜನರಲ್ಲಿ ಹೊಸ ಶಕ್ತಿ ಮತ್ತು ಉದಯೋನ್ಮುಖ ಬೆಳವಣಿಗೆಯನ್ನು ಉಂಟುಮಾಡುವುದು.

೨. ಆ ಮೂಲಕ ಜನರಲ್ಲಿ ಅವರ ಪಾಲ್ಗೊಳ್ಳುವಿಕೆ ಇಲ್ಲದಿದ್ದರೆ ಸರ್ಕಾರದ ಯೋಜನೆಗಳು ವಿಫಲಗೊಳ್ಳುತ್ತವೆ ಎನ್ನುವ ಚಿತ್ರಣವನ್ನು ನೀಡುವುದು.

೩. ಕಾರ್ಯಕ್ರಮಗಳು ಹೇಗೆ ಅವರ ಮೂಲ ಸಮಸ್ಯೆಗಳನ್ನು ನಿವಾರಿಸಬಲ್ಲವು ಎಂಬುದನ್ನು ತಿಳಿಯಪಡಿಸುವುದು.

ಅಲ್ಲದೆ, ಸರ್ಕಾರಗಳು ಯೋಜನೆಗಳನ್ನು ಜಾರಿಗೊಳಿಸುವ ಸಂದರ್ಭದಲ್ಲಿ ಪ್ರಸ್ತುತ ಸನ್ನಿವೇಶ ಮತ್ತು ಸ್ಥಿತಿಗತಿಗಳನ್ನು ಪರಿಣಾಮಕಾರಿಯಾಗಿ ಬಳಸಿ ಕೊಳ್ಳಬೇಕು. ಸರ್ಕಾರಗಳು ಸಮುದಾಯದ ಮುಖಂಡರುಗಳನ್ನು ಮತ್ತು ಮಾದರಿ ವ್ಯಕ್ತಿಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳಬೇಕಾಗುತ್ತದೆ. ಆ ಮೂಲಕ ಪರಿಣಾಮಕಾರಿ ವಿಕೇಂದ್ರೀಕರಣಕ್ಕೆ ಹಾದಿ ಮಾಡಿಕೊಡಬೇಕಾಗುತ್ತದೆ. ಸಮುದಾಯದ ಬದಲಾವಣೆಯಲ್ಲಿ ಮತ್ತು ಸಮುದಾಯದಲ್ಲಿ ಅರಿವು ಉಂಟುಮಾಡುವುದರಲ್ಲಿ ವಿವಿಧ ಮಾಧ್ಯಮಗಳೂ ಸಹ ಪ್ರಮುಖ ಪಾತ್ರ ವಹಿಸುತ್ತವೆ. ಮಾಧ್ಯಮಗಳಿಂದಲೇ ಜನರು ವಿವಿಧ ಸರ್ಕಾರಿ ಕಾರ್ಯಕ್ರಮಗಳ ಬಗ್ಗೆ ಹೆಚ್ಚಿನ ಮಾಹಿತಿ ಪಡೆಯುತ್ತಾರೆ. ಶಿಕ್ಷಣ, ತರಬೇತಿ ಮತ್ತು ಸಂವೇದನೆ ಕಾರ್ಯಕ್ರಮಗಳನ್ನು ರೂಪಿಸಿ ಜಾರಿಗೆ ತರುವುದರಲ್ಲಿ ಮಾಧ್ಯಮಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ. ಇಂದಿನ ತಾಂತ್ರಿಕ ಯುಗದಲ್ಲಿ ತಾಂತ್ರಿಕತೆ ಯಾವುದನ್ನೂ ಬಿಟ್ಟಿಲ್ಲ. ಹಾಗೇ ಗ್ರಾಮೀಣ ಅಭಿವೃದ್ಧಿಯಲ್ಲೂ ತಾಂತ್ರಿಕತೆ ಪ್ರಮುಖ ಪಾತ್ರ ವಹಿಸುತ್ತದೆ. ತಂತ್ರಜ್ಞಾನದ ವರ್ಗಾವಣೆ, ಅರಿವು, ಹವಾಮಾನ ವೈಪರೀತ್ಯ, ಮಾರುಕಟ್ಟೆಯ ಬೆಳವಣಿಗೆ, ಮುಂತಾದವುಗಳ ಮೂಲಕ ಪರಿಣಾಮಕಾರಿಯಾದ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೆ ತರಬಹುದಾಗಿದೆ.

ಸ್ಥಳೀಯ ಸಂಪನ್ಮೂಲಗಳ ಬಳಕೆ, ನಿರ್ವಹಣೆ ಮುಂತಾದವುಗಳು ಗ್ರಾಮೀಣ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಸ್ಥಳೀಯ ಸರ್ಕಾರಗಳು, ಅಂದರೆ ಪಂಚಾಯತಿಗಳ ಪ್ರಜಾಪ್ರಭುತ್ವೀಕರಣ ಮತ್ತು ಸಶಕ್ತೀಕರಣದ ಮೂಲಕ ಫಲಾನುಭವಿಗಳ ಭಾಗವಹಿಸುವಿಕೆ ಮತ್ತು ನಿರ್ಧಾರ ಕೈಗೊಳ್ಳುವ ಶಕ್ತಿಯನ್ನು ಹೆಚ್ಚಿಸುವುದರತ್ತ ಯೋಜನೆಗಳಲ್ಲಿ ಸಾಕಷ್ಟು ಅವಕಾಶಗಳಿರಬೇಕಾಗುತ್ತದೆ. ಈ ಸಂಬಂಧ ಸರ್ಕಾರವು 'ಹಿಂದುಳಿದ ಪ್ರದೇಶಗಳ ಅಭಿವೃದ್ಧಿ ನಿಧಿ' ಎಂಬ ಕಾರ್ಯಕ್ರಮವನ್ನು ೨೦೦೭ರಲ್ಲೇ ಆರಂಭಿಸಿದೆ. ಈ ಕಾರ್ಯಕ್ರಮ ಪಂಚಾಯತ್ ರಾಜ್ ವ್ಯವಸ್ಥೆಯನ್ನು ಬಲಿಷ್ಠಗೊಳಿಸುವುದು ಮತ್ತು ಅಭಿವೃದ್ಧಿ ಯೋಜನೆಗಳಿಗೆ ಉತ್ತರದಾಯಿತ್ವವನ್ನು ನಿರೂಪಿಸುವುದು, ಈ ಯೋಜನೆಯ ಮೂಲಕ ಹಣವನ್ನು ನೇರವಾಗಿ ಪಂಚಾಯತಿಗಳಿಗೆ ಬಿಡುಗಡೆ ಮಾಡುವುದು ಹಾಗೂ ಆ ಹಣವನ್ನು ಸಮರ್ಪಕವಾಗಿ ಬಳಸುವ ನಿರ್ಧಾರವನ್ನು ಸ್ಥಳೀಯ ಜನರ ವಿವೇಚನೆಗೆ ಬಿಡುವುದು ಮುಂತಾದವು ಸೇರಿವೆ. ಇದಕ್ಕೆ ಸಂಬಂಧಿಸಿದಂತೆ ಅವಶ್ಯಕವಾದ ಆಡಳಿತ ಮತ್ತು ತಾಂತ್ರಿಕ ನೆರವನ್ನು ಪಂಚಾಯತಿಗಳಿಗೆ ಒದಗಿಸಲು ಸರ್ಕಾರ ಕ್ರಮಗಳನ್ನು ಕೈಗೊಳ್ಳಬೇಕು.

ಭಾರತದಲ್ಲಿ ವಿಕೇಂದ್ರೀಕರಣದ ಕಲ್ಪನೆ ೧೯೬೦ರಲ್ಲೇ ಆರಂಭವಾಯಿತು. ಕೇಂದ್ರೀಕೃತ ವ್ಯವಸ್ಥೆಯಿಂದ ರಷ್ಯಾ ಮತ್ತು ಚೈನಾದಂತಹ ದೇಶಗಳು ವೇಗವಾಗಿ ಆರ್ಥಿಕ ಬೆಳವಣಿಗೆಯನ್ನು ಕಂಡವು; ವಿಕೇಂದ್ರೀಕರಣ ತತ್ವದಿಂದ ಕ್ಷಿಪ್ರವಾದ ಅಭಿವೃದ್ಧಿ ಸಾಧ್ಯವಿಲ್ಲ; ಭಾರತದಂತಹ ಬಹು ಸಂಸ್ಕೃತಿಯುಳ್ಳ ಬಹಳ ವಿಶಾಲವಾದ ದೇಶಕ್ಕೆ ಕೇಂದ್ರೀಕೃತ ವ್ಯವಸ್ಥೆ ಪ್ರಜಾಪ್ರಭುತ್ವ ತತ್ವಕ್ಕೆ ವಿರೋಧವಾದುದು ಎಂಬುದು ತಜ್ಞರ ಅಭಿಪ್ರಾಯ. ಕೇಂದ್ರೀಕೃತ ವ್ಯವಸ್ಥೆಯಲ್ಲಿ ಸರ್ಕಾರ ಪ್ರಮುಖ ಪಾತ್ರವಹಿಸುತ್ತದೆ. ಇಲ್ಲಿ ಜನರಿಗೆ ಯಾವುದೇ ರೀತಿಯ ಅವಕಾಶ ಇರುವುದಿಲ್ಲ. ಕೇಂದ್ರೀಕೃತ ವ್ಯವಸ್ಥೆ ಈ ಕೆಳಗಿನ ಸಮಸ್ಯೆಗಳನ್ನು ಉಂಟುಮಾಡುತ್ತದೆ.

೧. ನಿರ್ವಹಣೆ ಸಮಸ್ಯೆ

೨. ಭ್ರಷ್ಟಾಚಾರದ ಸಮಸ್ಯೆ

೩. ಅಧಿಕಾರದ ದುರ್ಬಳಕೆ

೪. ಸಂಪನ್ಮೂಲದ ದುರುಪಯೋಗ

೫. ಅಧಿಕಾರಶಾಹಿಗಳ ಪ್ರಾಬಲ್ಯ

೬. ಹಣಕಾಸಿನ ನಿರ್ವಹಣೆಯಲ್ಲಿ ಸಮಸ್ಯೆ

೭. ಪ್ರಜಾಪ್ರಭುತ್ವ ತತ್ವಕ್ಕೆ ವಿರೋಧ

೮. ರಾಜಕೀಯ ಪಕ್ಷಗಳ ಮಧ್ಯಪ್ರವೇಶ

೯. ಫಲಾನುಭವಿಗಳ ಸಹಭಾಗಿತ್ವ ಶೂನ್ಯವಾಗಿರುತ್ತದೆ

೧೦. ಮೌಲ್ಯಮಾಪನ ವ್ಯವಸ್ಥೆಯಲ್ಲಿ ಅಸಮಾನತೆ

ಕೇಂದ್ರೀಕೃತ ವ್ಯವಸ್ಥೆಯಿಂದ ಹಲವಾರು ಪ್ರಯೋಜನಗಳೂ ಸಹ ಕಂಡುಬಂದಿವೆ.

೧. ತ್ವರಿತ ಬೆಳವಣಿಗೆ ಮತ್ತು ಅಭಿವೃದ್ಧಿ.

೨. ಅಧಿಕಾರಶಾಹಿಗಳ ಸಂಖ್ಯೆ ಕಡಿಮೆಯಾಗುತ್ತದೆ.

೩. ಶೀಘ್ರವಾಗಿ ನಿರ್ಧಾರ ತೆಗೆದುಕೊಳ್ಳಲಾಗುತ್ತದೆ.

೪. ತ್ವರಿತ ವಿಲೇವಾರಿ ಮತ್ತು ಯೋಜನೆ ಜಾರಿ ಸಾಧ್ಯ.

**ವಿಕೇಂದ್ರೀಕರಣ ವ್ಯವಸ್ಥೆಯ ಪ್ರಯೋಜನಗಳು**

ವಿಕೇಂದ್ರೀಕರಣ ವ್ಯವಸ್ಥೆಯಲ್ಲಿ ಹಲವಾರು ಉಪಯೋಗಗಳು ಕಂಡುಬರುತ್ತವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಪಟ್ಟಿ ಮಾಡಲಾಗಿದೆ :

೧. ಪ್ರಜಾಪ್ರಭುತ್ವ ನೀತಿಯ ಪರವಾಗಿರುತ್ತದೆ.

೨. ಅಧಿಕಾರ ಕೇವಲ ಒಬ್ಬ ವ್ಯಕ್ತಿಯಲ್ಲೇ ಇರುವುದಿಲ್ಲ.

೩. ಒಂದು ಹಂತದವರೆಗೆ ಭ್ರಷ್ಟಾಚಾರ ನಿಗ್ರಹ ಸಾಧ್ಯ.

೪. ಯೋಜನೆಗಳು ಪರಿಣಾಮಕಾರಿಯಾಗಿ ಜಾರಿಯಾಗಲು ಸಾಧ್ಯ.

ಹಲವಾರು ಅಧ್ಯಯನಗಳ ನಂತರ ಸರ್ಕಾರ ಗ್ರಾಮೀಣ ಅಭಿವೃದ್ಧಿಯಲ್ಲಿ

ವಿಕೇಂದ್ರೀಕರಣ ವ್ಯವಸ್ಥೆಯನ್ನು ಜಾರಿಗೆ ತರಲು ಮುಂದಾಯಿತು. ಇದರಿಂದ ವಿಕೇಂದ್ರೀಕರಣ, ಆರ್ಥಿಕ ಬೆಳವಣಿಗೆ ಮತ್ತು ರಾಜಕೀಯ ಆಡಳಿತಕ್ಕೆ ಪರಸ್ಪರ ಸಹಕಾರ ಹೊಂದಿದ ಪರಿಣಾಮಕಾರಿ ಗ್ರಾಮೀಣ ಅಭಿವೃದ್ಧಿ ಸಾಧ್ಯವೆಂದು ಸಂಶೋಧನೆಗಳಿಂದ ನಿರೂಪಿತವಾಗಿದೆ. ಮಾನವ ಸಂಪನ್ಮೂಲವನ್ನು ವಿಕೇಂದ್ರೀಕರಣಗೊಳಿಸಿ ಪರಿಣಾಮಕಾರಿಯಾದ ಭೌಗೋಳಿಕ ಮತ್ತು ಸಾಂಸ್ಕೃತಿಕವಾಗಿ ನಿರ್ದಿಷ್ಟಪಡಿಸಿದ ಯೋಜನೆಗಳಿಗೆ ತಕ್ಕಂತೆ ಅನುಷ್ಠಾನಕ್ಕೆ ತರಲು ಈ ಮೂಲಕ ಸಾಧ್ಯವೆಂದು ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಹೆಚ್ಚಿನ ವಿಕೇಂದ್ರೀಕರಣದಿಂದ ಸ್ಥಳೀಯ ಸಮಸ್ಯೆಗಳ ಪರಿಣಾಮಕಾರಿ ನಿವಾರಣೆ ಸಾಧ್ಯವೆಂದು ರಾಜಕೀಯ ಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ಇದು ಸ್ಥಳೀಯ ಜನರಿಗೆ ಅತ್ಯುತ್ತಮವಾಗಿ ಅಭಿವೃದ್ಧಿ ಮತ್ತು ಉತ್ತರದಾಯಿತ್ವದ ಹೊಣೆ ನೀಡಲು ಸಾಧ್ಯವೆಂದು ಹಲವಾರು ಅಧ್ಯಯನಗಳು ದೃಢಪಡಿಸಿವೆ. ವಿಕೇಂದ್ರೀಕರಣ ವ್ಯವಸ್ಥೆಯಿಂದ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು ಹೆಚ್ಚು ಹೆಚ್ಚು ಜನರನ್ನು ಸುಲಭವಾಗಿ ತಲುಪಲು ಸಾಧ್ಯ.

ಸ್ಥಳೀಯರು ಮತ್ತು ಸ್ಥಳೀಯ ಸರ್ಕಾರದ ಜಂಟಿ ಯೋಜನೆಯಲ್ಲಿ ಸಂಪನ್ಮೂಲಗಳ ನಿರ್ವಹಣೆಯನ್ನು ಪರಿಣಾಮಕಾರಿಯಾಗಿ ನಿರ್ವಹಿಸಬಹುದೆಂದು ಸಹ ಅಭಿಪ್ರಾಯಪಡಲಾಗಿದೆ. ಅಲ್ಲದೆ ವಿಕೇಂದ್ರೀಕರಣ ವ್ಯವಸ್ಥೆಯಿಂದ ಪ್ರಜಾಪ್ರಭುತ್ವ ಮತ್ತು ಸ್ವಶಕ್ತೀಕರಣದಿಂದ ಸ್ಥಳೀಯ ಸರಕಾರಗಳು ನಿರ್ಧಾರ ಕೈಗೊಳ್ಳುವಿಕೆಯಲ್ಲಿ ಸ್ಥಳೀಯ ದುರ್ಬಲ ವರ್ಗದ ಜನರ ಸಹಕಾರದಿಂದ ಸಾಧ್ಯವಾಗುತ್ತದೆ. ವಿಕೇಂದ್ರೀಕರಣ ವ್ಯವಸ್ಥೆಯು ಪರಿಣಾಮಕಾರಿ ಯೋಜನೆಗಳು ಕೆಳಮಟ್ಟದಿಂದ ಕ್ರಮೇಣ ನೀತಿ ನಿರೂಪಕರಿಗೆ ತಲುಪುವ ಯೋಜನೆಯಾಗಿರುತ್ತದೆ. ಇದರಿಂದ ಸ್ಥಳೀಯ ಪ್ರದೇಶಗಳ ಅಭಿವೃದ್ಧಿಗೆ ಅತ್ಯುತ್ತಮ ಯೋಜನೆಗಳನ್ನು ರೂಪಿಸಲು ಸಾಧ್ಯ. ೧೯೬೬ರ ಆಡಳಿತ ಸುಧಾರಣಾ ಆಯೋಗವು ಸಹ ವಿಕೇಂದ್ರೀಕರಣ ವ್ಯವಸ್ಥೆಯಿಂದ ಸ್ಥಳೀಯ ಆಡಳಿತ ಇನ್ನೂ ಪರಿಣಾಮಕಾರಿಯಾಗಲು ಸಾಧ್ಯವೆಂದು ತನ್ನ ವರದಿಯಲ್ಲಿ ಉಲ್ಲೇಖಿಸಿದೆ.

೨೦೦೭ರಲ್ಲಿ ಹೊಸ (ಬಿ. ಆರ್. ಜಿ. ಎಫ್.) ಯೋಜನೆಯನ್ನು ದೇಶದಾದ್ಯಂತ ಜಾರಿಗೆ ತರಲಾಗಿದೆ. ಈ ಮೂಲಕ ಗ್ರಾಮೀಣ ಪ್ರದೇಶದಲ್ಲಿ ಆರ್ಥಿಕ ಬೆಳವಣಿಗೆ ಮತ್ತು ಜೀವನ ಮಟ್ಟ ಸುಧಾರಣೆ ಸಾಧ್ಯವೆಂಬ ಅಭಿಪ್ರಾಯವನ್ನು ತಜ್ಞರು ವ್ಯಕ್ತಪಡಿಸಿದ್ದಾರೆ. ಸ್ಥಳೀಯ ಜನರು ಕೆಲವು ನಿರ್ಧಾರಗಳಲ್ಲಿ ಪರಿಣಾಮಕಾರಿಯಾಗಿ ಭಾಗವಹಿಸಲು ಸಾಧ್ಯವೆಂದು ಅಭಿಪ್ರಾಯಪಡಲಾಗಿದೆ. ಇದು ಜಿಲ್ಲಾ ಯೋಜನೆಯ ಜಾರಿ ಮತ್ತು ಯೋಜನೆಯಲ್ಲಿನ ಅಂತರವನ್ನು ಪರಿಣಾಮ ಕಾರಿಯಾಗಿ ತುಂಬಲು ಸಾಧ್ಯವೆಂದು ಇನ್ನೂ ಹಲವಾರು ಆಯಾಮಗಳಲ್ಲಿ ಸಾಬೀತಾಗಿದೆ. ಯೋಜನೆಯ ವ್ಯಾಪ್ತಿಗೆ ಬಾರದ ಅಗತ್ಯ ಮೂಲಭೂತ ಸೌಕರ್ಯ ಮತ್ತು ಇತರೆ ಅವಶ್ಯಕತೆಗಳಿಗೆ ಬಿ.ಆರ್.ಜಿ.ಎಫ್. ಯೋಜನೆಯಲ್ಲಿ ಹೆಚ್ಚಿನ ಒತ್ತು ನೀಡುವುದರಿಂದ ಪಂಚಾಯತ್ ವ್ಯವಸ್ಥೆ ಇನ್ನಷ್ಟು ಬಲಿಷ್ಠವಾಗಬಲ್ಲದು ಎಂಬುದು ತಜ್ಞರ ಅಭಿಪ್ರಾಯ. ಈ ಯೋಜನೆಯಲ್ಲಿ ಎರಡು ವಿಧಗಳಿವೆ :

೧. ಅಭಿವೃದ್ಧಿ ನಿಧಿ ೨. ಸಾಮರ್ಥ್ಯ ವೃದ್ಧಿ ನಿಧಿ

ಅಭಿವೃದ್ಧಿ ನಿಧಿಯನ್ನು ಬಳಸಿಕೊಳ್ಳುವ ವಿವೇಚನೆಯನ್ನು ಪಂಚಾಯತ್ ವ್ಯವಸ್ಥೆಯ ವಿವೇಚನೆಗೆ ಬಿಡಲಾಗಿದೆ. ಅಭಿವೃದ್ಧಿ ನಿಧಿ ಹಲವಾರು ಯೋಜಿತ ಗುರಿಗಳನ್ನು ಹೊಂದಿದೆ. ಬಿ. ಆರ್. ಜಿ. ಎಫ್. ಯೋಜನೆಯಲ್ಲಿ ಸ್ಥಳೀಯ ಮಾನವ ಸಂಪನ್ಮೂಲಗಳ ಶಕ್ತಿವರ್ಧನೆ, ತರಬೇತಿ, ಕಾರ್ಯಾಗಾರದ ಮೂಲಕ ಇನ್ನಷ್ಟು ತ್ವರಿತವಾಗಿ ಮತ್ತು ಅವಶ್ಯಕತೆಗನುಗುಣವಾಗಿ ಸದ್ಬಳಕೆಗೆ ಸಾಕಷ್ಟು ಅವಕಾಶಗಳನ್ನು ರೂಪಿಸಲಾಗಿದೆ. ಪ್ರತಿ ಯೋಜನೆಯು ಸೂಕ್ಷ್ಮ ಯೋಜನೆಯಾಗಿದ್ದು ಅನುಷ್ಠಾನದ ಹೊಣೆಯನ್ನು ಸ್ಥಳೀಯ ಪಂಚಾಯತಿಗೆ ವಹಿಸುವುದರಿಂದ ಪರಿಣಾಮಕಾರಿ ಗ್ರಾಮೀಣ ಬೆಳವಣಿಗೆ ಸಾಧ್ಯ.

ಯಾವುದೇ ಸರಕಾರಿ ಯೋಜನೆಗಳ ಯಶಸ್ಸು ಸ್ಥಳೀಯ ಜನರ ಪರಿಣಾಮಕಾರಿ ಸಹಭಾಗಿತ್ವದಲ್ಲಿ ಅಡಕವಾಗಿದೆ. ಸುಧಾರಿತ ಆಡಳಿತವು ಮತ್ತು ಪೊಲಿಟಿಕಲ್ ಗವರ್ನೆನ್ಸ್ ಕಾರ್ಯಕ್ರಮಗಳ ಪರಿಣಾಮಕಾರಿ ಜಾರಿಯಲ್ಲಿ ಮುಖ್ಯ ಪಾತ್ರ ವಹಿಸುತ್ತವೆ. ಇವುಗಳ ಕೊರತೆಯಿಂದ ಇಂದು ಸಾಧ್ಯವಾಗುತ್ತಿಲ್ಲ. ಸ್ಥಳೀಯ ಜನರನ್ನು ಯೋಜನೆ ರೂಪಿಸುವಿಕೆ ಮತ್ತು ಜಾರಿಯಲ್ಲಿ ವಿಶ್ವಾಸಕ್ಕೆ ಪಡೆದಿಲ್ಲ. ನಿರ್ಧಾರ ಕೈಗೊಳ್ಳುವ ಹಕ್ಕು ಸಹ ಸ್ಥಳೀಯರಿಗೆ ನೀಡಲಾಗಿಲ್ಲ. ದೆಹಲಿಯಲ್ಲಿ ಕುಳಿತು ಹೊಸ ಹೊಸ ಯೋಜನೆಗಳನ್ನು ರವಾನಿಸುವುದರಿಂದ ಯಾವುದೇ ಪ್ರಯೋಜನವಿಲ್ಲ. ಭಾರತದಾದ್ಯಂತ ಬಹುಸಂಸ್ಕೃತಿಯ ಸಮಾಜಕ್ಕೆ ಏಕರೂಪ ವ್ಯವಸ್ಥೆ ಮತ್ತು ನೀತಿ ನಿರೂಪಣೆಯನ್ನು ಜಾರಿಗೊಳಿಸುವುದು ಸಾಧ್ಯವಿಲ್ಲ. ಸರ್ಕಾರದ ವಿಕೇಂದ್ರೀಕರಣ ವ್ಯವಸ್ಥೆಯು ಮೂಲಭೂತ ಸಮಸ್ಯೆಗಳನ್ನು ನಿವಾರಿಸಿ ಪರಿಣಾಮಕಾರಿ ಯೋಜನೆಗಳನ್ನು ರೂಪಿಸಬೇಕಾಗುತ್ತದೆ.

**ಹೊಸ ಗ್ರಾಮೀಣ ಅಭಿವೃದ್ಧಿ ಯೋಜನೆಗಳು ಹೇಗಿರಬೇಕು ?**

೧. ಯೋಜನೆಗಳು ಜನಕೇಂದ್ರೀಕೃತವಾಗಿರಬೇಕು.
೨. ಸ್ಥಳೀಯ ಜನರಿಗೆ ನಿರ್ಧಾರ ಕೈಗೊಳ್ಳಲು ಸಂಪೂರ್ಣ ಹಕ್ಕು ಇರಬೇಕು.
೩. ಸೂಕ್ಷ್ಮ ಯೋಜನೆಗೆ ಅವಕಾಶ ಇರಬೇಕು.
೪. ಸ್ಥಳೀಯ ಸರಕಾರಗಳು ಉತ್ತರದಾಯಿತ್ವವನ್ನು ಹೊಂದಿರಬೇಕು.
೫. ಪರಿಣಾಮಕಾರಿ ವಿಕೇಂದ್ರೀಕರಣ ಅಗತ್ಯ.
೬. ಅಭಿವೃದ್ಧಿಯಲ್ಲಿ ತಂತ್ರಜ್ಞಾನದ ಬಳಕೆ ಅಗತ್ಯ.
೭. ಸ್ಥಳೀಯ ಜನರ ಸಹಭಾಗಿತ್ವ ಅತೀ ಮುಖ್ಯ.
೮. ಸುಧಾರಿತ ಮತ್ತು ಪಾರದರ್ಶಕ ಗ್ರಾಮೀಣ ಆಡಳಿತ ಅಗತ್ಯ.
೯. ನಿರಂತರ ಮೌಲ್ಯಮಾಪನ ಅವಶ್ಯ.
೧೦. ಪಂಚಾಯತ್ ವ್ಯವಸ್ಥೆಯ ಆಮೂಲಾಗ್ರ ಸುಧಾರಣೆ.
೧೧. ಜನರಲ್ಲಿ ಅರಿವುಂಟುಮಾಡುವ ಕಾರ್ಯಕ್ರಮಗಳಿಗೆ ಹೆಚ್ಚು ಒತ್ತು ನೀಡುವಿಕೆ.
೧೨. ಸ್ಥಳೀಯ ಜನರ ಅವಶ್ಯಕತೆಗೆ ಹೆಚ್ಚಿನ ಒತ್ತುನೀಡುವಂತೆ ಯೋಜನೆಗಳ ಜಾರಿ.
೧೩. ಸಾಮಾನ್ಯ ಅಭಿವೃದ್ಧಿ ನಿರ್ವಹಣಾ ಕಾರ್ಯಕ್ರಮಗಳ ಜಾರಿಗೆ ಒತ್ತಾಯ.
೧೪. ಯೋಜನೆ ಜಾರಿಯಲ್ಲಿನ ಅನವಶ್ಯಕ ವಿಳಂಬ ತಪ್ಪಿಸುವುದು.
೧೫. ಮಾಧ್ಯಮಗಳು ಪರಿಣಾಮಕಾರಿ ಪಾತ್ರವಹಿಸುವುದು ಅವಶ್ಯಕ.

**ಪ್ರಸ್ತುತ ಗ್ರಾಮೀಣ ಯೋಜನೆಯಲ್ಲಿ ಇರುವ ಸಮಸ್ಯೆಗಳೆಂದರೆ :**

೧. ವಿಕೇಂದ್ರೀಕರಣ ವ್ಯವಸ್ಥೆ ಸಮಸ್ಯೆಗಳ ಗೂಡಾಗಿದೆ.
೨. ಜನರ ಸಹಭಾಗಿತ್ವಕ್ಕೆ ಅವಕಾಶವಿಲ್ಲ.
೩. ಸ್ಥಳೀಯ ಸರ್ಕಾರೇತರ ಸಂಸ್ಥೆಗಳ ಪಾತ್ರ ತೀರಾ ಕಡಿಮೆ.
೪. ಬ್ಲಾಕ್ ಹಾಗೂ ಜಿಲ್ಲಾ ಮಟ್ಟದ ಯೋಜನೆಗಳಲ್ಲಿ ಸಮಸ್ಯೆ.
೫. ಪಂಚಾಯತ್ ಸದಸ್ಯರ ಅಸಡ್ಡೆ ಮತ್ತು ಬೇಜವಾಬ್ದಾರಿ.
೬. ಸ್ಥಳೀಯ ಸಂಪನ್ಮೂಲಗಳ ಪರಿಣಾಮಕಾರಿ ನಿರ್ವಹಣೆ ಮತ್ತು ಬಳಕೆ ಇಲ್ಲದಿರುವುದು.
೭. ಗ್ರಾಮೀಣ ಜನರಲ್ಲಿ ಅರಿವಿನ ಕೊರತೆ.
೮. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಏಜೆನ್ಸಿ ಕಾರ್ಯಕ್ರಮದ ಪರಿಣಾಮಕಾರಿ ಅನುಷ್ಠಾನದಲ್ಲಿ ತಲೆದೋರುತ್ತಿರುವ ಸಮಸ್ಯೆಗಳು.
೯. ಕಾರ್ಯಕ್ರಮದ ಜಾರಿಯಲ್ಲಿ ಲಿಂಗಭೇದ ಸಮಸ್ಯೆ.
೧೦. ಕೃಷಿ ವಿಶ್ವವಿದ್ಯಾಲಯಗಳ ಮತ್ತು ಬ್ಯಾಂಕ್‌ಗಳ ನಿರಾಸಕ್ತಿ.
೧೧. ಯೋಜನೆ ಜಾರಿಯಲ್ಲಿನ ವಿಳಂಬ ಮತ್ತು ಜಾತಿ ರಾಜಕೀಯ.
೧೨. ಗ್ರಾಮೀಣಾಭಿವೃದ್ಧಿಯಲ್ಲಿ ಸಂಶೋಧನೆಗೆ ಒತ್ತು ನೀಡದಿರುವುದು.
೧೩. ಯೋಜನೆಯ ಕೆಲವು ಹಂತಗಳಲ್ಲಿ ಉಂಟಾಗುತ್ತಿರುವ ನಿರಂತರ ಭ್ರಷ್ಟಾಚಾರ.
೧೪. ಮೂಲಭೂತ ಸೌಕರ್ಯಗಳ ಕೊರತೆಯಿಂದ ನರಳುತ್ತಿರುವ ಗ್ರಾಮ ಪಂಚಾಯತಿಗಳು.
೧೫. ಗ್ರಾಮೀಣ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಸೂಕ್ತ ಮಾನವ ಸಂಪನ್ಮೂಲ ಮತ್ತು ಅನುದಾನಗಳ ಕೊರತೆ.

ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಉಂಟಾಗುವ ಅನಗತ್ಯ ವಿಳಂಬವನ್ನು ತಪ್ಪಿಸಲು ಸರಕಾರ ಹಲವಾರು ಸಾಕಷ್ಟು ಯೋಜನೆಗಳನ್ನು ಜಾರಿಗೊಳಿಸಬೇಕಿದೆ. ಅದರಲ್ಲೂ ಮುಖ್ಯವಾಗಿ ಉತ್ತರದಾಯಿ=ತ್ವದ ಹೊಣೆಯನ್ನು ಸಂಪೂರ್ಣವಾಗಿ ಸ್ಥಳೀಯ ಸರ್ಕಾರಕ್ಕೆ ವಹಿಸಬೇಕಾಗುತ್ತದೆ.

**ಡಾ|| ಡಿ. ಸಿ. ನಂಜುಂಡ**
ಪ್ರವಾಚಕರು ಹಾಗೂ ಉಪ ನಿರ್ದೇಶಕರು
ಸಾಮಾಜಿಕ ಹೊರಗುಳಿಯುವಿಕೆ ಮತ್ತು ಒಳಗೊಳ್ಳುವಿಕೆ ನೀತಿ ಅಧ್ಯಯನ ಕೇಂದ್ರ
ಮಾನವಿಕ ವಿಭಾಗಗಳು, ಮೈಸೂರು ವಿಶ್ವವಿದ್ಯಾಲಯ
ಮೈಸೂರು – ೫೭೦ ೦೦೬

# ಶನಿಗ್ರಹಣ – ಶುಕ್ರಗ್ರಹಣ



**ಸೂ**ರ್ಯನನ್ನು ಚಂದ್ರ ಮರೆ ಮಾಡಿದಾಗ "ಸೂರ್ಯಗ್ರಹಣ" ಎಂದು ಕರೆಯುತ್ತೇವೆ. ಹಾಗೆಯೇ ಶನಿಯನ್ನೂ ಶುಕ್ರನನ್ನೂ ಚಂದ್ರ ಮರೆಮಾಡಬಹುದು. ಅದನ್ನೂ ಶನಿಗ್ರಹಣ, ಶುಕ್ರಗ್ರಹಣ ಎಂದು ಕರೆಯಬಹುದು. ಆದರೆ ಅದನ್ನು ಆಚ್ಛಾದನೆ ಎಂದು ಕರೆಯುತ್ತೇವೆ. ಈ ತಿಂಗಳಲ್ಲಿ ಇಂತಹ ಆಚ್ಛಾದನೆಗಳು ಹೇಗೆ ಕಾಣಬಹುದು ಎಂದು ತಿಳಿಯುವ ಸಾಧ್ಯತೆ ಇದೆ.

ಸಂಜೆ ಕಾಣುವ ಗ್ರಹ ಗುರು. ಚಂದ್ರ ಇದನ್ನು ಆಚ್ಛಾದಿಸುವ ಸಂಭವ ಏನು ಎಂದು ತಿಳಿಯೋಣ. ೧೧ರಂದು ಮತ್ತು ೧೨ರಂದು ಚಂದ್ರ ಮತ್ತು ಗುರುಗ್ರಹಗಳ ಸ್ಥಾನವನ್ನು ಗುರುತಿಸಿಕೊಳ್ಳಿ. ಚಂದ್ರ ಗುರುಗ್ರಹದ ಪಕ್ಕದಿಂದ ಹಾದು ಹೋಗುವುದು ಎಂದು ತಿಳಿಯುತ್ತದೆ. ಹಾಗಾಗಿ ಅದರ ಆಚ್ಛಾದನೆ ಸಾಧ್ಯವಿಲ್ಲ ಎಂದು ಊಹಿಸಬಹುದು. ೧೯ರ ರಾತ್ರಿ ೧೧ಗಂಟೆಗೆ ಪೂರ್ವ ದಿಕ್ಕನ್ನು ನೋಡಿ. ಮಂಗಳ ಮತ್ತು ಚಿತ್ರಾ ನಕ್ಷತ್ರಗಳ ನಡುವೆ ಅರ್ಧಚಂದ್ರ ಉದಯಿಸುತ್ತಿರುತ್ತದೆ. ಅಂದರೆ ಮಂಗಳ ಗ್ರಹದಿಂದ ಸಾಕಷ್ಟು ದೂರ ಇರುವ ಚಂದ್ರ ಅದನ್ನು ಆಚ್ಛಾದಿಸುವುದು ಸಾಧ್ಯವಿಲ್ಲ ಎಂದಾಯಿತು. ಹಾಗೆಯೇ ಚಂದ್ರನನ್ನು ಹಿಂಬಾಲಿಸುತ್ತಾ ಬನ್ನಿ. ಅಂದರೆ ಆ ಮುಂದೆ ಬೆಳಗಿನ ಜಾವ ಚಂದ್ರನನ್ನು ಹುಡುಕಬೇಕು. ೨೨ರ ಬೆಳಿಗ್ಗೆ ಚಂದ್ರನಿಗೆ ಸಮೀಪದಲ್ಲೇ ಒಂದು ಚುಕ್ಕೆ ಕಾಣುತ್ತದೆ. ಅದೇ ಶನಿಗ್ರಹ. ಇಷ್ಟು ಹತ್ತಿರ ಇರುವ ಚುಕ್ಕೆಯನ್ನು ಚಂದ್ರ ಮರೆ ಮಾಡಿದರೂ ಮಾಡಬಹುದು ಎನ್ನಿಸುತ್ತದೆ. ಕ್ರಮೇಣ ಶನಿಯನ್ನು ಸಮೀಪಿಸುವ ಚಂದ್ರ ಅದನ್ನು ಮರೆಮಾಡುವ ದೃಶ್ಯ ನಮಗೆ ನೋಡಲು ಸಿಗುವುದಿಲ್ಲ. ಆದರೆ ಸ್ವಲ್ಪ ದಕ್ಷಿಣದ ಭೂಭಾಗಗಳ (ಆಸ್ಟ್ರೇಲಿಯಾ, ನ್ಯೂಝಿಲೆಂಡ್‌ನಿಂದ ಮಡಗಾಸ್ಕರ್‌ವರೆಗೆ) ಜನ ನೋಡಬಹುದು. ಹೀಗೆ ಮುಂದುವರೆದ ಚಂದ್ರ ೨೬ರ ಬೆಳಗಿನ ಜಾವ ಇನ್ನೊಂದು ಪ್ರಖರ ಚುಕ್ಕೆಗೆ ಅಂಟಿಕೊಂಡಂತೆ ಕಾಣುತ್ತದೆ. ಅದೇ ಶುಕ್ರಗ್ರಹ. ಇದೂ ಕೂಡ ನಮಗೆ ತಪ್ಪಿಹೋಗುವ ಆಚ್ಛಾದನೆಯೇ. ಏಕೆಂದರೆ ಚಂದ್ರ ಶುಕ್ರನನ್ನು ಮುಚ್ಚುವ ವೇಳೆಗೆ ಬೆಳಕಾಗಿಬಿಟ್ಟಿರುತ್ತದೆ.

ಉ
ಕುಂತಿ
ದ್ರೌಪದಿ
ಬ್ರಹ್ಮ ಹೃದಯ
ವಿಜಯಸಾರಥಿ
ಪಾರ್ಥ
ಸಿಂಹ
ಮಿಥುನ
ಕಟಕ
ಗುರು
ಮೇಷ
ಪೂ
ಪ
ವೃಷಭ
ಮಹಾವ್ಯಾಧ
ಲುಬ್ಧಕ
ದ



೨೨ (ಮುಂಜಾವು) ಶನಿ – ಚಂದ್ರ ಜೋಡಿ

ಆದರೆ ಪ್ರತಿ ತಿಂಗಳು ಚಂದ್ರ ಗ್ರಹಗಳನ್ನೇಕೆ ಆಚ್ಛಾದಿಸುವುದಿಲ್ಲ ಎಂಬ ಪ್ರಶ್ನೆಯೂ ಏಳುವುದು. ಇದಕ್ಕೆ ಉತ್ತರ ಗ್ರಹಗಳ ಚಲನೆಯಲ್ಲಿ ಅಡಗಿದೆ. ಚಂದ್ರ ಒಂದು ಸುತ್ತನ್ನು ಮುಗಿಸಿ ಪುನಃ ಗ್ರಹವನ್ನು ಸಮೀಪಿಸಿದಾಗ ಗ್ರಹದ ಸ್ಥಾನ ಬದಲಾಗಿರುತ್ತದೆ. ಆಚ್ಛಾದನೆಯ ಸಂಭವನೀಯತೆಯೂ ವ್ಯತ್ಯಾಸವಾಗುತ್ತದೆ. ನಿಧಾನವಾಗಿ ಸಾಗುವ ಶನಿ ಗ್ರಹದ ಸ್ಥಾನದಲ್ಲಿ ಹೆಚ್ಚಿನ ಬದಲಾವಣೆ ಆಗುವುದಿಲ್ಲ. ಆದ್ದರಿಂದ ಮುಂದಿನ ತಿಂಗಳು ಪುನಃ ಶನಿಗ್ರಹದ ಆಚ್ಛಾದನೆ ನಡೆಯುತ್ತದೆ. ಆ ಮುಂದಿನ ತಿಂಗಳೂ ನಡೆಯುತ್ತದೆ. ಹೀಗೆ ಈ ವರ್ಷದುದ್ದಕ್ಕೂ ಪ್ರತಿ ತಿಂಗಳೂ ಆಚ್ಛಾದನೆ ನಡೆಯುತ್ತದೆಯಾದರೂ ಆಗಸ್ಟ್ ತಿಂಗಳಿನದು ಮಾತ್ರ ನಮಗೆ ಅನುಕೂಲಕರವಾಗಿದೆ. ಆದರೆ ಸಂಜೆ ಕತ್ತಲಾಗುವಾಗ ಆಚ್ಛಾದನೆ ಮುಗಿದುಹೋಗಿರುತ್ತದೆ. ಶನಿಗ್ರಹ ಚಂದ್ರನಿಂದ ದೂರ ಸರಿಯುವುದನ್ನು ಮಾತ್ರ ನೋಡಬಹುದು. ಮುಂದಿನ ತಿಂಗಳುಗಳಲ್ಲಿ ಚಂದ್ರ ಮಂಗಳ ಗ್ರಹವನ್ನು ಹೀಗೆ ಸವರಿಕೊಂಡು ಹೋಗುವುದನ್ನೂ ಕಾಣಬಹುದು.

ಚಂದ್ರ ಪ್ರತಿ ರಾತ್ರಿಯೂ ಯಾವುದೋ ನಕ್ಷತ್ರವನ್ನಂತೂ ಮರೆಮಾಡಿ ಮುಂದೆ ಹೋಗುತ್ತಿರುತ್ತದೆ. ಅಂತಹ ಸಂದರ್ಭಗಳನ್ನು ಉಪಯೋಗಿಸಿ ನಕ್ಷತ್ರಗಳ ವ್ಯಾಸವನ್ನು ಅಳೆಯಬಹುದು.

ಈ ತಿಂಗಳ ಸಂಜೆಯ ಶುಭ್ರ ಆಕಾಶದಲ್ಲಿ ಅನೇಕ ಪ್ರಕಾಶಮಾನ ಗುಚ್ಛಗಳನ್ನು ಗುರುತಿಸಬಹುದು. ನೆತ್ತಿಯಲ್ಲಿ ಕಾಣುವ ನಕ್ಷತ್ರ ಗುಚ್ಛವೇ ಹೈಯಡೆಸ್, ಪ್ರಕಾಶಮಾನವಾದ ನಕ್ಷತ್ರ ರೋಹಿಣಿ. ಅದರಿಂದ ಪಶ್ಚಿಮದ ಪುಟ್ಟ ತ್ರಿಕೋಣವೇ ಮೇಷ. ನೆತ್ತಿಯಿಂದ ಪೂರ್ವಕ್ಕೆ ಕಾಣುವ ಪ್ರಕಾಶಮಾನ ಚುಕ್ಕೆ ಗುರುಗ್ರಹ ಮಿಥುನ ರಾಶಿಯ ಎಲ್ಲೆಯೊಳಗಿದೆ. ತುಸು ದಕ್ಷಿಣಕ್ಕೆ ಮಹಾವ್ಯಾಧ (ಒರೈಯನ್), ಇನ್ನೂ ದಕ್ಷಿಣಕ್ಕೆ ಪ್ರಕಾಶಮಾನ ನಕ್ಷತ್ರ ಲುಬ್ಧಕ. ದಕ್ಷಿಣದ ಅಂಚಿಗೆ ಅಗಸ್ತ್ಯ. ಗುರುಗ್ರಹ ಉತ್ತರಕ್ಕೆ ಕಾಣುವ ಪಂಚಕೋಣಾಕೃತಿಯೇ ವಿಜಯಸಾರಥಿ (ಆರಿಗಾ). ಅದರ ಪಕ್ಕದಲ್ಲಿ ಪಾರ್ಥ (ಪರ್ಸಿಯುಸ್), ಕುಂತಿ (ಕೆಸಿಯೋಪಿಯಾ) ಇವುಗಳನ್ನು ಕಾಣಬಹುದು. ಪಶ್ಚಿಮದಲ್ಲಿ ಪ್ರಕಾಶಮಾನವಾದ ಯಾವುದೇ ಪುಂಜವಿಲ್ಲ. ಮೀನ, ತಿಮಿಂಗಿಲ (ಸೆಟಸ್) ಇವು ಕ್ಷೀಣವಾದ ಪುಂಜಗಳು. (ನಕ್ಷೆ ಸಂಜೆ ಏಳು ಗಂಟೆಗೆ ಅನ್ವಯವಾಗುವುದು)

**ಖಗೋಳ ದಿನಚರಿ**

ಫೆಬ್ರವರಿ ೧ ಬುಧ – ಚಂದ್ರ ನಡುವೆ ೪ ಡಿಗ್ರಿ ಅಂತರ
೫ ಬುಧಗ್ರಹದ ಹಿನ್ನಡೆ ಆರಂಭ. ಚಾಂದ್ರಮಾಸದ ಮೊದಲ ಪಾದ
೧೧ (ಸಂಜೆ) ಚಂದ್ರ – ಗುರು ನಡುವೆ ೫ ಡಿಗ್ರಿ ಅಂತರ*
೧೨ ಚಂದ್ರ – ಅಪಭೂ ಬಿಂದುವಿನಲ್ಲಿ
೧೫ ಹುಣ್ಣಿಮೆ ೦೫:೨೩ಕ್ಕೆ. ಶುಕ್ರಗ್ರಹದ ಗರಿಷ್ಠ ಪ್ರಕಾಶ. ಬುಧಗ್ರಹದ ಯುತಿ
೧೯ (ಮುಂಜಾವು) ಚಂದ್ರ – ಮಂಗಳ ನಡುವೆ ೩ ಡಿಗ್ರಿ ಅಂತರ*
೨೨ (ಮುಂಜಾವು) ಶನಿ – ಚಂದ್ರ ನಡುವೆ ೦.೩ ಡಿಗ್ರಿ ಅಂತರ* (ಆಚ್ಛಾದನೆ ಕಾಣುವುದಿಲ್ಲ) ಚಾಂದ್ರಮಾಸದ ಕೊನೆಯ ಪಾದ
೨೬ (ಮುಂಜಾವು) ಶುಕ್ರ – ಚಂದ್ರ ನಡುವೆ ೦.೪ ಡಿಗ್ರಿ ಅಂತರ* (ಆಚ್ಛಾದನೆ ಕಾಣುವುದಿಲ್ಲ)
೨೭ ಚಂದ್ರ ಪುರಭೂ ಬಿಂದುವಿನಲ್ಲಿ ಚಂದ್ರ – ಬುಧ ನಡುವೆ ೩ ಡಿಗ್ರಿ ಅಂತರ* ಬುಧಗ್ರಹದ ಹಿನ್ನಡೆ ಮುಕ್ತಾಯ (* ಛಾಯಾಗ್ರಹಣಕ್ಕೆ ಸದವಕಾಶ)

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ಹೊಂಗನಸಿನ ಹಸಿರು ಮೆಣಸು ಸಿರಿ

ಮನೆಯ ಮುಂದೆ ಪ್ರತ್ಯಕ್ಷವಾದ ಸೈಕಲಿನವ ಸೊಪ್ಪು ವ್ಯಾಪಾರಿ. ಅವನ ಬಳಿ ಅಡುಗೆ ತಯಾರಿಗೆ ಜೀವಕಳೆ ನೀಡುವ ಶುಂಠಿ, ಹಸಿರು ಮೆಣಸಿನಕಾಯಿ ಯಾವಾಗಲೂ ಲಭ್ಯ. ಹೊಂಗನಸಿನ ಶೀರ್ಷಿಕೆ ಹೊದ್ದ ನಮ್ಮ ನಿವಾಸದ ಎದುರು ಅವನ ಸೈಕಲ್ ಬೆಲ್ ಟ್ರಿಣಗುಟ್ಟಲೇಬೇಕು. ನಾನು ಆತುರಾತುರವಾಗಿ ಚಿಲ್ಲರೆ ಜೋಡಿಸಿ, ಆ ಕರೆಗೆ ಹೊರಗೆ ಹಾರಲೇಬೇಕು. ತರಕಾರಿ, ಹಣ್ಣು ಇವೆಲ್ಲಾ ಕೊಳ್ಳಿ, ಬಿಡಿ, ನೋಡುವುದು ಸಹ ಕಣ್ಣಿಗೆ ಹಬ್ಬ. ನನ್ನ ಕಂಗಳು ಈ ದರುಶನ ಭಾಗ್ಯಕ್ಕೆ ಸದಾ ಕಾತರಿಸುತ್ತವೆ.

ಸೊಪ್ಪು ವ್ಯಾಪಾರಿ, ನಾನು ಪಿ. ಟಿ. ಉಷಾಳನ್ನು ಮೀರಿಸುವಂತೆ ಓಡಿದ್ದು ಕಂಡು, ತುಟಿಯಂಚಲ್ಲೇ ನಕ್ಕ. "ಅಕ್ಕಾ, ಮೆಣಸಿನಕಾಯಿ ಬಹಳ ಫ್ರೆಶ್ ಆಗಿದೆ. ಕಾಲು ಕೆ.ಜಿ.ಗೆ 20 ರೂಪಾಯಿ. ಕೊಡಲಾ ?" ಕಾಲು ಕೆ.ಜಿ. ಹೆಚ್ಚಾಗದೇ ? ಎಂದು ಮನ ಶೀಘ್ರದಲ್ಲೇ ಲೆಕ್ಕ ಹಾಕಿದರೂ, ಕೈ ಮುಂದೆ ಬಾಗಿ ಆ ಮೆಣಸಿನಕಾಯಿ ಪ್ಯಾಕೆಟ್‌ಅನ್ನು ಪಡೆಯಿತು.

ಇದೂ ಸೇರಿ ಮೂರನೇ ಬಾರಿ ನಾನು ಹೀಗೆ ಈ ಹಸಿಮೆಣಸಿನಕಾಯಿ ಕೊಳ್ಳುತ್ತಿರುವುದು. ನಮ್ಮ ಮನೆಯಲ್ಲೇ ಚಿಗುರೊಡೆದು, ಹೂ ತಳೆದ ಮೆಣಸಿನಕಾಯಿ ಸಸಿ, ಪೊದೆಯಾಕಾರದ ಗಿಡವಾದ ನಂತರವೂ ಪ್ರತಿ ಸಲವೂ ನನ್ನ ಕನಸು, ಈ ಹೂ ಈಗ ಉದುರಿದರೆ, ಬರುವ ವಾರ ಚಿತ್ರಾನ್ನ, ಚಟ್ನಿ, ಪಲ್ಯ ಮಾಡುವಾಗ, ಒಗ್ಗರಣೆಗೆ ಬಾಂಡಲೆಯನ್ನು ಒಲೆಯ ಮೇಲಿಟ್ಟು ಬಂದು, ಮೆಣಸಿನಕಾಯಿ ಕಿತ್ತು ಒಯ್ಯಬಹುದು. ಆ ತಾಜಾ ಖಾರದ ಪರಿಮಳದ, ಹಸಿರುಬಣ್ಣದ ರುಚಿಯಲ್ಲಿ ನಾನು ತೇಲಿ ಹೋದದ್ದು ನಿಜ. ಫ್ರಿಜ್‌ನಲ್ಲಿ ಮೊದಲ ಸಲ ಒಂದು ವಾರಕ್ಕಾಗುವಷ್ಟು ಮಾತ್ರ, ಮೆಣಸಿನಕಾಯಿಯನ್ನು ಶೇಖರಿಸಿದ್ದೆ. ಮರುವಾರ ಎಳೆಯ ರವಿ ನಗುತ್ತಾ, ನನ್ನ ಮೆಣಸಿನಕಾಯಿ ಗಿಡ ಚುಂಬಿಸುವಾಗ, ನಾನು ಒಂದು ಪುಟ್ಟ ಕತ್ತರಿ, ಪ್ಲಾಸ್ಟಿಕ್ ಕವರ್ ಹಿಡಿದು ಗಿಡದ ಬಳಿ ಹೋದೆ. ಕೈ ಉಗುರು ತಾಗಿ ನಂಜಾಗಬಾರದೆಂಬ ಕಳಕಳಿ ನನ್ನದು. ಗಿಡದ ಮೈಯನ್ನು ನವಿರಾಗಿ ಸವರಿ ಕಾಯಿ ಕೀಳಲು ಅಪ್ಪಣೆ ಬೇಡಿದೆ. ಆ ಕಾಯಿ ಅದರ ಗಳಿಕೆಯ ಸ್ವತ್ತೆಂಬ ಭಕ್ತಿ ಭಾವ ನನ್ನದು. ಅದು ಗಾಳಿಗೆ ತಲೆಯಾಡಿಸಿದ್ದು ಒಪ್ಪಿಗೆ ನೀಡಿದಂತೆ ಎಂದು ಭಾಸವಾಗಿ, ಕತ್ತರಿಯ ಬಾಯಿ ತೆರೆದು, ಕಳೆದ ವಾರ ಕಂಡಿದ್ದ ಪುಟ್ಟ ಬಿಳಿ ಹೂಗಳ ಅಂಗಳದ ಉಗಮ ಸ್ಥಾನ ನೆನೆದು ಕಾಯಿಗಾಗಿ ಅಲ್ಲಿ ಕತ್ತರಿ ಚಾಚಿದರೆ, ಒಂದಾದರೂ ಕಾಯಿ ಕಾಣಬೇಕಲ್ಲ. ಕೆಳಗೆ ಪಾಟಿನ ಬುಡದ ಮಣ್ಣಲ್ಲಿ ಹೂವಿನ ಕಳೇಬರ ಗೋಚರಿಸಿತೇ ವಿನಾ ಆ ಬೃಹತ್ ಗಿಡದಲ್ಲಿ ಒಂದು ಕಾಯಿಯ ಸುಳಿವೂ ಇಲ್ಲ. ನನ್ನ ನಿರೀಕ್ಷೆ, ಕನಸು ಹುಸಿಯಾದದ್ದಕ್ಕೆ ಕಣ್ಣಂಚು ತೇವವಾಯಿತು. ಆಗ ಅಲ್ಲಿಗೆ, ಬಟ್ಟೆ ಎಳೆಯಲು ಬಂದ ಪತಿರಾಯರು ನನ್ನ ಸಂಕಟದ ಸ್ಥಿತಿಯನ್ನು ಬದಿಯಿಂದಲೇ ಗಮನಿಸಿ, "ನೆಲದಲ್ಲಿ ಗಿಡ ಹಣ್ಣು ಕಾಯಿ, ಹೂ ಬಿಟ್ಟ ಹಾಗೆ ಪಾಟಿನಲ್ಲಿ ಬಿಡತ್ತಾ ? ನಿನಗೆಲ್ಲೋ ಭ್ರಾಂತು" ಎಂದು ಗಾಯಕ್ಕೆ ಉಪ್ಪಿನ ಮುಲಾಮು ಸವರಿದರು. ಅವರು ಯಾವಾಗಲೂ ಹೀಗೆ. ನಮ್ಮ 30 x 40ರ ನಿವೇಶನದಲ್ಲಿ ಮನೆ ಕಟ್ಟಿಸಿ, ಎಲ್ಲಿ ಸುತ್ತಲೂ ಹೆಂಡತಿ ಹಸಿರು ಹಚ್ಚಿಬಿಟ್ಟಾಳೋ ಎನ್ನುವ ಆತಂಕದಲ್ಲಿ, ಸಿಮೆಂಟ್ ಲೇಪ ಮಾಡಿಸಿ, ಅಂತಹ ಆಸೆಯ ಸಮಾಧಿ ಮಾಡಿಬಿಟ್ಟಿದ್ದವರು ಈಗ ಈ ಬಿಟ್ಟಿ ಉಪದೇಶಕ್ಕೆ ಮುಂದಾದದ್ದು ನನ್ನಲ್ಲಿ ಅಡಗಿ ಕೂತಿದ್ದ, ಸಿಟ್ಟಿನ ಜ್ವಾಲಾಮುಖಿಯನ್ನು ಭುಗಿಲೆಬ್ಬಿಸಿತು. ಅದು ಆಸ್ಫೋಟಗೊಳ್ಳದಂತೆ ತಡೆದೆ.

ಆಕಾಶವಾಣಿಯಂತಹ ಪುಣ್ಯಭೂಮಿ ನನ್ನ ಕರ್ಮಭೂಮಿಯೂ ಸಹ. ಅಲ್ಲಿಗೆ ಬಾರದ ತಜ್ಞರಿಲ್ಲ, ತಿಳಿಸದ ವಿಷಯವಿಲ್ಲ. ಕೃಷಿರಂಗ ವಿಭಾಗದ ಸಂದರ್ಶನಕ್ಕೆ ಆಮಂತ್ರಿತರಾಗಿ ಬರುವ ಅನೇಕ ಮಹಾನುಭಾವರು ವೈವಿಧ್ಯಮಯ ವಿಷಯಗಳಲ್ಲಿ ನಿಪುಣರು. ನನ್ನ ಸಹೋದ್ಯೋಗಿ ಮಿತ್ರ ಜಗದೀಶ್ ಸಂಗಡ ನನ್ನ ಹಸಿರು ಹುಚ್ಚಿನ ಗೃಹಪ್ರಯೋಗಗಳ ಬಗ್ಗೆ ಚರ್ಚಿಸಿ, ಹೂವಿನ ಉಡುಗೆ ಉಟ್ಟ ಮೆಣಸಿನಕಾಯಿ ಗಿಡ, ಕಾಯಿ ತೊಡಲು ನಿರಾಕರಿಸುತ್ತಿರುವದರ ಬಗ್ಗೆಯೂ




**ಸಾಯಿಲಕ್ಷ್ಮಿ ಎಸ್.**

ಹಂಚಿಕೊಂಡಿದ್ದೆ. ಸಂಬಂಧಪಟ್ಟ ವಿಷಯ ತಜ್ಞರು ಬಂದಾಗ ನನ್ನನ್ನು ಅವರಿಗೆ ಪರಿಚಯಿಸಿ, ನನ್ನ ಸಂದೇಹ ನಿವೇದಿಸಿಕೊಳ್ಳಲು ಸೂಚನೆ ಕೊಟ್ಟರು. ಆತನು ತಾಳ್ಮೆಯಿಂದ ಕಿವಿಗೊಟ್ಟರು. ನಂತರ ಅವರು ಹೇಳಿದ ಪರಿಹಾರ ಈ ರೀತಿಯದು : "ಮೇಡಂ, ಪ್ರತೀ ಗಿಡಕ್ಕೂ ಒಂದು ಬೆಳಕಿನ ಅವಧಿ ಅಂತಿರತ್ತೆ. ಅಷ್ಟು ಬೆಳಕು ಅದು ಹಿಡಿದಿಟ್ಟುಕೊಳ್ಳುವ ತನಕ, ಅದಕ್ಕೆ ಹೀಚು, ಕಾಯಿ ಬಿಡುವ ತಾಕತ್ತು ದೊರೆಯುವದಿಲ್ಲ. ಮೊದಲು ಸ್ವಲ್ಪ ಬೂದಿ ಚಿಮುಕಿಸಿ. ಪೊಟ್ಯಾಸಿಯಂ ಕೊರತೆಯಿದ್ದರೆ ಸರಿಯಾಗತ್ತೆ. ಹಾಗೆ ನೀರು ಕಡಿಮೆ ಹಾಕಿ. ನೀರು ಹೆಚ್ಚಾದರೆ ಹೀಗೇ ಹೀರಿಕೊಂಡು, ಹುಲುಸಾಗಿ ಬೆಳೆದುಬಿಡುತ್ತೆ. ಅದಕ್ಕೆ ಕಾಯಿ ಬಿಡಬೇಕು ಅನ್ನೋ ಕರ್ತವ್ಯ ಪ್ರಜ್ಞೆ ಮರೆತುಹೋಗತ್ತೆ." ನಾನು ನಡುವೆ ಬಾಯಿ ಹಾಕಿದೆ : "ಬುಡದವರೆಗೂ ಕತ್ತರಿಸಿ, ಬೂದಿ ಚಿಮುಕಿಸಿ, ನೀರಿನ ಕೊರತೆ ಏರ್ಪಡಿಸಿದರೆ, ಪುನಃ ಚಿಗುರಿ, ಕಾಯಿ ಚೆನ್ನಾಗಿ ಕಚ್ಚಬಹುದಲ್ವಾ?" ನನ್ನ ಚುರುಕುತನಕ್ಕೆ ತಲೆದೂಗಿದ ಆತ ನಕ್ಕು ನುಡಿದರು, "ಹಾಗೂ ಮಾಡಬಹುದು. ತೊಂದರೆಯೇನಿಲ್ಲ."

ಮಾರನೆಯ ದಿನವೇ ನಾನು ನನ್ನ ಸಖಿ ವನಜಾ, ಕಾಯಿ ಕೀಳಲು ಒಯ್ದ ಕತ್ತರಿಯಿಂದಲೇ, ಬುಡದವರೆಗೂ ಆ ಪೊದೆಯನ್ನು ಸವರಿಬಿಟ್ಟೆವು. ನನಗೆ ಇನ್ನೊಂದು ಯೋಚನೆಯೂ ಹೊಳೆದಿತ್ತು, ಕಾಯಿಗೆ ಖಾರದ ಗುಣ ಬರುವುದೇ ಎಲೆಯಿಂದ ಎಂದಾದ ಮೇಲೆ ಎಲೆಯನ್ನೇಕೆ ಅಡುಗೆಗೆ, ಗಿಡ ಕಾಯಿ ಕೊಡುವವರೆಗೂ ಬಳಸಬಾರದೆಂದು. ಎಲೆಗೆ ಮೆಣಸಿನಕಾಯಿಯ ಘಾಟಿತ್ತೇ ಹೊರತು ಖಾರದ ಅಂಶ ಲವಲೇಶವೂ ಅದರಲ್ಲಿ ಪತ್ತೆಯಾಗದೆ, ನನ್ನ ಯೋಜನೆ ಮುದುರಿ ಕೂತಿತ್ತು. ಕತ್ತರಿಸಿದ ಮೆಣಸಿನಕಾಯಿಯ ಆ ಪೊದೆಯನ್ನು, ಪರಿಸರ ಪ್ರೇಮಿಯಾದ ನಾನು ಮನೆಯ ಮುಂದಿನ ರಸ್ತೆಯಲ್ಲಿ ಬೇರು ಬಿಟ್ಟಿದ್ದ, ಕಾಯಿ ನೀಡಲು ಚೌಕಾಶಿ ಮಾಡುತ್ತಿದ್ದ, ಕಲ್ಪವೃಕ್ಷಕ್ಕೆ ಗೊಬ್ಬರವಾಗಿ ಉಣಿಸಿ, ಧನ್ಯಳಾದೆ. ನಂತರ ಮೆಣಸಿನಕಾಯಿ ಗಿಡದ ಸುತ್ತಲೂ ಮಣ್ಣನ್ನು ಅಡಿಮೇಲು ಮಾಡಿ, ಬೂದಿ ಉದುರಿಸಿ, 'ಚಿಗುರು ಚಿಗುರು ನನ್ನ ಪ್ರೀತಿಯ ಗಿಡವೇ' ಎಂದು ಪ್ರಾರ್ಥಿಸಿದೆ. ಪ್ರಾರ್ಥನೆಗೆ ಪರ್ವತವನ್ನೇ ಕದಲಿಸುವ ಶಕ್ತಿಯಿರುವಾಗ, ಮೆಣಸಿನಕಾಯಿ ಗಿಡ ಯಾವ ಮಹಾ ? ಬಿಸಿಲು, ಮಳೆ, ಗಾಳಿಯ ಅಟ್ಟಹಾಸಕ್ಕೆ ಸಿಲುಕಿದ ನನ್ನ ಮುದ್ದು ಗಿಡ, ಕೆಲದಿನಗಳಲ್ಲಿ ಮೈ ತುಂಬಾ ಚಿಗುರಿನ ಅಲಂಕಾರ ತೊಟ್ಟು, ನಗತೊಡಗಿತು. ಕಾಲಕ್ರಮೇಣ ಪುಟ್ಟ ಪುಟ್ಟ ಬಿಳಿಯ ಹೂಗಳು ಅದರ ಮೇಲೆಲ್ಲಾ ಅರಳಿ, ನೃತ್ಯವಾಡತೊಡಗಿದವು. ಅದ ನೋಡಿ, ಮೈಮರೆತು ಕನಸು ಹೆಣೆಯುತ್ತಿದ್ದ ನನ್ನನ್ನು ವಾಸ್ತವಕ್ಕೆ ಕರೆತಂದವನು ಆ ಸೈಕಲ್ ಸವಾರ, ಸೊಪ್ಪು ವ್ಯಾಪಾರಿ. ಅವನು ಟ್ರಿಣ ಟ್ರಿಣ ಬೆಲ್ ಸದ್ದು ಮಾಡುತ್ತಾ, "ಅಕ್ಕಾ, ಮೆಣಸಿನಕಾಯಿ ಬೇಡ್ವಾ? ಬಲು ಚೆಂದಾಗಿದೆ. ತೊಟ್ಟು ನೋಡಿ, ಆರಿಸಿ ತಂದು, ಪ್ಯಾಕೆಟ್ ಮಾಡಿದೀನಿ. ಏನು ಹೊಳಪು ಕಾಯಿಗೆ. ನೋಡಿ" ಎಂದು ಚಿವುಟಿ ನನ್ನ ಗಮನವನ್ನು ಕಾಯಿಯತ್ತ ಸೆಳೆದ. ಫ್ರಿಜ್‌ನಲ್ಲಿ ಮೆಣಸಿನಕಾಯಿ ಮುಗಿದಿದ್ದು ಕೂಡಲೇ ನೆನಪಾಗಿ, ಮಾಮೂಲಿ ಕಾಲು ಕೆ.ಜಿ. ಕೊಂಡು, ತಂದು ಜೋಪಾನ ಮಾಡಿದೆ; ಇದೇ ಕಡೆಯ ಬಾರಿ, ಇನ್ನು ಕೊಳ್ಳುವಷ್ಟಿಲ್ಲ. ಮುಂದಿನ ಸಲ ಬಂದಾಗ ಅವನಿಗೆ ಹೇಳಿಬಿಡಬೇಕು, ಮೆಣಸಿನಕಾಯಿ ಮನೆಯಲ್ಲೇ ಬೆಳೆಯುತ್ತಿರುವೆನೆಂದು. ಕಾಯಿ ಕೊಳ್ಳುತ್ತಿರುವಾಗ ವನಜಾ ಬಂದವಳೇ, "ಆಂಟಿ, ಮೆಣಸಿನಕಾಯಿ ಗಿಡ ಬಿಟ್ಟು, ಉಳಿದ ಗಿಡಗಳಿಗೆಲ್ಲಾ ನೀರು ಹಾಕಿದೀನಿ" ಎಂದು ತನ್ನ ನಿತ್ಯದ ಸಸ್ಯೋಪಚಾರದ ಬಗ್ಗೆ ವರದಿ ಹೇಳಿದಳು. "ವನಜಾ, ಪಂಕ್ತಿಭೇದ ಮಾಡಬಾರದು. ಸ್ವಲ್ಪ ಹಾಕು ಅಷ್ಟೇ" ಎಂದೆ.

ಹಿಂದೆ ಬಾಡಿಗೆ ಮನೆಗಳಲ್ಲಿ ಉಂಡ ಬವಣೆಗಳೇ, ಸ್ವಗೃಹವನ್ನು ಹೊಂದುವ




## ಸುದ್ದಿ ಚಿತ್ರ




ಕಳೆದ ೧೦.೦೧.೨೦೧೪ರಂದು ಮೈಸೂರಿನ ಜೆ.ಎಲ್.ಬಿ. ರಸ್ತೆಯಲ್ಲಿರುವ ಇನ್‌ಸ್ಟಿಟ್ಯೂಷನ್ ಆಫ್ ಎಂಜಿನಿಯರ್ಸ್ ಸಭಾಂಗಣದಲ್ಲಿ ನವಕರ್ನಾಟಕ ಪ್ರಕಾಶನ, ಮೈಸೂರು ಶಾಖೆ, ಇವರು ಎರಡು ಮುಖ್ಯ ಕಾರ್ಯಕ್ರಮಗಳನ್ನು ಆಯೋಜಿಸಿದ್ದರು. ಅವು ನವಕರ್ನಾಟಕ ಪ್ರಕಾಶನದ 'ವ್ಯಕ್ತಿ ವಿಕಸನ ಮಾಲೆ'ಯ ೧೭ ಪುಸ್ತಕಗಳ ಲೋಕಾರ್ಪಣೆ ಹಾಗೂ ಜನಪ್ರಿಯ ನವಕರ್ನಾಟಕ ಪುಸ್ತಕ ಮೇಳದ ಉದ್ಘಾಟನೆ. ಡಾ॥ ಟಿ. ಎಸ್. ಸತ್ಯನಾರಾಯಣ ರಾವ್ (ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು, ಮನೋವೈದ್ಯಕೀಯ ವಿಭಾಗ, ಜೆ.ಎಸ್.ಎಸ್. ಕಾಲೇಜು, ಮೈಸೂರು) ಅಧ್ಯಕ್ಷತೆ ವಹಿಸಿ ಕೃತಿಗಳನ್ನು ಲೋಕಾರ್ಪಣೆ ಮಾಡಿದರು. ಡಾ॥ ಸಿ. ಆರ್. ಚಂದ್ರಶೇಖರ್ (ಮನೋವೈದ್ಯರು, ನಿವೃತ್ತ ಪ್ರಾಧ್ಯಾಪಕರು, ನಿಮ್ಹಾನ್ಸ್, ವ್ಯಕ್ತಿವಿಕಸನ ಮಾಲೆಯ ಸಂಪಾದಕರು) ಪುಸ್ತಕಮೇಳವನ್ನು ಉದ್ಘಾಟಿಸಿದರು. ಭಾಷಾ ಸಂವಹನಕಾರ – ಭಾಷಾ ವಿಜ್ಞಾನಿ ಶ್ರೀ ಎಂ. ಅಬ್ದುಲ್ ರೆಹಮಾನ್ ಪಾಷ ಸೊಗಸಾಗಿ ಕೃತಿ ಪರಿಚಯ ಮಾಡಿಕೊಟ್ಟರು. ಪುಸ್ತಕಾಭಿಮಾನಿಗಳು ಬಹುಸಂಖ್ಯೆಯಲ್ಲಿ ನೆರೆದಿದ್ದರು.









ಹೊಂಗನಸು, ಬಯಕೆ ನಮ್ಮಲ್ಲಿ ಬಿತ್ತಿದ್ದು, ಅದ್ಯಾವ ಪುಣ್ಯಫಲದಿಂದಲೋ ಸಾಕಾರವಾಗಿ, ನಮ್ಮ ಗೂಡು ಮಾಡು ಹೊದ್ದು, ಇಂದು ನಲಿದಾಡುತ್ತಿದೆ. ಇಲ್ಲಿ ಹಸಿರು ಹಚ್ಚುವ, ಹೊಚ್ಚುವ ನನ್ನ ಸಂಕಲ್ಪಕ್ಕೆ ವಿಘ್ನ ಒಡ್ಡಿದ್ದು, ಅಂಗಳದ ಸುತ್ತಲಿನ ಸಿಮೆಂಟ್ ನೆಲ. ಆದರೂ ಛಲ ಬಿಡದೆ, ಟೆರೇಸ್ ಗಾರ್ಡನ್ ಪ್ರಯೋಗಕ್ಕಿಳಿದು, ಸುಮಾರು 60 ಕುಂಡಗಳಲ್ಲಿ ಬೀಜ ಬಿತ್ತಿ, ನೀರುಣಿಸಿ, ತರಕಾರಿ ಹಣ್ಣಿನ ಸಿಪ್ಪೆಗಳಿಂದ ಯಥೇಚ್ಛವಾಗಿ ಪೋಷಿಸಿರುವ ಫಲವೇ, ಬೇಕೆನಿಸಿದಾಗ ಕೈಯಳತೆಗೆ ದಕ್ಕುವ ದೊಡ್ಡಪತ್ರೆ, ಹೊನಗೊನೆ ಸೊಪ್ಪು, ಅಂಗೈ ಅಗಲದ ವೀಳ್ಯದೆಲೆ, ಪುದಿನಾ, ಬಸಳೆ, ಕರಿಬೇವು ಇತ್ಯಾದಿ ಸಸ್ಯ ಸಂಪತ್ತು. ಈ ಗುಂಪಿಗೆ ಮೆಣಸಿನಕಾಯಿ ಗಿಡವನ್ನು ಸೇರ್ಪಡೆ ಮಾಡುವ ನನ್ನ ಸ್ವಪ್ನ ಸಾಕ್ಷಾತ್ಕಾರವಾಗುವಲ್ಲಿ ಮೇಲಿಂದ ಮೇಲೆ ಅಪಯಶಸ್ಸನ್ನೇ ಕಾಣತೊಡಗಿದಾಗ, ನನಗಾದ ಆಘಾತ ಊಹಿಸಲೂ ಅಸದಳ. ನನ್ನ ಪಾಟ್ ಗಾರ್ಡನ್‌ನಲ್ಲಿ ಸ್ಥಳಾವಕಾಶ ಲಭಿಸದ, ಎಷ್ಟೋ ಗೆಡ್ಡೆ, ಬೀಜಗಳಿಗೆ, ನಾನು ನಮ್ಮ ಆಕಾಶವಾಣಿಯ ಮುಂಭಾಗದ, ಸೊಂಪಾದ ಉದ್ಯಾನದಲ್ಲಿ, ಜಾಗ ಕಲ್ಪಿಸಿರುವೆ. ಹಾಗೆಯೇ ಅನೇಕ ಬಗೆಯ ಹೂಗಿಡಗಳ ಪುಟ್ಟ ಸಸಿಗಳು, ಬೀಜಗಳಿಗೆ, ಹೊನಗೊನೆ ಸೊಪ್ಪು, ಅಲೋವೇರಾ ಗಿಡಕ್ಕೆ ಪಕ್ಕದ ರಸ್ತೆಯ ಗೆಳತಿಯರ ಮನೆಯಲ್ಲಿ ಆಶ್ರಯ ಕಲ್ಪಿಸಿ, ಆ ಹಸಿರು ಉತ್ಪನ್ನದ ಹಕ್ಕುಸ್ವಾಮ್ಯತೆಯನ್ನು ನಾನೇ ಉಳಿಸಿಕೊಂಡಿರುವೆ. ಅವುಗಳ ಆರೋಗ್ಯದ ಬಗ್ಗೆ ನನ್ನ ಸುತ್ತಾಟದ ಸಮಯದಲ್ಲಿ ಗಮನಿಸಿ ಸಲಹೆಯನ್ನು ನೀಡುವೆ. ಅವುಗಳ ಎಲೆ, ಕಾಯಿ, ಹಣ್ಣು ಹೂಗಳ ಬಗ್ಗೆ ಸಂತಸವನ್ನು ಹಂಚಿಕೊಳ್ಳುವೆ. ಸಾಮಂತ ರಾಜರು, ಸಾಮ್ರಾಟನಿಗೆ ಒಪ್ಪಿಸುವ ಕಪ್ಪಕಾಣಿಕೆಯಂತೆ, ನನಗೆ ಅವರ ಸಸ್ಯೋತ್ಪನ್ನದ ಒಂದು ಪಾಲು, ಪಕ್ಕದ ರಸ್ತೆಯಿಂದ ಆಗಾಗ ಬಂದು ಸೇರಿ, ನನ್ನ ಆನಂದವನ್ನು ಹೆಚ್ಚಿಸುತ್ತದೆ. ಸ್ವಂತ ನೆಲವಿಲ್ಲದಿರಲೇನು ಪರರ ಸ್ಥಳವೂ ನನ್ನದಲ್ಲವೇ ? ಎಂದು ಬೀಗುವಂತೆ ಒತ್ತಾಯಿಸುತ್ತದೆ. ನೆಲದಲ್ಲಿ ಮೂಡಿ, ಗಾಳಿಯಲ್ಲಿ ಆಡಿ, ಅರಳಿ ಓಡಿ, ಬಳಿ ಬಂದ ಹೊನೆಗೊನೆ ಸೊಪ್ಪಿನ ಬಣ್ಣ, ಆಕಾರ, ರುಚಿ ! ಪಾಟ್‌ನಲ್ಲಿ ಬೆಳೆದಿದ್ದಕ್ಕಿಂತ ಭಿನ್ನ. ಅದನ್ನು ಸವಿದೇ ಹೇಳಬೇಕು. ಅಂತಹ ರುಚಿ ! ನನ್ನಪ್ಪ ಹಸಿರುಪ್ರೇಮಿ. ಅವರು ಹೇಳುತ್ತಿದ್ದ ಮಾತು ನೆನಪಾಗುತ್ತದೆ. 'ಭೂ ತಾಯಿ ತೊಡೆಯಲ್ಲಿ ನಲಿದು ಬೆಳೆದ ಗಿಡಗಳು, ಅವುಗಳ ಕಳೆಯೇ ಬೇರೆ. ಪಾಟ್‌ನಲ್ಲಿ ಬೆಳೆಸಿದ ಗಿಡಗಳು, ಮಲತಾಯಿ ಹತ್ತಿರ ದೊಡ್ಡವರಾದ ಮಕ್ಕಳ ಹಾಗೆ." ಈ ಮಾತು ನನ್ನ ಟೆರೇಸ್ ತೋಟಗಾರಿಕೆಗೆ, ಅದರ ಉತ್ಪನ್ನಕ್ಕೆ ಹೆಚ್ಚು ಅನ್ವಯವಾಗುತ್ತದೆ.

ನೆಲದ ಮಣ್ಣಿನ ಅಭಾವದ ಕೊರತೆಯನ್ನು, ಸಹೃದಯರು ಅರಿತಿದ್ದರೂ ನನಗೆ ನಾನಾ ಮೂಲಗಳಿಂದ, ಮೂಲೆಗಳಿಂದ ಗಿಡಗಂಟೆ, ಗೆಡ್ಡೆ, ಬೀಜ ಎಲ್ಲವನ್ನು ಬಲು ಪ್ರೀತಿಯಿಂದ ಕಳಿಸಿಕೊಡುತ್ತಾರೆ. ಒಬ್ಬೊಬ್ಬರ ಹೆಸರನ್ನು ಸದಾ ಸ್ಮರಿಸುವ ಹಾಗೆ, ಒಂದೊಂದು ಗಿಡ ನೆಡುವ, ಬಳ್ಳಿ ಹಬ್ಬಿಸುವ ಆಸೆ ನನಗೆ. ಈ ಕೆಲಸಕ್ಕೆ ನನ್ನಲ್ಲಿರುವ 60 ಕುಂಡಗಳು ಯಾವ ಮೂಲೆಗೆ ? ಕಡೇಪಕ್ಷ ನಾಲ್ಕು ಎಕರೆ ಸಮೃದ್ಧ, ಭೂಪ್ರದೇಶವಾದರೂ ಬೇಕು. ರಾಜಧಾನಿ ಬೆಂಗಳೂರು ಮತ್ತು ಅಕ್ಕಪಕ್ಕದಲ್ಲಿ ಅದು ದೊರೆಯಲು ಸಾಧ್ಯವೇ ?

ಈಚೆಗೆ ಗೆಳತಿ ರಾಜೇಶ್ವರಿ ಅವರ ಮನೆಗೆ ಭೇಟಿಯಿತ್ತಾಗ. ಅರಶಿನ, ಕುಂಕುಮ, ತಾಂಬೂಲದೊಡನೆ ಕಾಣಿಕೆ ನೀಡುವಂತೆ, ಪುಟ್ಟ ಆಲೂಗೆಡ್ಡೆಯ ಗಾತ್ರದ ಎರಡು ಗೆಡ್ಡೆ ಬಳುವಳಿಯಾಗಿತ್ತು, ಉದ್ದೇಶ ವಿವರಿಸಿದರು : "ಇದು ಸೌಗಂಧಿಕಾ ಪುಷ್ಪದ ಗೆಡ್ಡೆ. ಸಿಗೋದು ಬಹಳ ಅಪರೂಪ. ಹಾಗಾಗಿ ಬೇಡಿಕೆ ಜಾಸ್ತಿ. ನಿಮಗಾಗಿ ಜೋಪಾನ ಮಾಡಿದೀನಿ."

"ಎಲ್ಲಿ ಹಾಕಲಿ ಇದನ್ನ ? ತಲೆ ಮೇಲೆ ಮಣ್ಣು ಹಾಕಿ ಬೆಳೆಸಬೇಕು ಅಷ್ಟೇ" ಎಂದೆ ಗಾಬರಿಯಿಂದ. "ಏನೂ ಕಷ್ಟ ಇಲ್ಲಪ್ಪ, ಇರೋ ಪಾಟ್‌ನಲ್ಲೇ ಒಂದು ಕಡೆ ಹೂತುಬಿಡಿ" ಎಂದರು. ಪೂರ್ಣ ಪ್ರಮಾಣದ ತೋಟಗಾರಿಕೆಯ ಕನಸನ್ನೇ ಹೊಂಗನಸಲ್ಲಿ ಹೂತಾಯಿತು ಎಂದುಕೊಂಡೆ. ಹಾಗೆ ನುಡಿಯಲಿಲ್ಲ ಅಷ್ಟೆ.

ರಾಜೇಶ್ವರಿ ಹೇಳಿದ ನೀತಿಪಾಠ ನಮ್ಮ ವನಜಾಕ್ಷಿ ಈಗಾಗಲೇ ಅನುಷ್ಠಾನಕ್ಕೆ ತಂದೇಬಿಟ್ಟಿದ್ದಾಳೆ. ಕರಿಬೇವು ಗಿಡ ಕಂಗೊಳಿಸಲಾರಂಭಿಸಿದ ಅಲ್ಯೂಮಿನಿಯಂ ಬಕೆಟ್‌ನಲ್ಲಿ ತುಳಸಿಯು ತನಗೆ ದೊರೆವ ಪೂಜಾರ್ಹತೆ, ಸ್ಥಾನಮಾನ, ಧಾರ್ಮಿಕ ಗೌರವ, ಭಕ್ತಿ ಎಲ್ಲವನ್ನು ಗಾಳಿಗೆ ತೂರಿ ಓಲಾಡುತ್ತಿದೆ. ಹೊನಗೊನೆ ಸೊಪ್ಪಿನೊಡನೆ ಎಂದೋ ಎಸೆದ ಈರುಳ್ಳಿ ಗೆಡ್ಡೆ ತಲೆಯೆತ್ತಿ, ಅದರ ಕಾವು ಹೂ ಬಿಡುವ ಹಂತ ಮುಟ್ಟಿದೆ. ಮಿತ್ರೆ ವಿಂಧ್ಯಾ ನೀಡಿದ ಜಾಜಿ ಕಡ್ಡಿ, ಚಿಗುರಿ ಇನ್ನೇನು ಮೊಗ್ಗು ಕಚ್ಚಿತು ಎನ್ನುವಾಗ, ಬದಿಗೆ ಪಾಲು ಬೇಡಲು ಪ್ರತ್ಯಕ್ಷವಾಯಿತೊಂದು ನಾಟಿ ಟೊಮ್ಯಾಟೋ ಸಸಿ. ಅದು ಬಲು ಚೂಟಿಯಾಗಿ ಹರಡಿ, ಜಾಜಿ ತಲೆಯೆತ್ತದಂತೆ ಮಾಡಿ, ತನ್ನ ಭಾರಕ್ಕೆ ತಾನೇ ಕುಸಿದು ಟೆರೇಸಿನ ಸಿಮೆಂಟ್ ನೆಲದಲ್ಲಿ ಮೈ ಚೆಲ್ಲಿ, ಮಲಗಿತು. ದಂಡಿ ದಂಡಿ ಕಾಯಿ ನೀಡಿ, 'ರಂಗನಾಥ ಟೊಮ್ಯಾಟೋ' ಎಂಬ ಬಿರುದು ಪಡೆಯಿತು. ಬದನೆ ಸಸಿ ನೆಟ್ಟ ಕುಂಡದಲ್ಲಿ, ಗಣಿಕೆ ಸೊಪ್ಪು ಯಾವ ಮಾಯದಲ್ಲೋ ವ್ಯಾಪಿಸಿ, ತನಗೆ ಹತ್ತಿದ ಬಿಳಿ ಪೌಡರಿನಂತಹ ರೋಗವನ್ನು ಅದಕ್ಕೂ ಧಾರಾಳವಾಗಿ ಅಂಟಿಸಿ, ಅದರಲ್ಲೊಡೆವ ಬದನೆಕಾಯಿ, ಪಕ್ಕದ ಪಾಟಿನ ರಂಗನಾಥ ಟೊಮ್ಯಾಟೋ ಕಾಯಿ ಬೆರಸಿ ಮಾಡಬಹುದಾದ ನನ್ನ ಸಾಂಬಾರ್ ಸ್ವಪ್ನಕ್ಕೆ, ಸದ್ದಿಲ್ಲದೆ ಕೊಳ್ಳಿಯಿಟ್ಟಿತು. ಹೀಗೆ ಅವೆಷ್ಟು ಗಿಡಗಳು ಒಂದೇ ಪಾಟಿನಲ್ಲಿ ಜನ್ಮ ತಳೆದೋ, ವನಜಾಳ ಕೈ ಚಳಕದಿಂದ ಆಕಸ್ಮಿಕವಾಗಿ ಒಂದಾಗಿಯೋ 'ಪಾಟ್ ತೋಟ'ದ ಬಯಕೆಯ ನೋವು ನಲಿವಿನ ಪರಿಚಯ, ವಿಸ್ತಾರವಾಗೇ ಮಾಡಿಕೊಟ್ಟವು. ಈಗ ಗೆಳತಿ ರಾಜೇಶ್ವರಿ ಸೌಗಂಧಿಕಾ ಪುಷ್ಪದ ಗೆಡ್ಡೆ ನೀಡುತ್ತಿದ್ದಾರೆ. ಪುರಾಣ ಕಾಲದಲ್ಲಿ ಭೀಮ ಪರಿಶ್ರಮದಿಂದ ತಂದು ನೆಟ್ಟ ಸೌಗಂಧಿಕಾ ಕುಸುಮ, ಅನಾಯಾಸವಾಗಿ ಸಿಕ್ಕರೂ ನಾನು ಅದನ್ನು ಕಾಪಾಡಲು ಬೆದರುವಂತಾಯಿತಲ್ಲ ಎಂಬ ಬೇಸರ ಮೂಡಿತು. ನಿರ್ವಾಹವಿಲ್ಲದೆ ಸ್ವೀಕರಿಸಿ ತಂದೆ.

ಮಾರನೆಯ ದಿನ ನನ್ನ ಹಾಗೂ ಸಖೀಮಣಿ ವನಜಾಕ್ಷಿಯ ಗಮನ ಸೆಳೆದಿದ್ದು, ಮತ್ತೊಮ್ಮೆ ಹೂವಿನ ಉಡುಗೆ ಉಟ್ಟ, ಮೆಣಸಿನಕಾಯಿ ಗಿಡ. ಅದನ್ನು ನೋಡಿ ನಾನೆಂದೆ. "ಪುಣ್ಯವಿಲ್ಲ, ಪುರುಷಾರ್ಥವಿಲ್ಲ. ಹೂ ಬಿಟ್ಟದ್ದೇ ಬಿಟ್ಟದ್ದು. ಆಸೆ ಹುಟ್ಟಿಸಿದ್ದೇ ಹುಟ್ಟಿಸಿದ್ದು. ಒಂದು ಕಾಯಿಲ್ಲ, ಕರಿಮಣಿಯಿಲ್ಲ." ವನಜಾಕ್ಷಿ ನಾನು 'ಸೋ' ಎಂದದ್ದಕ್ಕೆ ತನ್ನ ಸೋಬಾನೆ ರಾಗ ಸೇರಿಸಿದಳು, "ಹೌದು ಆಂಟಿ, ನನಗಂತೂ ಈ ಮೆಣಸಿನಕಾಯಿ ಗಿಡ ನೋಡಿದರೆ, ಕೋಪದಿಂದ ಮೈ ಉರಿಯುತ್ತೆ. ಬೇರಿಗೆ ನೀರು ಹಾಕಿದೆ, ಎಲೆಗೆಲ್ಲಾ ಸ್ನಾನ ಮಾಡಿಸಿದೆ, ಬೂದಿ ಚಿಮುಕಿಸಿದೆ. ಒಂದೊಂದಾ ಇದಕ್ಕೆ ಮಾಡಿರೋ ಉಪಚಾರ ! ಈಗ ತಿರುಗಿ ಹೂ ಬಿಟ್ಟು, ತಮಾಷೆ ನೋಡ್ತಿದೆ."

"ಹೋಗಲಿ ಬಿಡು ವನಜಾ, ಅದರ ತಳೀನೇ ಸರಿ ಇಲ್ಲವೇನೋ. ಮನೆಗೆ ಪೇಂಟ್ ಹೊಡೆಸಿದಾಗ, ಆ ದೊಡ್ಡ ಡಬ್ಬವನ್ನು ಹುಷಾರಾಗಿ ತೆಗೆದಿಟ್ಟು, ಮಣ್ಣು, ಗೊಬ್ಬರ ತುಂಬಿಸಿ, ಸಸಿ ಹಾಕಿದ್ವಿ. ಬರೀ ಬೆಳೀತು, ಅಷ್ಟೆ. ಕೆಲವರು ಇರ್ತಾರಲ್ಲ ನೋಡೋಕೆ ಆಡಾತೀಡಾಗಿ, ಆದರೆ ದಡ್ಡ ಶಿಖಾಮಣಿಗಳು. ಇದು ಅದೇ ಜಾತೀದು. ಅದ್ಸರಿ, ರಾಜೇಶ್ವರಿ ಹೂವಿನ ಗಿಡದ ಗೆಡ್ಡೆ ಕೊಟ್ಟಿದ್ದಾರೆ. ಆ ಪಾಟಲ್ಲೇ ಹಾಕಿ ಬಿಡು", ಎಂದು ಒಂದು ಅವರೇಬಳ್ಳಿ, ಹಿಡಿ ಕಾಯಿ ಕೊಟ್ಟು, ಒಣಗಿದ ಕುಂಡದತ್ತ ತೋರಿ, ತುರ್ತು ಕೆಲಸದ ನಿಮಿತ್ತ, ಕೆಳಗಿಳಿದು ಬಂದೆ. ಸಂಜೆ ಒಣಗಿದ ಬಟ್ಟೆ ತರಲು ಹೋದಾಗ, ನನ್ನ ಆದೇಶ ತಪ್ಪಾಗಿ ಅರ್ಥ ಮಾಡಿಕೊಂಡಿದ್ದ ವನಜಾ, ಮೆಣಸಿನಕಾಯಿ ಗಿಡ ಕಿತ್ತು, ಅಡಿಗೆ ಹಾಕಿ, ಅಲ್ಲೇ ಆ ಸೌಗಂಧಿಕಾ ಪುಷ್ಪದ ಗೆಡ್ಡೆ ಹೂಳಿಬಿಟ್ಟಿದ್ದಳು. ವನಜಾಳ ಈ ತಪ್ಪುಗ್ರಹಿಕೆ, ನನ್ನಲ್ಲಿ ಕೋಪ ಉಕ್ಕಿಸಿತು. ನೊಂದು ಮಲಗಿದ ಮೆಣಸಿನಕಾಯಿ ಗಿಡ ಕೈಗೆತ್ತಿಕೊಂಡೆ, ಅದರ ಬೇರು, ಕಾಂಡ, ಹೂ ನೇವರಿಸಿ, ಅದೇ ಕುಂಡದಲ್ಲೇ ಅಗೆದು, ಅದನ್ನು ನೆಟ್ಟು, ನೀರೆರೆದೆ. ದಿನಕಳೆದಂತೆ ಅದು ತಲೆಯೆತ್ತಲೇ ಇಲ್ಲ. ನಡು ಬಾಗಿ, ಮುಲುಗುತ್ತಾ ಮಲಗೇ ಬಿಟ್ಟಿತು. ವನಜಾಳಿಗೆ ಅದರ ಆ ದೈನ್ಯಸ್ಥಿತಿ ತೋರಿ, ಅದಕ್ಕೆ ಅವಳೇ ಕಾರಣವೆಂದು, ತರಾಟೆಗೆ ತೆಗೆದುಕೊಂಡೆ. "ಆಂಟಿ ನನಗೆ ಆ ಹೂಗೆಡ್ಡೆ, ಒಣಗಿದ ಅವರೆ ಗಿಡದ ಪಾಟಿನಲ್ಲಿ ನೆಡಬೇಕೂಂತ ತಿಳೀಲಿಲ್ಲ", ಎಂದು ಬೇಸರಪಟ್ಟಳು. ಈಗ ಅದೇ ಸ್ಥಳದಲ್ಲಿ, ಈರುಳ್ಳಿ ಗೆಡ್ಡೆ ಮಿಶ್ರಬೆಳೆಯಾಗಿ ನೆಟ್ಟು, ಕೃಷಿ ಮಾಡುವ ಕನಸಿದೆ. ಈರುಳ್ಳಿ ಸಿಗದಿದ್ದರೂ ಅದರ ಕಾವು ರುಚಿ ಎಂಬ ಹಂಬಲ ನಮ್ಮದು. ಅಂದ ಹಾಗೆ ಹೊರಗೆ, ಸೈಕಲ್ ಸೊಪ್ಪು ವ್ಯಾಪಾರಿ, "ಅಕ್ಕಾ, ಹಸಿಮೆಣಸಿನಕಾಯಿ ಬೇಕಾ ?" ಎಂದು ಕೂಗಿದ ಹಾಗಾಯಿತಲ್ಲ ?

ಸಾಯಿಲಕ್ಷ್ಮಿ ಎಸ್.
'ಹೊಂಗನಸು', ಸಿ–೧೯೫೦, ಸಹಕಾರ ನಗರ
ಬೆಂಗಳೂರು – ೫೬೦ ೦೯೨







**ದೈಹಿಕ ಕಾಯಿಲೆಗಳು ಮತ್ತು ಕಣ್ಣು**

*ಡಾ॥ ಎಚ್. ಎಸ್. ಮೋಹನ್*

**ಪುಟ : ೧೨೮ ಬೆಲೆ : ರೂ. ೯೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೧

*ನಮ್ಮ ದೇಹದ ಒಂದೊಂದು ಅಂಗಕ್ಕೂ ಒಬ್ಬೊಬ್ಬ ತಜ್ಞವೈದ್ಯರಿರುವ ಕಾಲವಿದು. ಹಾಗಿದ್ದಾಗ ನೇತ್ರವೈದ್ಯರು ಕಣ್ಣು ಪರೀಕ್ಷೆ ಮಾಡುವಾಗ ದೇಹದ ಇನ್ನಿತರ ಕಾಯಿಲೆಗಳ ಬಗ್ಗೆ ಸುಳಿವು ನೀಡಬಲ್ಲರೆ? ಕಣ್ಣು ಹಳದಿ ಬಣ್ಣಕ್ಕೆ ತಿರುಗಿದೆಯೆ? ಕಾಮಾಲೆ ಎಂದು ನಮಗೂ ಗೊತ್ತು. ಕಣ್ಮುಂದೆ ಬೆಳಕು ಆಡಿದಂತೆ ಎನ್ನಿಸುವುದೇ? ಸ್ವಲ್ಪ ಹೊತ್ತಿನಲ್ಲಿ ನಿಮಗೆ ತಲೆನೋವು–ವಾಂತಿ ಬರಬಹುದು. ಕಣ್ಣು ಇದ್ದಕ್ಕಿದ್ದಂತೆ ಮಂಜಾಯಿತೇ? ನಿಮಗೆ ರಕ್ತದಲ್ಲಿ ಸಕ್ಕರೆ ಅಂಶ ಹೆಚ್ಚಿರಬಹುದು! ಹಾಗಾಗಿ ಕಣ್ಣಿನ ತೊಂದರೆ ಕೇವಲ ಕಣ್ಣಿಗೆ ಮಾತ್ರ ಸೀಮಿತವಲ್ಲ; ತಜ್ಞ ನೇತ್ರವೈದ್ಯರು ತಮ್ಮ ಅನುಭವದಿಂದ ದೇಹದ ಇತರ ಕಾಯಿಲೆಗಳನ್ನೂ ಸಹ ಪತ್ತೆಹಚ್ಚಬಲ್ಲರೆಂದು ಈ ಕೃತಿಯ ವೈದ್ಯಲೇಖಕರು ಹೇಳುತ್ತಾರೆ. ಕೆಲವು ದೈಹಿಕ ಕಾಯಿಲೆಗಳು ಕಣ್ಣಿನಲ್ಲಿ ವ್ಯಕ್ತವಾಗುವ ಲಕ್ಷಣ – ಸೂಕ್ಷ್ಮ ವ್ಯತ್ಯಾಸಗಳಿಂದ ತಿಳಿದುಬರುತ್ತವೆ. ಅನುಮಾನಿಸಿ ಇತರ ವೈದ್ಯರಲ್ಲಿ ತಪಾಸಣೆಗೆ ಕಳಿಸಿದಾಗ ಆ ರೋಗವು ದೃಢಪಟ್ಟು ಚಿಕಿತ್ಸೆ ಮಾಡಿದಾಗ ಕಣ್ಣಿನ ತೊಂದರೆ ತಂತಾನೆ ನಿವಾರಣೆಗೊಂಡಿದೆ. ಸಾಕಷ್ಟು ಚಿತ್ರಗಳಿದ್ದು ನೀವು ಸುಲಭವಾಗಿ ಅರ್ಥೈಸಿಕೊಳ್ಳಬಲ್ಲಿರಿ. ಯಾವ ಗೊಂದಲವೂ ಇಲ್ಲ. ಇಷ್ಟಲ್ಲದೆ ದೈಹಿಕ ಕಾಯಿಲೆಗಳಿಂದ ನಮ್ಮ ಕಣ್ಣುಗಳಿಗೂ ಅಪಾರ ಹಾನಿ ಸಂಭವಿಸಬಹುದು. ಆಮೂಲಾಗ್ರವಾಗಿ ಈ ಪುಸ್ತಕವನ್ನೋದಿ. ನಿಮ್ಮ ದೇಹ, ಕಣ್ಣುಗಳನ್ನು ಜೋಪಾನವಾಗಿ ನೋಡಿಕೊಳ್ಳಿ.*

**ಆರ್ ಎಸ್ ಎಸ್ ಅಂತರಂಗ** — *ಎ. ಕೆ. ಸುಬ್ಬಯ್ಯ*

**ಪುಟ : vi + ೧೧೦** **ಬೆಲೆ : ರೂ. ೬೦**

**ಕಲ್ಲುಗುಂಡಿ ಎಸ್ಟೇಟ್,** ಬೆಳ್ಳೂರು – ಹುದಿಕೇರಿ, ವಿರಾಜಪೇಟೆ ತಾಲ್ಲೂಕು, ಕೊಡಗು ಜಿಲ್ಲೆ

*ಈ ದೇಶವನ್ನು ಹಿಂದೂ ದೇಶವನ್ನಾಗಿಸುವ ಸಂಚು ಹೂಡುವುದು ಮತ್ತು ಕೋಮು ಗಲಭೆ ಎಬ್ಬಿಸಿ ಅನ್ಯ ಧರ್ಮೀಯರನ್ನು ಸದೆಬಡಿಯುವುದು ನಾವಿಂದು ದೇಶದೆಲ್ಲೆಡೆ ಕಾಣುತ್ತಿದ್ದೇವೆ. ಶಾಂತಿ ಕದಡುವ ಕೋಮುವಾದಿ ಸಂಘಟನೆಯೆಂದೇ ಕುಖ್ಯಾತಿ ಪಡೆದಿರುವ ಆರ್ ಎಸ್ ಎಸ್ ಎಂಬ ಗೋಮುಖವ್ಯಾಘ್ರದಂತಿರುವ ವಿನಾಶಕಾರಿ ಶಕ್ತಿಯೊಂದರ ಪರಿಚಯ ಇಲ್ಲಿದೆ. ಇದು ಬಹಳ ಹಿಂದಿನಿಂದಲೂ ನಮ್ಮ ದೇಶದಲ್ಲಿ ಬೇರೂರಿ ವಿಷವೃಕ್ಷದಂತೆ ಬೆಳೆದಿದೆ. ರಾಷ್ಟ್ರೀಯ ಸ್ವಯಂ ಸೇವಕ ಸಂಘವು ಸಂಕ್ಷಿಪ್ತವಾಗಿ ಆರ್ ಎಸ್ ಎಸ್ ಆಗಿದೆ. ವಿಶ್ವ ಹಿಂದೂ ಪರಿಷತ್, ಜನಸಂಘ, ಸಂಘಪರಿವಾರ, ಭಜರಂಗದಳ, ಜನತಾ ಪಾರ್ಟಿ – ಮುಂದೆ ಇಂದಿನ ಭಾರತೀಯ ಜನತಾ ಪಾರ್ಟಿ ಮುಂತಾಗಿ ಅನೇಕ ಅಪರಾವತಾರಗಳನ್ನು ತಾಳಿ ಗುಪ್ತಗಾಮಿನಿಯಾಗಿ ಯಾವುದಾದರೂ ಪಕ್ಷದ ಮೂಲಕ ಒಳನುಸುಳಿ ಅಧಿಕಾರ ಹಿಡಿಯಲು ಹವಣಿಸಿ ಸೋತಿದೆ. ಆದರೆ ಇಂದಿನ ದಿನಮಾನದಲ್ಲಿ ಕೆಲವೊಂದು ಕಡೆ ಗೆದ್ದೂ ಇದೆ. ಅದು ಗುಜರಾತಿನಲ್ಲಿಂದು ತನ್ನ ನಿಜರೂಪವನ್ನು ತೋರಿಸಿ ಜನತೆಯನ್ನು ಬೆಚ್ಚಿಬೀಳಿಸಿದೆ. ಆರ್ ಎಸ್ ಎಸ್ ಕಾರ್ಯಕರ್ತರ ನಿಜ ಬಣ್ಣವೇನೆಂದು ಇದನ್ನೋದಿದರೆ ತಿಳಿದೀತು. ಕುರಿಗಳ ಹಿಂಡಿನಲ್ಲಿರುವ ತೋಳವನ್ನು ಗುರುತಿಸಬಹುದು... ಆದರೆ ಕುರಿಯ ರೂಪ ಧರಿಸಿದ ತೋಳನನ್ನು ಗುರುತಿಸುವುದು ಅಸಾಧ್ಯ! ಇದು ಮುಖವಾಡದ ಮಹಿಮೆ. ಇಂದು ಮತದಾರನಿಗೆ ಯಾರು ಹಿತವರು ತನಗೆ ಎಂಬ ಗೊಂದಲ ಉಂಟಾಗಿದೆ.*



**ಎಲ್ಲರ ಬೆರಳಲ್ಲೂ ಅಂಟಿಕೊಂಡ ದುಃಖವೇ...** **(ಪದ್ಯಗಳು)** — *ಸುಬ್ಬು ಹೊಲೆಯಾರ್*

**ಪುಟ : ೧೨ + ೧೦೩ = ೧೧೫** **ಬೆಲೆ : ರೂ. ೧೦೦**

**ಸಂಸ್ಕೃತಿ ಪ್ರಕಾಶನ,** # ೫೮ ಎಫ್, ಆದರ್ಶ ಕಾಲೋನಿ, ಕಾಂಟೋನ್ಮೆಂಟ್, ಬಳ್ಳಾರಿ – ೧೦೪

*ಮುಖಪುಟದ ಅಸಹಾಯಕ ಮೊಗದಲ್ಲಿನ ಭಾವನೆಗಳೇನಿರಬಹುದು? ಹುಡುಕಿದರೂ ಅರ್ಧ ಪರ್ಸೆಂಟ್ ಸಂತಸದ ಸುಳಿವಿಲ್ಲ. ದುಃಖದ ಮಡುವಿನಲ್ಲಿ ಈಜಾಡಿ ಸಂತೋಷವನ್ನು ಮೇಲ್ವರ್ಗಗಳಿಗೆ ಧಾರೆಯೆರೆದು ಕೊಟ್ಟಿರುವ ಮುಖವಿದು. ಕೆಲವರಲ್ಲಿ ಕ್ರೌರ್ಯ ಮೊಳಕೆಯೊಡೆಯಲು ತಕ್ಕಂತಹ ಭೂಮಿಕೆ – ಸಿಡಿಯಲು ಸನ್ನದ್ಧವಾದ ಅದಮ್ಯ ಸಿಡಿಮದ್ದು! ಇಲ್ಲಿನ ಮುಖದ ಒಂದೊಂದು ಭಾವನೆಗಳು ಈ ಸಂಕಲನದ ಒಂದೊಂದು ಕವನಗಳಲ್ಲೂ ಪಡಿಮೂಡಿವೆ. ಇವು ದೀನ ದಲಿತರ ಹಾಡು–ಪಾಡು. ದೈನ್ಯತೆಯೇ ಮೂರ್ತಿವೆತ್ತಂತಿರುವ ನಮ್ಮ ದೇಶದ ದಲಿತವರ್ಗದ ನಿತ್ಯ ಬದುಕಿನ ಗೋಳು. ಮೃಷ್ಟಾನ್ನ ಉಣ್ಣುವವರ ಸೇವೆ ಮಾಡುತ್ತ ಅವಕಾಶವಂಚಿತರಾಗಿ ಶತಮಾನಗಳಷ್ಟು ದೀರ್ಘಕಾಲ ಯಾತನೆ ಅನುಭವಿಸಿ ಇದೀಗ ಎದ್ದು ಪ್ರತಿಭಟಿಸತೊಡಗಿದ ಕಾಲಘಟ್ಟದಲ್ಲಿನ ಈ ಕವನಗಳು ಅವರ ಬದುಕಿನ ವಾಸ್ತವವನ್ನು ತಿಳಿಸುತ್ತವೆ. ಜಾತೀಯತೆ ನಮ್ಮ ದೇಶಕ್ಕಂಟಿದ ಶಾಪ! ದುರ್ಬಲರನ್ನು ತುಳಿದು ಹೊಸಕಿಹಾಕುವುದು ಇದುವರೆಗೆ ನಡೆದ ಮಹಾಪಾಪ! ಚರಿತ್ರೆಯಲ್ಲಿ ನಡೆದುಹೋದ ಇಂತಹ ಅಚಾತುರ್ಯಕ್ಕೆ ಮರುಗದಿರುವುದು ಕೂಡ ಮಹಾ ಅಪರಾಧ. ಈ ಸಂಕಲನ ಸುಬ್ಬು ಹೊಲೆಯಾರ್ ಅವರ ಕವನಗಳ ಗುಚ್ಛ. ಇಲ್ಲಿನ ನೋವಿನ ಆಳವನ್ನು ಗ್ರಹಿಸುವ ಸಹೃದಯತೆ ಯಾರಲ್ಲಿ ಇದೆ? ನೋಡೋಣ. ಕೆಲವು ಕವನಗಳು ಅರ್ಥವಾಗುತ್ತಿಲ್ಲ, ನಾವೇ ಅರ್ಥೈಸಿಕೊಂಡು ಓದಬೇಕಾಗಿದೆ.*

**ಧರ್ಮದ ಹೆಸರಿನಲ್ಲಿ** **(ಗುಜರಾತ್ – ಯಜ್ಞಪಶುಗಳಿಗಾಗಿ ಒಂದು ಹೋರಾಟ)** — *ಮಲಯಾಳಂ ಮೂಲ : ಆರ್. ಬಿ. ಶ್ರೀಕುಮಾರ್; ಅನುವಾದ : ನಾಡೋಜ ಡಾ॥ ಸಾರಾ ಅಬೂಬಕ್ಕರ್*




**ಪುಟ : ೧೯೦** **ಬೆಲೆ : ರೂ. ೧೪೦**

**ಚಂದ್ರಗಿರಿ ಪ್ರಕಾಶನ,** ೨–೨೧–೧೬೩೧/೨, ಸೂಕ್ಷ್ಮತರಂಗ ನಿಲಯ ರಸ್ತೆ, ಮಂಗಳೂರು – ೫೭೫ ೦೦೬

*ಬೆಚ್ಚಿಬೀಳಿಸುವ ಈ ಪುಸ್ತಕದಲ್ಲಿ ಎರಡು ಘಟನೆಗಳಿವೆ. ಒಂದು – ೧೯೭೬ರ ತುರ್ತು ಪರಿಸ್ಥಿತಿಯ ಕರಾಳ ಕಾನೂನಿನ ಬಲದಿಂದ ಕೇರಳದ ಯಮಸ್ವರೂಪಿ ಪೊಲೀಸರು ರಾಜ ಎಂಬ ವಿದ್ಯಾರ್ಥಿಯನ್ನು ಬೇಟೆನಾಯಿಗಳಂತೆ ಬೆನ್ನಟ್ಟಿ ಹಿಡಿದು ಠಾಣೆಯಲ್ಲೇ ಅಧಿಕಾರ ಬಲದಿಂದ ಕೊಲೆ ಮಾಡಿದ ಪ್ರಕರಣ. ಇದು ದೇಶಾದ್ಯಂತ ಭಾರಿ ಕೋಲಾಹಲವೆಬ್ಬಿಸಿ ಸುದ್ದಿಯಾದ, ಸರಕಾರ – ಪೊಲೀಸ್‌ಪಡೆ ಶಾಮೀಲಾಗಿ ಗೈದ ಹೇಯ ಕೃತ್ಯ. ಮಗುವಿಗಾಗಿ ಹೇಬಿಯಸ್ ಕಾರ್ಪಸ್ ಅರ್ಜಿ ಹಿಡಿದು ರಾಜನ ತಂದೆ ಬಡಿಯದ ಬಾಗಿಲುಗಳಿಲ್ಲ – ಅವರಿಗೆ ಹಗಲೂ–ರಾತ್ರಿಯೂ ಒಂದೇ ಆಗಿದ್ದಿತು. ಕಂದನನ್ನು ಶಾಶ್ವತವಾಗಿ ಕಳೆದುಕೊಂಡ ಪ್ರೊ॥ ಈಚರ ವಾರಿಯರ್ ಕಣ್ಣೀರ ಹನಿಗಳಿಂದ ಬರೆದ, ಸತ್ಯವನ್ನು ದೇಶದ ಜನತೆಗೆ ತಿಳಿಸಿದ ಕಲ್ಲೂ ಕರಗುವಂಥ ಘಟನೆ. ಇನ್ನೊಂದು – ಗುಜರಾತ್ ಸರಕಾರವೇ ನೇರ ಭಾಗಿಯಾಗಿದ್ದು, ಮುಖ್ಯಮಂತ್ರಿ ನರೇಂದ್ರ ಮೋದಿಯ ಸಮ್ಮತಿಯಿಂದಲೇ ೨೦೦೨ರಲ್ಲಿ ನಡೆದ ನರಮೇಧದ ಕಥೆ. ಜರ್ಮನಿಯ ಹಿಟ್ಲರನೂ ನಾಚುವಂಥ ಕೋಮುಗಲಭೆಯ ಬರ್ಬರ ಹತ್ಯಾಕಾಂಡದ ಅಕ್ಷಮ್ಯ ಅಪರಾಧದ ಕಥೆ. ಅಂದಿನ ಗುಜರಾತ್ ಸರಕಾರದಲ್ಲಿ ಒಬ್ಬ ಪ್ರಾಮಾಣಿಕ ಪೊಲೀಸ್ ಅಧಿಕಾರಿಯಾಗಿದ್ದು ಮೋದಿ ಕೃತ್ಯಗಳನ್ನೆಲ್ಲ ಬಯಲಿಗೆಳೆದು ಈ ಕೃತಿಯ ಮೂಲಕ ದಾಖಲೆ ನೀಡಿದವರು ಶ್ರೀ ಆರ್. ಬಿ. ಶ್ರೀಕುಮಾರ್. ಇವರು ಸರಕಾರದ ಕೆಂಗಣ್ಣಿಗೆ ಗುರಿಯಾದರೂ ಜನತೆಯ ವಿಶ್ವಾಸ ಗಳಿಸಿದವರು. ಇಂಥ ಮೋದಿ ಪ್ರಧಾನಿ ಅಭ್ಯರ್ಥಿಯೆಂದು ಬಿಂಬಿತವಾದ ಈ ದಿನಗಳಲ್ಲಿ ಪ್ರತಿಯೊಬ್ಬರೂ ಓದಲೇಬೇಕಾದ ಪುಸ್ತಕ. ಮೋದಿ ಆಡಳಿತ – ತುರ್ತು ಪರಿಸ್ಥಿತಿ ಎರಡೂ ಬೇಡ; ಶ್ರೀ ಕುಮಾರರಂಥ ದಕ್ಷ ಅಧಿಕಾರಿಗಳಿರಲಿ! ಸಮರ್ಥ ಅನುವಾದ ಶ್ರೀಮತಿ ಸಾರಾ ಅಬೂಬಕ್ಕರ್ ಅವರದು.*

– **ಇಂದಿರಾಕುಮಾರಿ,** *ಯಶವಂತಪುರ, ಬೆಂಗಳೂರು - ೨೨*

# ನಾಗಬಂಧದ ಬಂಧನ: ನಂಬಿಕೆ ಮತ್ತು ಕೇಳಿಕೊಳ್ಳಬೇಕಾದ ಪ್ರಶ್ನೆಗಳು

**ಇತ್ತೀಚೆಗೆ ಕರ್ನಾಟಕ ಸರ್ಕಾರ ಆಹ್ವಾನಿಸಿದ ಮೂಢನಂಬಿಕೆ ನಿಷೇಧದ ಕರಡಿನ ಕುರಿತು ಕೆಲವು ಕನ್ನಡ ಪತ್ರಿಕೆಗಳು ಮತ್ತು ಸಾಂಪ್ರದಾಯಿಕ ಮನಸ್ಸುಗಳು ಮಿತಿಮೀರಿ ಬೆಂಕಿಯುಗುಳಿದುವು. ಹಾಗೆಯೇ ಕಳೆದ ಕೆಲವು ವರ್ಷಗಳಿಂದ ಸುದ್ದಿಯಾಗುತ್ತಿರುವ ಎಂಜಲ ಎಲೆಯ ಮೇಲಿನ ಹೊರಳಾಟವನ್ನು ಈ ಮನಸ್ಸುಗಳು ಮತ್ತೆ ನಂಬಿಕೆಯ ಹೆಸರಿನಲ್ಲಿ ವೈಜ್ಞಾನಿಕ ಸತ್ಯವೆಂಬಂತೆಯೂ ವಿಶೇಷವಾಗಿ ಮೈಮೇಲೆ ಎಳೆದುಕೊಂಡು ಸಮರ್ಥಿಸಿಕೊಂಡವು. ಈ ಎರಡೂ ಸಂಗತಿಗಳು ಬೇರೆ ಬೇರೆಯಾದ ಬಿಡಿಸಂಗತಿಗಳಲ್ಲ. ಹೀಗೆ ಬೆಚ್ಚಿಬಿದ್ದಂತೆ ಪ್ರತಿಕ್ರಿಯಿಸಿದ ಮನಸ್ಸುಗಳೆದುರು ಕರಾವಳಿಯ ಅತಿಪ್ರಾಚೀನ ಆರಾಧನಾ ಮಾದರಿಯ ಕಿರುಪರಿಚಯದೊಂದಿಗೆ, ಆ ಹಿನ್ನೆಲೆಯಲ್ಲಿ ಕೆಲವು ಮೂಲಭೂತ ಪ್ರಶ್ನೆಗಳನ್ನಿಡಬಯಸುತ್ತೇನೆ.**

ಕರಾವಳಿಯ ಯಾವುದೇ ಹಳ್ಳಿ ಮೂಲೆಗೆ ಹೋದರೂ ನಿಮಗೆ ಒಂದಾದರೂ ನಾಗಬನ ಸಿಗದ ಹಳ್ಳಿಗಳು ಇರಲಾರವೇನೋ. ಅವಿಭಕ್ತ ಕುಟುಂಬದ ಮನೆಗೊಂದರಂತೆ ಸಿಕ್ಕೇ ಸಿಗುವ ಈ ನಾಗಬನಗಳು ಮೂಲತಃ ದೇವರಕಾಡುಗಳು. ಇವುಗಳನ್ನು ಕರೆಯುತ್ತಿದ್ದುದೇ ನಾಗಬನ ಇಲ್ಲವೇ ನಾಗಬಲ್ಲೆಗಳೆಂದೇ. ದೇವರ ಹೆಸರನ್ನು ಸ್ಥಳವಾಚಕಗಳ ಮೂಲಕ ಇಲ್ಲವೇ ದಿಗ್ವಾಚಕಗಳ ಮೂಲಕ ಸೂಚಿಸುವ ಪರಿಪಾಠವಿದೆ. ಅದರಂತೆ ಧರ್ಮಸ್ಥಳವನ್ನು ನಮ್ಮೂರುಗಳಲ್ಲಿ ಮುಗ್ಧವಾಗಿ 'ತೆಂಕಲಾಯ್' ಎಂದೇ ಕರೆದಂತೆ, ನಾಗನನ್ನು ಕರೆಯುತ್ತಿದ್ದುದೇ 'ಬನದದೇವ್ರು' ಎಂದು. ಕಾರಣಿಕ ಮತ್ತು ಸತ್ವವನ್ನಾಧರಿಸಿ ಅದನ್ನು ಸತ್ಯದೇವತೆ ಎಂದೂ ಕರೆಯುವ ರೂಢಿ ನಮ್ಮೂರ ಕಡೆ ಇದೆ. ಗಂಡನ ಹೆಸರೋ, ಗಂಡನ ಅಣ್ಣನ ಹೆಸರೋ ನಾಗನಿಂದ ಆರಂಭವಾಗುವಂತಿದ್ದರೆ ಅದನ್ನು ಹೇಳಬಾರದ ಸಾಮಾಜಿಕ ನಿಷೇಧಕ್ಕಾಗಿ ಪರ್ಯಾಯ ಕಂಡುಕೊಳ್ಳುವ ದಾರಿಯಲ್ಲಿ ನಮ್ಮೂರ ಹೆಂಗಸರು ಆ ಹೆಸರಿರುವ ಜಾಗದಲ್ಲಿ ಬನದದೇವ್ರು ಹೆಸರು ಎಂದು ಸೇರಿಸಿ ಉಪನಾಮವನ್ನು ಕೂಡಿಸುತ್ತಾರೆ. ಈ ರೂಢಿ ನಮ್ಮೂರುಗಳಲ್ಲಿ ಇಂದಿಗೂ ಇದೆ. ಹೀಗೆ ಬಲ್ಲೆಗಳೆಂದು ಕರೆಯಲ್ಪಡುತ್ತಿದ್ದ ಜಾಗಗಳಲ್ಲಿ ಹುತ್ತದ ಜೊತೆಗೆ ಬಾಗಾಳು ಇಲ್ಲವೇ ಬನ್ನೇರಳೆ ಇತ್ಯಾದಿ ಮರಗಳು ಸರ್ವೇಸಾಮಾನ್ಯ. ಅಮೂಲ್ಯವಾದ ಅನೇಕ ಗಿಡಮೂಲಿಕೆಗಳೂ ಈ ಬನಗಳಲ್ಲಿ ಲಭ್ಯವಿರುತ್ತಿದ್ದುವು. ಈ ಮರಗಳಿಗಾಗಲೀ ಆಚ್ಛಾದಿಸಿಕೊಂಡ ಬನದ ಯಾವುದೇ ಭಾಗಕ್ಕಾಗಲೀ ಕುಡುಗೋಲನ್ನೆ ಹಾಕದೇ ಆ ಬನಗಳನ್ನು ಸ್ವಚ್ಛಂದವಾಗಿ ಬೆಳೆಯಲು ಬಿಡುತ್ತಿದ್ದರು. ಸ್ಥಳೀಯವಾಗಿ ಸಿಗುವ ಕಪ್ಪು ಬಣ್ಣದ ಶಿಲೆಯಲ್ಲಿಯೋ ಅಥವಾ ಮೆದುಜಾತಿಯ ಜಾಜಿಕಲ್ಲಿನಲ್ಲಿಯೋ ಕೆತ್ತಿದ ನಾಲ್ಕಾರು ನಾಗಮಿಥುನದ ಶಿಲ್ಪಗಳು ಹುತ್ತಕ್ಕೋ, ಪೀಠದಂತೆ ಇರುವ ನಿಸರ್ಗಸಹಜ ಕಲ್ಲಿನ ದಿಬ್ಬಕ್ಕೋ ಆತುಕೊಂಡಂತೆ ಬನದ ನೆರಳಿನಲ್ಲಿ ಮಳೆ, ಬಿಸಿಲು, ಗಾಳಿಗೆ ತೆರೆದೇ ಇರುತ್ತಿದ್ದುವು. ಈ ಸಹಜತೆಯನ್ನು ಸೂಚಿಸುವಂತೆ, "ನಾಗನಕಲ್ಲಿಗೆ ನಾಯಿ ಉಚ್ಚಿ ಹೊಯ್ಯುವುದು ಇಪ್ದೆ (ಇರುವುದೇ)" ಎಂಬ ವಾಗ್ರೂಢಿಯನ್ನು ಮಾತಿಗೊಮ್ಮೆ ಬಳಸುವುದುಂಟು. ಮನೆಯ ಸಮೀಪವೇ ಇರುವ ಈ ಜಾಗಗಳಿಗೆ ನಾವು ಸಾಕಿದ ಕೋಳಿ, ಗಂಟಿ (ಹಸು)ಗಳು ಯಾವುದೇ ಭಿಡೆಯಿಲ್ಲದೆ ಹೋಗಿ ಮೆಂದು ಬರುತ್ತಿದ್ದುವು. ಕೋಳಿಗಳಂತೂ ಅಷ್ಟೇ ನಿರ್ಭಿಡೆಯಿಂದ ನಾಗನಕಲ್ಲಿನ ತಳಬುಡವನ್ನೆಲ್ಲ ಕೆದರಾಡಿ ಹುಳಹುಪ್ಪಡಿ ತಿಂದು ಬರುತ್ತಿದ್ದವು. ಇದು ನಿನ್ನೆ–ಮೊನ್ನೆಯವರೆಗೆ ಅನೇಕ ಕಡೆ ನಡೆದುಕೊಂಡೇ ಬಂದ ರೂಢಿ. ಇವುಗಳನ್ನು ಪೂಜಿಸುವ ಸರಳ ಮಾದರಿಗಳಾದ ತನುಹಾಕುವ (ಬಾಳೆಗೊನೆ ಒಪ್ಪಿಸುವ), ತಂಪು ಹಾಕುವ (ಒಂದಿಷ್ಟು ಹಾಲು, ಬಿಳಿಅಕ್ಕಿ ಅರ್ಪಿಸುವ) ಕೆಲಸಗಳಿಗೆ ವರ್ಷದ ಯಾವುದೋ ಒಂದೆರಡು ದಿನಗಳಲ್ಲಿ ಪುರೋಹಿತರು ಬರುತ್ತಿದ್ದರು. ತನುಹಾಕಿದ ಬಾಳೆಗೊನೆಯ ಬುಡದ ಚಿಪ್ಪು, ತಂಪು ಹಾಕಿದ ಅಚ್ಚೇರು ಅಕ್ಕಿಯನ್ನು ಪೂಜೆಯ ಕೂಲಿ ಎಂಬಂತೆ ಒಯ್ಯುತ್ತಿದ್ದರು. ಮನೆಗೊಂದರಂತೆ

**ಜಯಪ್ರಕಾಶ್ ಶೆಟ್ಟಿ ಹೆಚ್.**

ಸಿಗುವ ಈ ನಾಗಬನಗಳಿಗೆಲ್ಲಾ ಕುಕ್ಕೆ ಸುಬ್ರಹ್ಮಣ್ಯವನ್ನೇ ಮೂಲಬನವಾಗಿ ಎಂದಿನಿಂದಲೋ ಏನೋ ನಂಬಿಕೊಂಡು ಬರಲಾಗಿದೆ. ಹಾಗಾಗಿ ಅದನ್ನು ಮೂಲಿ ಸ್ಥಳವೆಂತಲೇ ನಂಬಿಕೊಂಡು ಕರೆಯಲಾಗುತ್ತದೆ. ಅದಲ್ಲದೆ ನಾಗನಕಲ್ಲಿನ ಬುಡವನ್ನೂ ಮೂಲ ಎಂತಲೇ ಕರೆಯುವುದರಿಂದ 'ಮೂಲಿ' ಎನ್ನುವುದು ಭೂಸೂಚಕವಾದ ಪದವೂ ಹೌದು. ನಾಗ ದರ್ಶನಗಳು ನಡೆದಾಗ ಮೂಲಿ ಪ್ರಸಾದ ಎಂದು ಮಣ್ಣನ್ನೇ ಕೊಡಲಾಗುತ್ತದೆ. ಈ ದರ್ಶನಗಳು ಹಲವು ಕಾಲದಿಂದ ಪುರೋಹಿತ ವರ್ಗಕ್ಕೆ ಸೇರಿದವರ ಮೂಲಕವೇ ನಡೆದುಬರುತ್ತಿದೆ. ಆದರೆ ದಲಿತರು ಆರಾಧಿಸಿಕೊಂಡು ಬರುತ್ತಿರುವ ನಾಗಾರಾಧನೆಯ ಮಾದರಿಯಾದ ಕಾಡ್ಯನಾಗನಿಗೆ ತಂಬಿಲ ಇಡುವ ಮತ್ತು ಆರಾಧಿಸುವ ಎಲ್ಲ ಕೆಲಸಗಳನ್ನು ಇಂದಿಗೂ ಅನೇಕ ಕಡೆ ದಲಿತರೇ ನಡೆಸಿಕೊಂಡು ಹೋಗುತ್ತಿದ್ದಾರೆ.

ನಾನು ಕಂಡಂತೆ ಹಣ್ಣು-ಹಾಲಿನ ಸರಳ ಮತ್ತು ಮಾಮೂಲಿ ಸೇವೆ ಸಹಜವಾಗಿ ನಡೆದುಕೊಂಡು ಹೋಗುತ್ತಿತ್ತು. ಅದಲ್ಲದೆ ನನ್ನ ಬಾಲ್ಯದ ದಿನಗಳಲ್ಲಿ ಕಂಡಂತೆ ವಿರಳವಾಗಿ ನಾಗದರ್ಶನವೋ, ಅತಿವಿರಳವಾಗಿ ನಾಗಮಂಡಲವೋ ನಡೆಯುತ್ತಿದ್ದುದುಂಟು. ಅದೇ ಸಂದರ್ಭದಲ್ಲಿ ಗದ್ದೆ ಬಯಲುಗಳಲ್ಲಿ ಏನಾದರೂ ಸತ್ತು ಬಿದ್ದ ಸರ್ಪ ಸಿಕ್ಕರೆ ಅವರ ಪಾಲಿಗೊಂದು ಗಂಟು (ನಿಧಿ) ? ಸಿಕ್ಕಂತೆಯೇ ಎಂದು ಭಯ ಬೀಳುತ್ತಿದ್ದುದನ್ನೂ ಕಂಡಿದ್ದೇನೆ. ಯಾಕೆಂದರೆ ಈ ಹಾವುಗಳು ಹೇಗೇ ಸತ್ತಿರಲಿ ಅವುಗಳ ಬೊಜ್ಜ (ಸಂಸ್ಕಾರ) ಮಾಡಬೇಕಾದ ಹೊಣೆ ಹಾಗೆ ಕಂಡವರ ಮೇಲೆ ಬರುವಂತಹ ಭಯ ಅಂದೂ ಇದ್ದುದನ್ನು ನಾನು ಕಂಡವನಿದ್ದೇನೆ. ಸತ್ತು ಕೊಳೆತುಹೋದ ಹಾವಿದ್ದರೂ ಅದು ಸರ್ಪವಾಗಿದ್ದರೆ ಅದನ್ನು ಪುರೋಹಿತರ ಮೂಲಕ ಹಲಸಿನ ಕಟ್ಟಿಗೆಯಲ್ಲಿಟ್ಟು ಸುಡುವುದಲ್ಲದೆ, ಅದರ ಶ್ರಾದ್ಧವಿಧಿಯನ್ನು ಪುರೋಹಿತರ ಸಂತರ್ಪಣೆಯ ಮೂಲಕ ನಡೆಸಬೇಕಿತ್ತು. ಹೋಮ ಹವನದ ಜೊತೆಗೆ ನಿಗದಿತ ಸಂಖ್ಯೆಯ ಬ್ರಾಹ್ಮಣರಿಗೆ ಊಟ ಹಾಕಲೇ ಬೇಕೆಂಬ ನಿಯಮವೂ ಚಾಲ್ತಿಯಲ್ಲಿತ್ತು. ಮನುಷ್ಯರು ಸತ್ತುಬಿದ್ದರೆ ಸಿಕ್ಕದ ಪ್ರಾಮುಖ್ಯತೆ ಸತ್ತ ಹಾವುಗಳಿಗೆ ದಕ್ಕುತ್ತಿದ್ದುದಲ್ಲದೆ, ಆ ಪ್ರಾಮುಖ್ಯತೆಯ ಲಾಭಗಳು ನಿಶ್ಚಿತವಾಗಿ ಒಂದು ಸಮುದಾಯಕ್ಕೇ ದಕ್ಕುತ್ತಿತ್ತು. ದುಬಾರಿಯೆನಿಸಿಯೂ ಇದು ಒಂದು ಮಿತಿಯಲ್ಲಿ ನಡೆದುಕೊಂಡು ಬರುತ್ತಿತ್ತು. ಎಲ್ಲಕ್ಕಿಂತ ಮುಖ್ಯವಾಗಿ ನಾಗಬನಗಳು ಬನಗಳಾಗಿಯೇ ಇದ್ದುವು. ಈ ಬನಗಳ ಸ್ವರೂಪಕ್ಕೆ ಇಂದಿನಂತೆ ಅಂದು ಈ ಅಕ್ರಮಕೂಟ ಕೈಯಿಕ್ಕಿರಲಿಲ್ಲ.

ಆದರೆ ಇತ್ತೀಚೆಗಿನ ದಿನಗಳಲ್ಲಿಯ ಈ ಸ್ಥಿತಿ ಆತಂಕಕಾರಿಯಾಗಿ ಬೆಳೆಯುತ್ತಿದೆ. ನಂಬುಗೆ ಅನ್ನುವುದಕ್ಕಿಂತ ಮುಖ್ಯವಾಗಿ ಈ ಭಯವನ್ನೇ ಬಂಡವಾಳ ಮಾಡಿಕೊಂಡು ನಾಗನ ಹೆಸರಿನಲ್ಲಿ ಅನಾರೋಗ್ಯಕರವಾದ ದಂಧೆಯೊಂದು ಅವ್ಯಾಹತವಾಗಿ ಊರ್ಜಿತವಾಗುತ್ತಿದೆ. ನಾಗದರ್ಶನಗಳು ನಡೆದಲ್ಲಿ ಮೂಲಿ ಸ್ಥಳದಿಂದ ಮಣ್ಣಿನ ಪ್ರಸಾದ ತೆಗೆದಷ್ಟೇ ಸುಲಭವಾಗಿ ಹೊಸ ಹರಕೆಗಳನ್ನು ಕಾಲಗರ್ಭದಿಂದ ಅಗೆದು ತೆಗೆದು ಹುಟ್ಟಗತಿ (ಮರೆಯಾದುದನ್ನು ನೆನಕೆ ಮಾಡುವುದು) ಕೊಡಲಾಗುತ್ತಿದೆ. ನಾಗಬನಗಳ ಜಾಗದಲ್ಲಿ ಕಾಂಕ್ರೀಟು ಗೋಪುರ ನಿರ್ಮಾಣದ ಆಜ್ಞೆ ನೀಡಲಾಗುತ್ತಿದೆ. ಈ ಗೋಪುರಗಳಲ್ಲಿ ಹೊಸದಾಗಿ ಪ್ರತಿಷ್ಠಾಪನಾ ಕಾರ್ಯದ ನಂತರ ವರ್ಷಕ್ಕೊಂದರಂತೆ ಶುದ್ಧ ಕಳಶದಂತಹ ರಿನ್ಯೂಅಲ್ ಕಾರ್ಯಕ್ರಮಗಳ ಸರಣಿ ಹುಕುಂಗಳನ್ನು ಈ ಪಾತ್ರಿ ಮತ್ತು ಪುರೋಹಿತರ ಜಂಟಿಪಡೆ ಜಾರಿಗೊಳಿಸುತ್ತಿದೆ. ಆಶ್ಲೇಷ ಬಲಿ, ನಾಗ ಮಂಡಲಗಳು ನಿತ್ಯದ ಮಾತಾಗುವಷ್ಟು ಅತಿ ಸಂಖ್ಯೆಯಲ್ಲಿ ಮತ್ತು ದುಬಾರಿಯಾಗಿ ನಡೆಯುತ್ತಲೇ ಇವೆ. ಮುಖ್ಯವಾಗಿ ಇವು ಕುಟುಂಬಕ್ಕೆ ಸೇರಿದ ಬನಗಳಾಗಿಯೇ ಇರುವುದರಿಂದ ಮೂಲ ಅವಿಭಕ್ತ ಕುಟುಂಬದ ಉಳ್ಳವರು, ಇಲ್ಲದವರು ಎಂಬ ಭೇದವಿರದೆ ಎಲ್ಲರೂ ವಂತಿಗೆ (ವರಾಡ) ಕೊಟ್ಟು ಪಾಲ್ಗೊಳ್ಳಬೇಕಾಗುವ ಒತ್ತಡವೂ ನಿರ್ಮಾಣಗೊಳ್ಳುತ್ತಿದೆ. ಇದರಿಂದಾಗಿ ಹೀಗೆ ವರಾಡ ಕೊಟ್ಟು ಪಾಲ್ಗೊಳ್ಳುವ ಒತ್ತಡಕ್ಕೆ ಬಿದ್ದ ಅನೇಕ ಬಡ ಕುಟುಂಬಗಳು ಬಲಿಷ್ಠರ ನಡುವೆ ನಲುಗಿಹೋಗುವ ಪರಿಸ್ಥಿತಿ ಉಂಟಾಗುತ್ತಿದೆ. ಯಾವ ಯಾವುದೋ ಅಡ್ಡದಾರಿಯಲ್ಲಿ ಹಣ ಮಾಡಿದ ದಿಢೀರ್ ಧನಿಕರು ತಮ್ಮ ಸಂಪಾದನೆಯ ಗಣಿತವನ್ನು ಈ ಮೂಲಕ ಲೋಕಕ್ಕೆ ಪ್ರದರ್ಶಿಸಲು ಅವಕಾಶವಾಗುತ್ತಿದೆ. ಈ ನೈತಿಕ ದಿವಾಳಿ ಶೂರರು ಧರ್ಮದುರಂಧರರಾಗಿ 'ನಾಗಮನ್ನಣೆ' ಪಡೆದು, ಅನೈತಿಕವೆನ್ನುವುದು ಶುಚೀಕರಿಸಲ್ಪಟ್ಟ ನೈತಿಕ ನಾಣ್ಯವಾಗಿ ಚಲಾವಣೆಗೆ ಬರುತ್ತಿದೆ. ನಾಗನನ್ನು ನಂಬಿದ ನಿರ್ಗತಿಕರಿಗೆ ಸಂಕಟೋತ್ಪಾದಕರ ನುಡಿಯೆಂಜಲಿನಲ್ಲಿ ಹೊರಳುತ್ತಾ ಬದುಕಬೇಕಾದ ವಿಷಚಕ್ರ ಬಲಿಯುತ್ತಿದೆ. ವ್ಯಕ್ತಿಗೌರವ ಮರೆತು ಎಂಜಲಲ್ಲಿ ಹೊರಳಿದಷ್ಟೇ ಕನಿಷ್ಠವಾಗಿ, ತಮ್ಮ ಮಕ್ಕಳನ್ನು ಯಾರದೋ ಹೋಟೆಲು-ಮನೆಗಳಲ್ಲಿ ಒತ್ತೆಯಿಟ್ಟು ಪಡೆದ ಹಣವನ್ನು ದೈನೇಸಿಯಾಗಿ ಈ ಲೂಟಿಕೋರರ ಕೈಗಿತ್ತು, ಮತ್ತವರದೇ ಕಾಲಿಗೆ ಬೀಳಬೇಕಾದ ಸ್ಥಿತಿ ಮಡೆಸ್ನಾನಕ್ಕಿಂತಲೂ ದಯನೀಯವಾಗುತ್ತಿದೆ.

ನಾಗಾರಾಧನೆ ಸಂಪ್ರದಾಯ ಮೂಲತಃ ಅವೈದಿಕ ನೆಲೆಯದು. ಪ್ರಾಚೀನವಾಗಿ ಅಲ್ಲಿ ಆರಾಧನೆಯ ಮುಖ್ಯಸಂಗತಿಯಾಗಿ ಬಳಕೆಯಾಗುತ್ತಿದ್ದುದು ಮಣ್ಣಿನ ಕಳಶಗಳು. ಶುದ್ಧ ನಿಸರ್ಗಾರಾಧನೆಯ ಈ ತಾಣವನ್ನು ಗುದ್ದಲಿ ಮತ್ತು ಕುಡುಗೋಲು ಮುಕ್ತವಲಯವಾಗಿ ಘೋಷಿಸಿಕೊಂಡಿದ್ದರು. ನಾಗನ ಬನವನ್ನು ಸ್ವಯಂ ಕಡಿಯುವುದನ್ನು ನಿಷೇಧಿಸಿಕೊಂಡಿರುವ ಜೊತೆಗೆ ಹಾಗೊಂದು ವೇಳೆ ಇನ್ನಾರೋ ಅದನ್ನು ಕಡಿಯುತ್ತಿದ್ದರೆ ಸ್ವಯಂನಾಶವನ್ನು ಆಹ್ವಾನಿಸುವ ಆ ಮೂರ್ಖರನ್ನು ಪ್ರಶ್ನಿಸಬಾರದು ಎಂಬ ವಾಡಿಕೆಯೂ ಇದೆ. ಹಾಗೆ ಪ್ರಶ್ನಿಸಿದವನ ಮೇಲೆಯೇ ನಾಗನ ಮುನಿಸು ಬೀಳುತ್ತದೆ ಎಂಬಂತಿರುವ ಈ ನಂಬಿಕೆಯ ಆಳದಲ್ಲಿ ನಾಗಬನದ ರಕ್ಷಣೆಯ ಕುರಿತಾದ ತಿಳುವಳಿಕೆಯ ವ್ಯಾಪಕತೆಯಿದೆ. ಹೀಗೆ ಈ ಬನದ ಇರುವಿಕೆಗೆ ಯಾವುದೇ ಧಕ್ಕೆ ಒದಗದಂತೆ ನಮ್ಮ ಪೂರ್ವಿಕರು ಕಾಪಿಟ್ಟುಕೊಂಡಿದ್ದರು. ಸಹಜವಾಗಿ ಅಪೂರ್ವವಾದ ಜೇನು, ಗಿಡಮೂಲಿಕೆಗಳು ಇಲ್ಲಿ ಲಭ್ಯವಿರುತ್ತಿದ್ದವು. ಕುಡುಗೋಲು ಹಾಕುವುದಕ್ಕೇ ನಮ್ಮ ಪೂರ್ವಿಕರು ಹಾಕಿಕೊಂಡಿದ್ದ ಸ್ವಯಂ ನಿಷೇಧದಿಂದಾಗಿ ಸಂದಣಿಸಿಕೊಂಡಿದ್ದ ನೀರಪೂರಣದ ಹುತ್ತಗಳ ಜೊತೆಗೆ ದಟ್ಟವಾದ ಬೀಳು, ಬಳ್ಳಿಗಳಿಂದ ಕೂಡಿಕೊಂಡ ಸಸ್ಯಾವಳಿಯ ಸಾಂದ್ರತೆ ಇರುತ್ತಿತ್ತು. ಯಾರೂ ಮುಟ್ಟದ ಮತ್ತು ಮುಟ್ಟದಂತೆ ಯಾರೊಬ್ಬರ ಎಚ್ಚರಿಕೆಯ ಅಗತ್ಯವೂ ಇಲ್ಲದೆ ಉಳಿದುಬಂದಿದ್ದ ಈ ಪಾರಂಪರಿಕ ರಕ್ಷಿತ ನಿಸರ್ಗ ತಾಣಗಳು ಇವತ್ತು ಪುನರುತ್ಥಾನದ ಹೆಸರಿನಲ್ಲಿ ಜೆಸಿಬಿ ಯಂತ್ರಗಳ ದೈತ್ಯಾಕ್ರಮಣಕ್ಕೆ ಸಿಕ್ಕಿ ಬೋಳಾಗುತ್ತಿವೆ. ಹೀಗೆ ಸಪಾಟುಗೊಂಡ ಜಾಗಗಳಲ್ಲಿ ಕಾಂಕ್ರೀಟು ಬನಗಳ ನವನಿರ್ಮಾಣಗಳು ಏಳುತ್ತಿವೆ. ಹುತ್ತವನ್ನೇ ದೇವರೆಂದು ನಂಬಿ ಅದನ್ನೇ ನಾಗಾರಾಧನೆಯ ಬಹಳ ಮುಖ್ಯ ಸಂಕೇತವೆಂದು ಆರಾಧಿಸುತ್ತಿದ್ದ ಅದೇ ಜಾಗದಲ್ಲಿ ಹುತ್ತಗಳ ಮೂಲೋತ್ಪಾಟನೆ ಮಾಡಿ, ಇದರಿಂದಾದ ಹಾನಿ (ನಾಗನ ಮರಿ-ಮೊಟ್ಟೆಗಳ ನಾಶದ)ಯ ಪರಿಹಾರಕ್ಕಾಗಿ ಮತ್ತದೇ ಸರ್ಪಸಂಸ್ಕಾರವೆಂಬ ಪುರೋಹಿತ ಲೂಟಿಯ ಅವಕಾಶಗಳನ್ನು ನಿರ್ಮಿಸ ಲಾಗುತ್ತಿದೆ. ಗುದ್ದಲಿ, ಕುಡುಗೋಲುಗಳಲ್ಲದೆ ಬೆಂಕಿಯ ಪ್ರವೇಶಕ್ಕೂ ಸೀಮಿತ ಅವಕಾಶವಷ್ಟೇ ಇದ್ದ, ಜೇನುವಾಸದ ತಾಣಗಳೂ ಆಗಿದ್ದ ಈ ಬನಗಳೊಳಗೆ ಈಗ ನಿರಾಯಾಸವಾಗಿ ಹೋಮ ಹವನಾದಿ ಅಗ್ನಿಕೊಂಡದ ಜ್ವಾಲೆ ಬೆಳಗುತ್ತಿದೆ ! ಜಲಪರಂಪರೆಗೆ ಸೇರಿದ ಈ ನಾಗಪರಂಪರೆ ಸಂಪೂರ್ಣವಾಗಿ ಅಗ್ನಿಪರಂಪರೆ ಯವರ ಹಿಡಿತಕ್ಕೆ ಸಂದುಹೋಗಿದೆ. ಜೊತೆಗೆ ನಾಗನ ಹೆಸರಿನ ಏನೇ ಕೆಲಸ ಇದ್ದರೂ ಅಲ್ಲೊಂದು ಅನ್ನ ಸಂತರ್ಪಣೆ ಆಗಲೇಬೇಕಾದ ಸ್ಥಿತಿ ನಿರ್ಮಾಣ ಗೊಳ್ಳುತ್ತಿದೆ. ಅನ್ನ ಹಂಚುವ ಈ ಕಾರ್ಯಕ್ರಮದಲ್ಲಿಯೂ ಅಡುಗೆಯನ್ನು ನಿರ್ದಿಷ್ಟ ಸಮುದಾಯದವರೇ ಮಾಡಬೇಕೆಂಬ ನಿಯಮವಿದೆ. ಅದು ಬರಿಯ ಅನ್ನಸಂತರ್ಪಣೆಯಷ್ಟೇ ಅಲ್ಲ, ಮಡಿಯೂಟವಾಗಬೇಕೆಂಬ ಷರತ್ತಿಗೊಳಪಟ್ಟದ್ದೂ ಹೌದು. ನಾಗನಿಂದಾಗಿ ಹೀಗೆ ಉಣ್ಣಲೇಬೇಕಾದವರು ಮತ್ತು ಅಡುಗೆ ಮಾಡಬೇಕಾದವರೆಲ್ಲರೂ ಒಂದೇ ಸಮುದಾಯಕ್ಕೆ ಸೇರಿದವರಾಗಿರುವುದಷ್ಟೇ ಅಲ್ಲದೆ, ಅನ್ನ ಸಂತರ್ಪಣೆ ಮಾಡಿ 'ಹಸಿವಿರದವರ ಹಸಿವನ್ನು ತಣಿಸಿ !' ಅವರ ಕಾಲಿಗೆ ಬೀಳಬೇಕಾದ ದುಸ್ತರ ಸ್ಥಿತಿಯಿದು. ಯಾಕೆಂದರೆ ನಾಗಪಾತ್ರಿಯ ಬಾಯಿಂದ ತಪ್ಪದೇ ಬರುವುದು 'ಬ್ರಹ್ಮ ಕುಟುಂಬವನ್ನು ತೃಪ್ತಿಪಡಿಸುವ' ಆಜ್ಞೆಯ ನುಡಿ ! ಪುರೋಹಿತ, ಪಾತ್ರಿಯೊಂದಿಗೆ ಉಣ್ಣುವ ಮತ್ತು ಅಡುಗೆ ಮಾಡುವ ಫಲಾನುಭವಿಗಳೆಲ್ಲಾ ಹೀಗೆ ಒಂದೇ ಸಮುದಾಯಕ್ಕೆ ಸೇರಿದವರಾಗಿ, ಇದೊಂದು ಧಾರ್ಮಿಕ ದಂಧೆಯಾಗಿ ಮಾರ್ಪಟ್ಟಿರುವುದರ ಕುರಿತು ಕೊಡುವವರು ಗೊಣಗಿ ಕೊಂಡೇ ಕೊಡುತ್ತಿದ್ದಾರೆ. ಪಡೆಯುವವರು ಅಧಿಕಾಧಿಕ ಕಸಿಯುತ್ತಿದ್ದಾರೆ. ಇಲ್ಲಿ ಮೂಲಿಸ್ಥಾನದ ಮೂಲದ ನಂಬಿಕೆಗಳನ್ನು ಸಮೂಲವಾಗಿ ಕಿತ್ತು ಬಿಸಾಡಲಾಗಿದೆ.

ನಂಬಿಕೆಯನ್ನು ಪ್ರಶ್ನಿಸುವಂತಿಲ್ಲ ಎಂದು ಉರಿದೆದ್ದು ಬೀಳುವ 'ಸಂಸ್ಕೃತಿ' ಮತ್ತು 'ನಂಬಿಗೆ'ಯ ಕಾವಲುಗಾರರು ಗಟ್ಟಿಗೊಂಡು ಸಂಘಟಿತರಾಗುತ್ತಿರುವ ಈ ಕಾಲದಲ್ಲಿ, ಮಡೆಸ್ನಾನವನ್ನು ನಂಬಿಗೆಯ ಪ್ರಶ್ನೆಯೆತ್ತಿ ಬಾಯಿಮುಚ್ಚಿಸಲು ಯತ್ನಿಸಲಾಗುತ್ತಿದೆ. ಹೊರಳಬೇಡಿ ಅಂದರೆ ತಲೆಯ ಮೇಲೆಯೇ ಹೊತ್ತು

ತಿರುಗುತ್ತೇವೆ ಎಂದು ಹೇಳಿಸುವುದಷ್ಟೇ ಅಲ್ಲ, ಮಾಡಿಸಲಾಗುತ್ತಿದೆ. ದುರಂತವೆಂದರೆ ಆಳುವವರ ಗುಣಗಾನ ಮಾಡಬಲ್ಲಷ್ಟು ಪ್ರಮಾಣದಲ್ಲಿ ಸಾಂಸ್ಕೃತಿಕ ವಸಾಹತುಶಾಹಿ ತನ್ನ ಅಂತಿಮ ದಿಗ್ವಿಜಯವನ್ನು ಸಾಧಿಸಿಬಿಟ್ಟಿದೆ. ಇಂತಹ ಯಶಸ್ಸಿನಲ್ಲಿ ಬೀಗುತ್ತಿರುವವರ ಎದುರಿಗೆ ಒಂದಿಷ್ಟು ಪ್ರಶ್ನೆಗಳನ್ನಾದರೂ ಇಟ್ಟು, ಅಲ್ಲಿಯೂ ಇದ್ದಿರಬಹುದಾದ ಆತ್ಮ, ಪಾಪ–ಪುಣ್ಯಗಳನ್ನು ಕೆದಕಿ ಅಲ್ಲಿನ ಸೋಗಲಾಡಿತನವನ್ನು ಬೆಳಕಿಗೆ ತರಬೇಕಿದೆ. ಯಾಕೆಂದರೆ ಎಂಜಲ ಮೇಲೆ ಉರುಳುವವರ ಆಳದಲ್ಲಿ ನೆಟ್ಟು ಬೆಳೆಯಿಸಿದ ಮತ್ತು ಅವರನ್ನು ಅಲ್ಲಿಂದ ಪಾರಾಗದಂತೆ ಬಂಧಿಸಿಟ್ಟಿರುವ ದಯನೀಯ ಸ್ಥಿತಿಯ ಚರಿತ್ರೆಯೇ ಈ ಉರುಳಾಟದ ಹಿಂದಿದೆ ಎಂಬುದನ್ನು ಗಮನಿಸಬೇಕು. ಅದಲ್ಲದೆ ನಂಬಿಕೆಗಳೆಂದರೆ ಗೊಂಚಲಿದ್ದ ಹಾಗೆ. ಒಂದಕ್ಕೆ ಹೇಳಿದ ಮಾತು ಇನ್ನೊಂದಕ್ಕೂ ಅನ್ವಯಿಸುತ್ತದೆ. ಈ ನಂಬಿಕೆಗಳು ಯಾವ ತೆರನಾದ ಇರುವಿಕೆ ಮತ್ತು ವಿಕಾಸವನ್ನು ತೋರಿವೆ? ಹತ್ತಿಪ್ಪತ್ತು ವರ್ಷಗಳ ಹಿಂದಿದ್ದ ನಂಬಿಕೆ ಮತ್ತು ಆಚರಣೆಯ ಆವರಣಗಳು ಇಂದು ಯಾವ ಮಾರ್ಪಾಡಿಗೆ ಒಳಗಾಗಿವೆ? ಆರ್ಥಿಕವಾಗಿ ಮತ್ತು ಪರಿಸರಾತ್ಮಕವಾಗಿ ಈ ನಂಬುಗೆ ಮತ್ತು ಆಚರಣೆಗಳು ಬೀರುತ್ತಿರುವ ವಿಕೃತ ಪರಿಣಾಮಗಳೇನು? ಈ ಪ್ರಶ್ನೆ ಕರಾವಳಿಯ ಸಾಕಷ್ಟು ಜನರಲ್ಲಿ ಸಹಜವಾಗಿಯೇ ಅನುರಣಿಸುತ್ತಿದೆ. ನಿರ್ವಾತದಲ್ಲಿರುವ ಈ ಪಿಸುಮಾತುಗಳನ್ನು ಗಟ್ಟಿಯಾದ ಕೂಗಾಗಿ ಪರಿವರ್ತಿಸಬೇಕಿದೆ.

ಮುಖ್ಯವಾಗಿ ನಾಗಾರಾಧನೆಯನ್ನು ಸಮರ್ಥಿಸುವ ವೇಳೆ ಅದನ್ನೊಂದು ವೈಜ್ಞಾನಿಕ ತಳಹದಿಯುಳ್ಳ, ನೈಸರ್ಗಿಕ ಸಮತೋಲವನ್ನು ಕಾಪಾಡಿಕೊಳ್ಳುವ ಆಲೋಚನೆಯನ್ನು ಒಳಗೊಂಡ ನಿಸರ್ಗಾರಾಧನೆಯ ಮಾದರಿ ಎಂದೇ ಪರಿಭಾವಿಸಲಾಗುತ್ತದೆ. ಕುಡುಗೋಲ ಪ್ರವೇಶಕ್ಕೇ ಸ್ವಯಂನಿಷೇಧ ಹೇರಿಕೊಂಡ ದೇವರ ಕಾಡುಗಳನ್ನು ನಮ್ಮ ಪ್ರಾಚೀನರು ಕಾಯ್ದಿಟ್ಟುಕೊಂಡು ಬಂದ ಅಂತರ್ಜಲದ ಮರುಪೂರಣದ ತಂತ್ರಗಾರಿಕೆ ಮತ್ತು ಔಷಧೀಯ ಗಿಡಮೂಲಿಕೆಗಳ ಸಂರಕ್ಷಣೆಯ ನಮ್ಮ ಪಾರಂಪರಿಕ ಹೆಮ್ಮೆಯೆಂದೂ ಗುರುತಿಸಿಕೊಳ್ಳಲಾಗಿದೆ. ಸತ್ತ ಹಾವಿನ ದೇಹಭಾಗದಲ್ಲಿಯೂ ಉಳಿದುಕೊಳ್ಳಬಹುದಾದ ವಿಷ ಅದರ ದೇಹ ಕೊಳೆತ ಜಾಗದಲ್ಲಿ ಬೆಳೆಯುವ ಹುಲ್ಲು ತಿನ್ನುವ ದನಕರುಗಳಿಗೆ ವರ್ಗಾವಣೆಗೊಳ್ಳದಿರಲಿ ಎಂಬ ಕಾರಣಕ್ಕಾಗಿ ಹಾವನ್ನೂ ಸುಟ್ಟುಹಾಕುವ ರೂಢಿಯನ್ನು ಬೆಳೆಸಲಾಯಿತು ಎಂದೇ ವೈಜ್ಞಾನಿಕ ಕಾರಣವನ್ನು ಹೇಳಲಾಗಿದೆ. ಇದರ ಜೊತೆಗೆ ಪಂಥಿಕವಾಗಿ ನಾಗಕುಲಕ್ಕೆ ಸೇರಿದವರಾದ ನಮ್ಮ ಪಾಲಿಗೆ ನಾಗನ ಹೆಣವೆಂದರೆ ನಮ್ಮ ಹಿರೀಕನ ಹೆಣವೆಂಬ ಗೌರವವೂ ಇರಲಾಗಿ, ಅಲ್ಲಿ ಸಂಸ್ಕಾರ ವಿಧಿಯ ಪಾಲನೆಯಿದೆ.

ಆದರೆ ವೈಜ್ಞಾನಿಕತೆಯ ಜೊತೆಗೆ ಇವೇ ನಂಬಿಕೆ, ಶ್ರದ್ಧೆಯ ಕಾರಣದಿಂದ ಶತಮಾನ ಹೋಗಲಿ, ದಶಮಾನದ ಹಿಂದಿನವರೆಗೆ ಕಣ್ಣೆದುರೇ ಉಳಿದುಕೊಂಡಿದ್ದ ನಿಸರ್ಗ ರಚನೆಗಳು ಹೀಗೆ ದಂಧೆಕೋರರ ಕೈಗೆ ಸಿಕ್ಕಿ ನೆಲೆ ಕಳೆದುಕೊಳ್ಳುವಾಗ, ನಂಬುಗೆಯ ವಕಾಲತ್ತಿನ ಮನಸ್ಸುಗಳು ಎಚ್ಚರಾದಂತೆ ಕಂಡಿಲ್ಲ! ಈಗ ಕಟ್ಟಲಾಗುತ್ತಿರುವ ಇಸ್ಲಾಮಿಕ್ ಶೈಲಿಗೆ ಹತ್ತಿರದ ನಾಗಗೋಪುರಗಳೆಂಬ ಕಾಂಕ್ರೀಟ್ ವಾಸ್ತು ರಚನೆಯಲ್ಲಿ ನಾಗ ನೆಲೆಗೊಳ್ಳಲು ಸಾಧ್ಯವೇ ಎಂಬ ಪ್ರಶ್ನೆಯನ್ನೂ ಅವು ಕೇಳಿಕೊಳ್ಳುತ್ತಿಲ್ಲ. ಇದಕ್ಕೆಲ್ಲಾ ಬಳಕೆಯಾಗುತ್ತಿರುವ ಹಣದ ಮೂಲದ ಕುರಿತಾದ ಪಾವಿತ್ರ್ಯದ ಪ್ರಶ್ನೆಯೂ ಅಲ್ಲಿಲ್ಲ! ಅಡ್ಡದಾರಿಯಲ್ಲಿ ಸಂಪಾದನೆ ಮಾಡಿದ ಕಳ್ಳ–ಸುಳ್ಳರ ಜೊತೆಗೆ ನಿಷ್ಪಾಪಿ ಬಡವರೂ ಈ ಹೊಸ ರೂಪಾಂತರಕ್ಕೆ ತೆರಿಗೆ ಕಟ್ಟಿ ಸೋಲುತ್ತಿರುವುದನ್ನು ಈ ನಂಬುಗೆಯ ವಕೀಲರುಗಳು ಮೌನವಾಗಿಯೇ ಸಮರ್ಥಿಸುತ್ತಾರೆ! ಯಾಕೆಂದರೆ ನಾಗನ ಸಂಸ್ಕಾರಕ್ಕೆಂದು ವಂತಿಗೆ ಕೊಡಲಾಗದವರು ಊರೆಲ್ಲ ಜೋಳಿಗೆ ಹಿಡಿದು ಭಿಕ್ಷೆ ಬೇಡಿದ್ದನ್ನು ನಾನು ಕಂಡಿದ್ದೇನೆ. ಈ ಭಿಕ್ಷೆಯನ್ನೂ ನಿರ್ದಯವಾಗಿ ಕಸಿಯುವುದನ್ನು ನಂಬುಗೆ ಎಂದು ಹೇಗೆ ಸಮರ್ಥಿಸಲು ಸಾಧ್ಯ? ಹೇಗಾದರೂ ಮಾಡು ನನ್ನ ಸೇವೆ ಬಾಕಿ ಇರಿಸಿಕೊಳ್ಳಬಾರದು ಎಂದು ಹುಕುಂ ಕೊಡುವ ನಾಗಪಾತ್ರಿಗಳ 'ನುಡಿ' ಅನೈತಿಕತೆಯನ್ನೂ ಉತ್ತೇಜಿಸುತ್ತದೆ ಯಲ್ಲವೆ? ಸಂಸ್ಕೃತಿ, ನಂಬುಗೆ ಇವುಗಳ ಕಾರ್ಯರೂಪದ ಅನುಷ್ಠಾನಕ್ಕಿರುವಷ್ಟೇ ಪ್ರಾಮುಖ್ಯತೆ, ಅವುಗಳ ನಿಷ್ಕಳಂಕ / ಪಾರದರ್ಶಕ ಮುಂದುವರಿಕೆಗೂ ಇರಬೇಕಲ್ಲವೆ?

ಬೀದಿಯಲ್ಲಿ ಬಿದ್ದ ಮನುಷ್ಯರ ಹೆಣವನ್ನು ನೋಡಿಯೂ ಮುಂದುವರಿದರೆ ಸೋಂಕದ ಪಾಪ, ಸತ್ತ ಸರ್ಪನ ಹೆಣಕ್ಕಷ್ಟೇ ಸೀಮಿತ ಮಾಡಿಕೊಂಡಿರುವುದರಿಂದ, ಕರಾವಳಿಯ ಸಹಕಾರಿ ಬ್ಯಾಂಕುಗಳಲ್ಲಿಯ ಸಾಲದ ದಫ್ತರುಗಳು ಎಷ್ಟು ಬೆಳೆದಿವೆ ಎಂಬುದನ್ನು ಇವರುಗಳೇನಾದರೂ ಗಮನಿಸಿದ್ದಿದೆಯೇ? ಓದು ಬಿಡಿಸಿದ ಮಕ್ಕಳನ್ನು ಹೋಟೆಲು, ಅಂಗಡಿಗಳಲ್ಲಿ ಒತ್ತೆಯಿಟ್ಟು ದುಡಿಸಿದ ತಾಯ್ತಂದೆಗಳ ಗೋಳಿನ ಚೀಲದಿಂದಲೂ ಈ ನಾಗ ಮತ್ತು ಸತ್ತ ನಾಗಗಳ ನೆವದ ಮೂಲಕ ಮಾಡುತ್ತಿರುವ ಲೂಟಿಯನ್ನು ನಂಬಿಕೆಯೆಂದಷ್ಟೇ ಭಾವಿಸಿ ತಣ್ಣಗೆ ಸಮರ್ಥಿಸಿಕೊಳ್ಳಲು ಹೇಗೆ ಸಾಧ್ಯವಾಗುತ್ತದೆ? ದರ್ಶನದ ಸಾಮಾನ್ಯ ನಿಯಮದಂತೆ ದಿನವೊಂದಕ್ಕೆ ಒಂದು ದರ್ಶನ ಮುಗಿಸಿದ ಪಾತ್ರಿಯ ಮೇಲೆ ಮತ್ತೊಂದು ಆಕರ್ಷಣೆ ಆಗಬೇಕೆಂದರೆ ಮುಂದಿನ ದಿನಕ್ಕಾಗಿ ಕಾಯಬೇಕು. ಅದಕ್ಕಾಗಿ ಆತ ಮತ್ತೊಂದು ದಿನದ ವ್ರತಾಚರಣೆ ಮಾಡಬೇಕು. ಇದು ದೇವರು ಬರಿಸಿಕೊಳ್ಳುವುದನ್ನು ನಂಬಿಕೊಂಡು ಬಂದ ಭೂತಾರಾಧನಾ ಪರಂಪರೆಯ ನಂಬಿಕೆ. ಆದರೆ ವಾದ್ಯದ ಹಿಮ್ಮೇಳವನ್ನೂ ತಯಾರಿಸಿಕೊಂಡು ಆಧುನಿಕ ವಾಹನ ಸೌಲಭ್ಯದ ನೆರವಿನಿಂದ ಜಗತ್ತನ್ನು ೨೧ ಬಾರಿ ಸುತ್ತಿಬಂದವನೆಂದು ಹೇಳಲಾಗುವ ಆ ಕೊಡಲಿರಾಮನನ್ನು ನೆನಪಿಸುವಂತೆ, ಬೆಳಗಿನಿಂದ ಸಂಜೆಯ ತನಕ ದರ್ಶನಕ್ಕೊಂದರಂತೆ ತಲಾ ೩–೫ ಸಾವಿರವನ್ನು ಪೀಕುತ್ತಾ ಉಟ್ಟ ಪಟ್ಟೆಯಲ್ಲಿಯೇ ಹತ್ತಾರು ದರ್ಶನಗಳನ್ನು ಮಾಡಬಲ್ಲ ನಾಗಪಾತ್ರಿಗಳು ಹಾಕುತ್ತಿರುವ ದುಡಿಮೆಯ ಸ್ಕೆಚ್ಚು ಈ ನಂಬುಗೆಯ ಕಾವಲುಗಾರರಿಗೆ ಯಾಕೆ ದಂಧೆ ಎಂದು ಅರ್ಥವಾಗುವುದಿಲ್ಲ? ಈ ನಡುವೆ ಭಾರತದಾದ್ಯಂತ ದೇಶ ಮತ್ತು ಸಂಸ್ಕೃತಿಯನ್ನು ಅತಿಯಾಗಿ ಪ್ರೀತಿಸುವವರ ಬಾಯಲ್ಲಿ ಈಗ ಕಪ್ಪು ಹಣ–ಭ್ರಷ್ಟಾಚಾರದ್ದೇ ಸುದ್ದಿ. ಅದಕ್ಕೆ ಅವರೆಲ್ಲರೂ ಸ್ವಿಸ್ ಬ್ಯಾಂಕ್ ಎನ್ನುವ ಅಗೋಚರ ಸಂಸ್ಥೆಯನ್ನೇ ತೋರುತ್ತಾರೆ. ಆದರೆ ಈ ಧಾರ್ಮಿಕತೆ ಹೆಸರಿನ ಲೂಟಿ ಆ ಭ್ರಷ್ಟಾಚಾರದ ಚಿಂತನೆಯೊಳಗೆ ಬರುವುದೇ ಇಲ್ಲ! ಕಣ್ಣೆದುರೇ ನಡೆಯುವ ತೆರಿಗೆ ಕಟ್ಟದ ಹಣದ ಸೇರಿಕೆಯನ್ನು ಯಾವ ಬಣ್ಣದ ಹಣವೆನ್ನಬೇಕೋ ತಿಳಿಯದು. ತಿಂಗಳೊಂದರ ಕನಿಷ್ಠ ಲಕ್ಷವನ್ನೂ ಮೀರಿ ದುಡಿಯುತ್ತಿರುವ ನಾಗಪಾತ್ರಿಯಾದವನ ಆದಾಯಕ್ಕೂ ಮಾಮೂಲಿ ದೈವಪಾತ್ರಿಯ ಆದಾಯಕ್ಕೂ ಇರುವ ಅಗಾಧವಾದ ಅಂತರವನ್ನು ತುಲನೆ ಮಾಡಿದಲ್ಲಿ ಇದು ತಿಳಿದೀತು. ೨೦–೩೦ ವರ್ಷಗಳ ಹಿಂದೆ ನಾಗಪಾತ್ರಿಗಳಾದವರು ಹೀಗೆಯೇ ಸಿರಿವಂತರಾಗಿದ್ದರೇ? ಇದು ನಂಬಿಕೆಯನ್ನು ಬಂಡವಾಳ ಮಾಡಿಕೊಂಡ ಲೂಟಿಯಲ್ಲವೇ? ಅದರೊಂದಿಗೆ ಅವೇ ನಂಬಿಕೆಗಳ ಮೂಲೋತ್ಪಾಟನೆಯೂ ಹೌದಲ್ಲವೇ?

ನಂಬುಗೆಯ ಹೆಸರಿನಲ್ಲಿ ಮರೆಮಾಚಿ ನಡೆಸುತ್ತಿರುವ ಲೂಟಿ ಹಾಗೂ ಹಳೆಯದು ಹಾಗೆಯೇ ಉಳಿಯಬೇಕೆಂದು ಮಡೆಸ್ನಾನದಂತಹ ಆಯ್ದ ಕೆಲವನ್ನು ಉಳಿಸಿಕೊಳ್ಳಬೇಕೆಂದು ಒದ್ದಾಡುವುದು ಎರಡೂ ಪರಸ್ಪರ ಪೂರಕವಾದ ಕಸರತ್ತುಗಳೇ. ಉಂಡ ಎಂಜಲಲ್ಲಿ ದೇಹವನ್ನೂ ಹುಟ್ಟುಗತಿಯ ಹೆಸರಿನ ನುಡಿಯೆಂಜಲಿನಲ್ಲಿ ಆರ್ಥಿಕವಾದ ಉರುಳಾಟವನ್ನೂ ಉತ್ಪಾದನೆ ಮಾಡಿಕೊಂಡು ಬರುವುದು ಬೇರೆ ಬೇರೆಯಾದವುಗಳಲ್ಲ. ಆ ಕಾರಣಕ್ಕಾಗಿಯೇ ನಂಬುಗೆಗಳು ಪ್ರಶ್ನಿಸಲ್ಪಟ್ಟರೆ ಸಂಸ್ಕೃತಿಯೆಂಬ ಹೆಸರಿನ ಆಕರ್ಷಕ ಬಟ್ಟೆಯಲ್ಲಿ ಅವಿತಿರಿಸಿಕೊಂಡ ನಾಜೂಕಾದ ಆಯುಧಗಳು ಮತ್ತು ನಿರಾತಂಕವಾಗಿ ನಡೆಸಿಕೊಂಡು ಬರಲಾಗುತ್ತಿರುವ ತಳವರ್ಗದ ಮೇಲಿನ ದಾಳಿಯ ಯೋಜನೆಗಳು ನಗ್ನವಾಗಿ ಎಲ್ಲರಿಗೂ ಕಾಣಿಸಬಹುದೆಂಬ ಭಯದಿಂದಾಗಿಯೇ ಆ ವಿವರಗಳು ಮುನ್ನೆಲೆಗೆ ಬಂದಾಗಲೆಲ್ಲಾ ಮುಗಿಬಿದ್ದು ಸಮರ್ಥನೆಗಿಳಿಯುವುದನ್ನು ಕಾಣುತ್ತಿದ್ದೇವೆ. ನಂಬುಗೆ ಮತ್ತು ಸಂಸ್ಕೃತಿಯ ಬಗೆಗೆ ಮಾತನಾಡುವವರಿಗೆ ಇಂತಹ ಪ್ರಶ್ನೆಗಳನ್ನು ಎದುರಾಗಿ ಉತ್ತರಿಸಿಕೊಳ್ಳುವ ಅಥವಾ ಹಾಗೆ ಆಗುತ್ತಿರುವ ನಂಬುಗೆಯ ಹೆಸರಿನ ಅನಾಚಾರವನ್ನು ತಡೆಯುವ ಹೊಣೆಗಾರಿಕೆಯೂ ಇರಬೇಕು. ಶತಮಾನದ ನಂಬಿಕೆಯನ್ನು ಗೌರವಿಸಬೇಕು ಎನ್ನುವವರಿಗೆ ಹತ್ತಾರು ವರ್ಷಗಳ ಹಿಂದಿನ ಕನಿಷ್ಠ ಆರೋಗ್ಯಕರ ಸ್ಥಿತಿಯಾದರೂ ಉಳಿಯಬೇಕೆಂಬ ಎಚ್ಚರ ಇರಬೇಕು. ಆದರೆ ಹೀಗೆ ಇರಬೇಕಾದುದನ್ನು ನಿರೀಕ್ಷಿಸುವ ನಮ್ಮಂಥವರಿಗೆ ನಾವುಗಳಿಗೆ ಜನರ ವಿವೇಚನೆಯ ಉಸಿರನ್ನೇ ಹಿಸುಕಬಲ್ಲವರಿಂದ ಹಸಿರುಳಿಸುವ, ಜನರ ಬೆವರಿಗೆ ಬೆಲೆಕೊಡುವ ಕರ್ತವ್ಯದ ನಿರೀಕ್ಷೆ ಮಾಡುವ ನಮ್ಮ ಬೋಳೇತನದ ಕುರಿತಾದ ಎಚ್ಚರವೂ ಇರಬೇಕು ಎಂಬುದನ್ನೂ ಮರೆಯಬಾರದು.

**ಜಯಪ್ರಕಾಶ್ ಶೆಟ್ಟಿ ಎಚ್.**
'ತೆನೆ', ಸರ್ವಪ್ರಕಾಶನಗರ, ಅಂಕದ ಕಟ್ಟೆ, ಕೋಟೇಶ್ವರ, ಕುಂದಾಪುರ – ೫೭೬ ೨೨೨

# ಅಂಧಶ್ರದ್ಧೆ: ಕಾರಣ, ಪರಿಣಾಮ, ನಿರ್ಮೂಲನೆ

ಓದುಗರ ವೇದಿಕೆ



**ಹ**ನ್ನೆರಡನೆಯ ಶತಮಾನದ ವಚನಕಾರರು ಹೊಸಧರ್ಮ ಸ್ಥಾಪಿಸುವದರೊಂದಿಗೆ, ಅಂದಿನ ಕಾಲದ ಹಿಂದೂಧರ್ಮದಲ್ಲಿದ್ದ ಹಾಗೂ ಇಂದಿಗೂ ಇರುವ ಹಲವಾರು ಮೌಢ್ಯಾಚರಣೆಗಳ ವಿರುದ್ಧ ಹೋರಾಡಿದರು. ಇಪ್ಪತ್ತು ಮತ್ತು ಇಪ್ಪತ್ತೊಂದನೆಯ ಶತಮಾನದಲ್ಲಿ ವಿಜ್ಞಾನ ಅದ್ಭುತ ಸಾಧನೆ ಮಾಡಿದರೂ ವೈಜ್ಞಾನಿಕ ಮನೋಭಾವ ನಮ್ಮ ಸಮಾಜದಲ್ಲಿ ಬೆಳೆಯಲಿಲ್ಲ. ಅದರ ಬದಲಾಗಿ ಮೌಢ್ಯಾಚರಣೆಗಳು (ಹೋಮ, ಹವನ, ಮಂತ್ರ, ತಂತ್ರ ಇತ್ಯಾದಿ) ಹಿಂದೆಂದಿಗಿಂತಲೂ ಇಂದು ಹೆಚ್ಚು ನಗ್ನ ನರ್ತನ ಮಾಡುತ್ತಲಿವೆ. ಅದಕ್ಕೆ ಕಾರಣ 'ಮನದ ಮುಂದಣ ಆಸೆ'! ಪ್ರಭುದೇವರ ಒಂದು ಸುಪ್ರಸಿದ್ಧ ವಚನದ ಸಾಲು ಹೀಗಿದೆ :

**ರಾಜಕಾರಣಿಗಳ ಆಸೆ**

"ಮನದ ಮುಂದಣ ಆಸೆಯೇ ಮಾಯೇ ಕಾಣಾ ಗುಹೇಶ್ವರ" ಮುಂದಣ ಆಸೆಯ ಜೊತೆಗೆ ವೈಜ್ಞಾನಿಕ ದಾರಿದ್ರ್ಯವು ಜೊತೆಗೂಡಿದರೆ ಮೌಢ್ಯತೆ ಮೈದಾಳುತ್ತದೆ.

ನಮ್ಮ ದೇಶದ ಬಹುಪಾಲು ರಾಜಕಾರಣಿಗಳು ಅಕ್ರಮವಾಗಿ ಸಂಪಾದಿಸಿದ ಸಂಪತ್ತಿನಿಂದಾಗಿ ಪಾಪ ಪ್ರಜ್ಞೆಯಿಂದ ಬಳಲುತ್ತಿದ್ದಾರೆ. ಆದ್ದರಿಂದ ಅವರೆಲ್ಲ ಹೋಮ, ಹವನ, ಭೂತಾರಾಧನೆ, ಬಾಬಾಗಳ ಪೂಜೆ ಇತ್ಯಾದಿಗಳ ಮೊರೆಹೋಗುತ್ತಾರೆ. ಕಪ್ಪು ಹಣದ ಸಂಪತ್ತು ಇಲ್ಲದಿದ್ದರೆ, ಈಗ ಸಿಕ್ಕಿರುವ ಅಧಿಕಾರವು ಸದಾ ಕಾಲ ಉಳಿದಿರಬೇಕು, ಅಷ್ಟೇ ಅಲ್ಲದೆ ಇನ್ನೂ ಉನ್ನತಮಟ್ಟದ ಅಧಿಕಾರ ಪಡೆಯಬೇಕೆಂಬ ಮನದ ಮುಂದಣ ಆಸೆಯಿಂದಾಗಿ ಇಂಥ ಬಗೆ ಬಗೆಯ ಮೌಢ್ಯಾಚರಣೆಗಳನ್ನು ಆಚರಿಸುತ್ತಲಿದ್ದಾರೆ.

**ವಿಜ್ಞಾನಿಗಳೂ ಮೌಢ್ಯಾಚರಣೆಯಲ್ಲಿ**

ನಮ್ಮ ವಿಜ್ಞಾನಿಗಳೂ ಮೌಢ್ಯತೆಯಿಂದ ದೂರವಾಗಿಲ್ಲ; ಅದೇ ಅತ್ಯಂತ ನಾಚಿಕೆಗೇಡಿನ ಸಂಗತಿ. ಮಂಗಳಯಾನದ ಕ್ಷಿಪಣಿ ಹಾರಿಸುವದಕ್ಕಿಂತ ಒಂದು ದಿನ ಮೊದಲು ಇಸ್ರೋದ ಅಧ್ಯಕ್ಷ ಡಾ॥ ಕೆ. ರಾಧಾಕೃಷ್ಣ ತಿರುಪತಿ ತಿಮ್ಮನ ಮುಂದೆ ಕ್ಷಿಪಣಿಯ ಮಾದರಿಯನ್ನು ಇಟ್ಟು ಪ್ರಾರ್ಥನೆ ಸಲ್ಲಿಸಿದರು !! ಮಂಗಳಯಾನ ಯಶಸ್ವಿಯಾಗುವ ಸೂಚನೆಗಳಿವೆ. ಈ ಯಶಸ್ಸಿನ ಶ್ರೇಯಸ್ಸು ಆ ಕಲ್ಲಿನ ಮೂರ್ತಿಗೆ ಸಲ್ಲಬೇಕೋ, ಇಸ್ರೋದ ವಿಜ್ಞಾನಿಗಳಿಗೋ ಎಂಬುದನ್ನು ಮೂರ್ಖ ಡಾ॥ ಕೆ. ರಾಧಾಕೃಷ್ಣ ಅವರೇ ಉತ್ತರಿಸಬೇಕು !!

**ನದಿಗೆ ಬಾಗಿನ**

ಕಾವೇರಿ ಜಲಾಶಯ ತುಂಬಿದಾಗ ನದಿಗೆ ಬಾಗಿನವನ್ನು ಅರ್ಪಿಸುವ ಸಂಪ್ರದಾಯವನ್ನು ಯಾವುದೇ ರಾಜಕೀಯ ಹಾಗೂ ಸಾಮಾಜಿಕ ಸಿದ್ಧಾಂತಗಳ ಪರಿಚಯವಿಲ್ಲದ ಅಂದಿನ ಮುಖ್ಯಮಂತ್ರಿ ದಿ॥ ಗುಂಡೂರಾವ್ ಆರಂಭಿಸಿದರು. ಅದಕ್ಕಿಂತ ಪೂರ್ವದಲ್ಲಿದ್ದ ಯಾವ ಮುಖ್ಯಮಂತ್ರಿಯೂ ಇಂಥ ಬಾಗಿನ ನೀಡಿರಲಿಲ್ಲ. ಈ ಮೌಢ್ಯಾಚರಣೆಯನ್ನು ನಂತರ ಬಂದ ಎಲ್ಲಾ ಮುಖ್ಯಮಂತ್ರಿಗಳೂ (ರಾಮಕೃಷ್ಣ ಹೆಗಡೆ ಮತ್ತು ಜೆ. ಹೆಚ್. ಪಟೇಲರೂ ಸೇರಿದ್ದಾರೆ) ನದಿಗೆ ಬಾಗಿನ ಅರ್ಪಿಸಿದ್ದಾರೆ. ಇಂದಿನ ಮುಖ್ಯಮಂತ್ರಿ ಸಿದ್ದರಾಮಯ್ಯ ಅವರೂ ಬಾಗಿನ ಅರ್ಪಿಸಿ, ನದಿಯನ್ನು ಮಲಿನಗೊಳಿಸಿದ್ದಲ್ಲದೆ, ಈ ಸಮಾರಂಭಕ್ಕಾಗಿ ಸುಮಾರು ೧೦ ಲಕ್ಷ ರೂ.ಗಳಷ್ಟು ಸಾರ್ವಜನಿಕ ಹಣವನ್ನು ವ್ಯರ್ಥಗೊಳಿಸಿದ್ದಾರೆ. ಇಂಥವರನ್ನು ಕಂಡೇ ಬಸವಣ್ಣನವರು ಹೀಗೆ ಹೇಳುತ್ತಾರೆ – "ಬತ್ತುವ ಜಲವ, ಒಣಗುವ ಮರವ ಪೂಜಿಸುವವರು ನಿಮ್ಮನೆತ್ತ ಬಲ್ಲರು ಕೂಡಲ ಸಂಗಮ ದೇವಾ."

**ಸಂವಿಧಾನ ವಿರೋಧಿ ನಡೆಗಳು**

ಈ ಮಹಾಶಯರೆಲ್ಲರೂ ನಮ್ಮ ಸಂವಿಧಾನಕ್ಕೆ ವಿರೋಧಿಗಳಾಗಿದ್ದಾರೆ. ನಮ್ಮ ಸಂವಿಧಾನದ ೫೧ನೇ ಪರಿಚ್ಛೇದದಲ್ಲಿ ಹೀಗೆ ಘೋಷಿಸಲಾಗಿದೆ :

"ವೈಜ್ಞಾನಿಕ ಮನೋಭಾವ, ಮಾನವೀಯತೆ ಮತ್ತು ಎಲ್ಲವನ್ನೂ ಪ್ರಶ್ನಿಸುವ, ಶೋಧನೆಗೆ ಒಳಪಡಿಸುವ ಹಾಗೂ ಸುಧಾರಣೆಯನ್ನು ತರುವ ಪ್ರವೃತ್ತಿಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುವುದು ಪ್ರತಿಯೊಬ್ಬ ಭಾರತೀಯ ಪ್ರಜೆಯ ಕರ್ತವ್ಯವಾಗಬೇಕು." ಆದ್ದರಿಂದ ನಮ್ಮ ಈ ಎಲ್ಲಾ ಅಧಿಕಾರಾರೂಢ ರಾಜಕಾರಣಿಗಳು ಸಂವಿಧಾನವನ್ನು ಉಲ್ಲಂಘಿಸಿದ್ದಾರೆ, ಇದರಲ್ಲಿ ಸಂಶಯವಿಲ್ಲ ! ಆದರೆ ಯಾರಲ್ಲಿ ಮೊರೆಯಿಡಬೇಕು ? ಬಹುಶಃ ಹೈಕೋರ್ಟಿನಲ್ಲಿ ಸಾರ್ವಜನಿಕ ಹಿತಾಸಕ್ತಿ (ಪಿ.ಐ.ಎಲ್.) ಅರ್ಜಿಯನ್ನು ಸಲ್ಲಿಸಬೇಕಾದೀತು; ಇದೊಂದೇ ದಾರಿ.

**ಮೂಢನಂಬಿಕೆ ವಿರೋಧಿ ವಚನಗಳು**

**ರಾಜಕಾರಣಿಗಳಿಗೆ**

*ರಾಜಕಾರಣಿಗಳೇ ಯಾಕೆ ಹೋಮ ಹವನ ?*
*ಚಂಡಿಕಾ ಹೋಮ ಮಾಡಿದವರು ಕಾಲ್ಬೆಂಡಿನಂತಾದರು*
*ಸರ್ಪಯಾಗ ಮಾಡಿದವರು ಸರ್ಪಸುತ್ತಿಗೆ ತುತ್ತಾದರು.*
*ಅಶ್ವಮೇಧಯಾಗ ಮಾಡಿದವರು ಅರೆಗಳಿಗೆ ಇರಲಿಲ್ಲ.*
*ಯಾಕೆ ಈ ಹೋಮ ಹವನ ಯುಗದ ಮೂಢರೆ ?*
*ಅಂತರಂಗದಲ್ಲಿ ಬೆಂಕಿ ಹೊತ್ತಿಸಿ ಶುದ್ಧರಾಗಿ ಬನ್ನಿ*
*ಒಲಿವನು ಮತದಾರ ಪ್ರಭು, ಎಂದ ಸರ್ವಜ್ಞಾನಿ ಪ್ರಭು*

**ಡಾ॥ ಹೆಚ್. ಚಂದ್ರಶೇಖರ,** ಬೆಂಗಳೂರು

**ಆತ್ಮೀಯ ಓದುಗ ಬಂಧುಗಳೇ,**

**ಅಂಧಶ್ರದ್ಧೆ : ಕಾರಣ, ಪರಿಣಾಮ, ನಿರ್ಮೂಲನೆ ಈ ವಿಷಯ ಕುರಿತು ಓದುಗರ ವೇದಿಕೆಗೆ ನಿಮ್ಮ ಅಮೂಲ್ಯವಾದ ಅಭಿಪ್ರಾಯ, ಅನಿಸಿಕೆಗಳನ್ನು ಕಳಿಸಿ ಸಹಕರಿಸಿದ್ದೀರಿ. ಈ ಚಿಂತನೆಗಳು ಚಟುವಟಿಕೆಗಳ ರೂಪದಲ್ಲಿ ಪ್ರಕಟವಾಗಬೇಕು. ನಮ್ಮ ಸಮಾಜದಲ್ಲಿ ತಾವೆಲ್ಲ ಸೂಚಿಸಿದ ಹಾಗೆ ನಂಬಿಕೆ – ಮೂಢನಂಬಿಕೆಯ ಮಧ್ಯೆ ತೆಳುವಾದ ಗೆರೆ ಇದೆ. ಮೂಢನಂಬಿಕೆಗೆ ಪ್ರತಿರೋಧ (ಯಾವುದೇ ರೀತಿಯಲ್ಲಿ) ನಂಬಿಕೆಯ ಬದಲಾವಣೆ (ವೈಜ್ಞಾನಿಕತೆಯೆಡೆಗೆ) ಮಾಡುವ ನಿಟ್ಟಿನಲ್ಲಿ ತಾವೆಲ್ಲ ನಡೆಸುವ ಯತ್ನ ಯಶಸ್ವಿಯಾಗಲೆಂದು 'ಹೊಸತು' ಶುಭಕೋರುತ್ತದೆ.**

*– ಸಂಪಾದಕ*



# ಓದುಗರ ವೇದಿಕೆ






"ಎಲ್ಲಿ ಕಾರ್ಯ-ಕಾರಣ ಭಾವವನ್ನು ಸರಳವಾಗಿ ನಿರಾಕರಿಸಲಾಗುತ್ತದೋ ಅದೇ ಅಂಧಶ್ರದ್ಧೆ" – ನಿಸರ್ಗದ ಅಗಾಧ ಮತ್ತು ಆಶ್ಚರ್ಯಕರವಾದ ಶಕ್ತಿಶಾಲಿಯಾದ ಘಟನೆಗಳು ಸಹಜವಾಗಿ ಮಾನವರನ್ನು ನಿಸರ್ಗದ ಈ ಶಕ್ತಿಯ ಮುಂದೆ ತಾವೆಷ್ಟು ಕ್ಷುದ್ರ, ಇದಕ್ಕೆ ಪ್ರತಿಸ್ಪರ್ಧಿಯಾಗಿ ನಿಲ್ಲುವುದು ತಮಗೆ ಆಗದ ಸವಾಲು ಎನ್ನುವಷ್ಟರಮಟ್ಟಿಗೆ ಕಂಗೆಡಿಸಿದವು. ಅದಕ್ಕೆ ಶರಣಾಗಿ ಬಾಳ್ವೆ ುವುದೇ ತಮಗಿರುವ ಏಕೈಕ ಮಾರ್ಗವೆಂದು ಆದಿಮಾನವರು ಎಂದರೆ ನಮ್ಮ ಪೂರ್ವಜರು ಬಗೆದರೋ ಅಂದಿನಿಂದಲೇ ಒಂದೊಂದಾಗಿ ನಂಬಿಕೆಗಳು ಬೆಳೆದುಬಂದವು. ವೈಯಕ್ತಿಕ ಮತ್ತು ಸಾಮೂಹಿಕವಾಗಿ ಆಚರಣೆಗೆ ಬಂದ ಇಂತಹ ನಂಬಿಕೆಗಳು ಕ್ರಮೇಣ ಸಮಾಜದಿಂದ ಸಮಾಜಕ್ಕೂ ನಾನಾ ಪ್ರದೇಶಗಳಿಗೂ ಹರಡಿ, ಹಲವಾರು ಶತಮಾನಗಳಿಂದ ನಿರಂತರ ಆಚರಣೆಯಲ್ಲಿ ಉಳಿದುಬಿಟ್ಟಿವೆ.

ಕಾಲಚಕ್ರವು ಉರುಳಿದಂತೆ ಪ್ರಶ್ನಿಸುವ ಮನೋಭಾವ ಹೊಂದಿದ ಕೆಲವರು ತಮ್ಮ ತರ್ಕ ಮತ್ತು ನಿರಂತರ ಅಧ್ಯಯನದ ಮೂಲಕ ಇಂತಹ ಅಂಧಶ್ರದ್ಧೆಯ ನಂಬಿಕೆಗಳನ್ನು ಪ್ರಶ್ನಿಸಿ, ಕಾರ್ಯ-ಕಾರಣ ಸಂಬಂಧಗಳನ್ನು ವಿಜ್ಞಾನದ ನೆರವಿನೊಂದಿಗೆ ಬೆಳಕಿಗೆ ತರುವ ಪ್ರಯತ್ನ ಮಾಡಿದರೂ ವಿಜ್ಞಾನದ ಅಭಿವೃದ್ಧಿ ಮತ್ತು ಶಿಕ್ಷಣ ಸಮುದಾಯವನ್ನು ಒಳಗೊಳ್ಳದೇ ಇದ್ದುದು ಇಂತಹ ನಂಬಿಕೆಗಳು ಸಮಾಜದಲ್ಲಿ ಹಾಗೆಯೇ ಉಳಿದುಕೊಂಡು ಬರಲು ಕಾರಣವಾಗಿರಬಹುದು.

ಅಂಧಶ್ರದ್ಧೆಯು ಮನುಷ್ಯರನ್ನು ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಮತ್ತು ನೈತಿಕವಾಗಿಯೂ ಅಧಃಪತನಕ್ಕೆ ತಳ್ಳುತ್ತದೆ. ಯಾರೋ ಒಬ್ಬರ ನಂಬಿಕೆ ಅಥವಾ ಒಂದು ಆಚರಣೆ ವ್ಯಕ್ತಿಯು ತಾನು ಮಾಡಬೇಕಾದ ಒಂದು ಉತ್ತಮ ಕಾರ್ಯವನ್ನು ಅನಪೇಕ್ಷಿತವಾಗಿ ತಡೆಯುವುದರಿಂದ ಆತನಿಗೆ ಆರ್ಥಿಕವಾಗಿ ನಷ್ಟವಾದರೆ, ಅದರಿಂದ ಸಮಯವೂ ವ್ಯರ್ಥ ಮತ್ತು ಆತನ ನೈತಿಕ ಬಲವನ್ನು ಉಡುಗಿಸಿದಂತಾಗುತ್ತದೆ.

ಇತ್ತೀಚಿನ ಸರ್ಕಾರಗಳು ಮತ್ತು ಅಧ್ಯಾತ್ಮ ಗುರುಗಳೆಂದುಕೊಂಡ ಎಡಬಿಡಂಗಿಗಳಿಂದ ಜನರ ಇಂತಹ ಮೌಢ್ಯಗಳಿಗೆ ನೀರೆರೆದು ಪೋಷಿಸುವ ನಡೆಗಳು ಕಂಡುಬರುತ್ತಿವೆ. ಮೌಢ್ಯಗಳ ಬಲೆಯಲ್ಲಿ ಸಿಲುಕಿರುವ, ತಮ್ಮಂತೆಯೇ ಇರುವ ಮನುಜರನ್ನು ಅಂತಹ ಕೆಸರಿನಿಂದ ಮೇಲೆತ್ತುವ ಕನಿಷ್ಠ ಮಾನವೀಯತೆಯನ್ನು ಮೆರೆಯದಿರುವುದು ದುರಂತವೇ ಸರಿ. ಇಂತಹ ಮಂದಿಯಿಂದ ತಮ್ಮ ಪುರಾಣ, ಪರಂಪರೆ, ಸಂಸ್ಕೃತಿ, ಸಂಪ್ರದಾಯವನ್ನು ಮುಂದುವರಿಸಿಕೊಂಡು ಹೋಗುವುದು ಇದರ ಹಿಂದಿರುವ ಹುನ್ನಾರವಾಗಿದೆ.

ಪ್ರಸ್ತುತ, ಕರ್ನಾಟಕದಲ್ಲಿ ಇಂತಹ ನಂಬಿಕೆಗಳನ್ನು "ಮೂಢನಂಬಿಕೆ ಪ್ರತಿಬಂಧಕ ಕಾಯ್ದೆ"ಯಡಿ ತರಲು ಹೊರಟಿರುವುದು ಒಂದು ಅವಶ್ಯಕ ಮತ್ತು ಸ್ವಾಗತಾರ್ಹ ಕ್ರಮ. ಇಂತಹ ನಂಬಿಕೆಗಳಿಂದಲೇ ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿರುವ ಎಲ್ಲರಿಗೂ ಇದು ಆಘಾತವನ್ನು ಉಂಟುಮಾಡಿರುವುದು ಅವರ ಬಡಬಡಿಕೆಯಿಂದಲೇ ವ್ಯಕ್ತವಾಗುತ್ತದೆ. ಈ ಕಾಯ್ದೆಯಿಂದ ತತ್‌ಕ್ಷಣವೇ ಎಲ್ಲ ಅಂಧಶ್ರದ್ಧೆಯೂ ನಿರ್ಮೂಲನೆಯಾಗುತ್ತದೆ ಎಂಬ ಭ್ರಮೆಯಿಲ್ಲದಿದ್ದರೂ ಇದು ಕನಿಷ್ಠ ಪಕ್ಷ ಇಂತಹ ಅರ್ಥಹೀನ ಆಚರಣೆಗಳು ತಪ್ಪು ಮತ್ತು ಸಮಾಜಮುಖಿಯಲ್ಲದವು ಎಂಬ ಸಾಕಷ್ಟು ಮಟ್ಟದ ಗ್ರಹಿಕೆ ಜನಸಾಮಾನ್ಯರಲ್ಲಿ ಮೂಡುವ ಸಾಧ್ಯತೆ ಇದೆ.

**ಸಂಪತ್ ಕುಮಾರ್ ಎನ್.**, ಶಿವಮೊಗ್ಗ



**ನಂಬಿಕೆ (ಶ್ರದ್ಧೆ) ಅನಿವಾರ್ಯ :** ಪ್ರತಿಯೊಬ್ಬರ ಜೀವನವೂ ನಂಬಿಕೆಯಾಧಾರಿತ. ನಂಬಿಕೆ ಇಲ್ಲದಿದ್ದರೆ ದೇವರಿಲ್ಲ, ಧರ್ಮವಿಲ್ಲ. ಮೇಲಾಗಿ, ಮನಸ್ಸಿಗೆ ನೆಮ್ಮದಿಯೂ ಇರುವುದಿಲ್ಲ. ಜೀವನ ವೃಕ್ಷಕ್ಕೆ ನಂಬಿಕೆಯೇ ತಾಯಿಬೇರು. ಅಪಾಯಕಾರಿಯಲ್ಲದ ಇದಕ್ಕೆ ವಿಚಾರದ ಕೊಡಲಿ ಎತ್ತುವುದೇ ಅಪಾಯಕಾರಿ. ಅಪ್ಪ-ಅಮ್ಮ ಸೇರಿದಂತೆ ಗುರು-ಹಿರಿಯರ ಬಗ್ಗೆ ಗೌರವ, ದೇವರಲ್ಲಿ ನಂಬಿಕೆ, ಕಾಣಿಕೆ-ಕೊಡುಗೆ ನೀಡುವ ಅಭ್ಯಾಸ ಮಾಡಿದ್ದಕ್ಕೆ ಮನಸಾಕ್ಷಿ ಎಂಬ ಪರಿಕಲ್ಪನೆ, ಸದಾಚಾರ-ಸನ್ಮಾರ್ಗಗಳಿಂದ ಒಳ್ಳೆಯದಾಗುತ್ತದೆ ಎಂಬ ನಿರೀಕ್ಷೆ – ಇವುಗಳನ್ನು ಇರಿಸಿಕೊಂಡು ಬಾಳುವುದು ತಪ್ಪಲ್ಲ, ಅಪಾಯಕಾರಿ ಅಲ್ಲವೇ ಅಲ್ಲ.

**ಮೂಢನಂಬಿಕೆ (ಅಂಧಶ್ರದ್ಧೆ)–ಸಮರ್ಥನೀಯವಲ್ಲದ ನಂಬಿಕೆ :** ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆ ದೇವರ ಸೃಷ್ಟಿ, ರಾಹು-ಕೇತುಗಳಿಂದ ಗ್ರಹಣಗಳು, ಪಾದಪೂಜೆ, ಅಡ್ಡಪಲ್ಲಕ್ಕಿ ಉತ್ಸವ, ಗುಡಿ-ಅಶ್ವತ್ಥಕಟ್ಟೆಗಳಿಗೆ ಪ್ರದಕ್ಷಿಣೆ ಮುಂತಾದವು ಸಮರ್ಥಿಸಿಕೊಳ್ಳಲಾಗದ ನಂಬಿಕೆಗಳು. ಅವರವರ ವೈಯಕ್ತಿಕ ನೆಲೆಗಳಲ್ಲಿ ನಂಬುವುದಾದರೆ ನಂಬಿಕೊಳ್ಳಲಿ ಎಂದು ಬಿಟ್ಟುಬಿಡಬೇಕು. ಅದನ್ನು ಇನ್ನೊಬ್ಬರ ಮೇಲೆ ಹೊರಿಸುವುದಾದರೆ ಮಾತ್ರ ಮೂರ್ಖತನವಾಗುತ್ತದೆ.

**ಮೌಢ್ಯಾಚರಣೆಗಳು–ಅನಿಷ್ಟ , ಅಪಾಯಕಾರಿ :** ಮೂಢನಂಬಿಕೆಗಳ ಶನಿಸಂತಾನ / ಕ್ರಿಯಾರೂಪಗಳೇ ಮೌಢ್ಯಾಚರಣೆಗಳು. ಉದಾಹರಣೆಗೆ ಗ್ರಹಣ ಕಾಲದಲ್ಲಿ ಬಲಿ, ದೇವರ ಸನ್ನಿಧಿಯಲ್ಲಿ ಮತ್ತು ಮೂಕದೇವರ ಹೆಸರಿನಲ್ಲಿ ಪ್ರಾಣಿಗಳ ಬಲಿ, ಬೆತ್ತಲೆ ಸೇವೆ, ಮಡೆಸ್ನಾನ, ದೇವದಾಸಿ ಪದ್ಧತಿ, ವಾಸ್ತು, ಕೆಲವು ಕೆಲಸಗಳನ್ನು ಇಂತಹವರೇ ಮಾಡಬೇಕೆಂಬ ವಿಧಿ, ಮಹಿಳೆಯರ ವಿಚಾರದಲ್ಲಿ ಅಮಾನುಷ ಆಚರಣೆ(ಅನ್ಯ ಧರ್ಮೀಯರ ಮೌಢ್ಯಾಚರಣೆಗಳನ್ನು ಇಲ್ಲಿ ಹೆಸರಿಸಿಲ್ಲ) ಇವು ಅಸಹ್ಯ ಮಾತ್ರವಲ್ಲ, ಅಪಾಯಕಾರಿಯೂ ಹೌದು. ಆದ್ದರಿಂದ ಇವುಗಳನ್ನು ಬಿಡಿಸುವುದು ಆಗಲೇಬೇಕು.

ಅನಿವಾರ್ಯ ಅಸ್ತ್ರವೆಂಬಂತೆ ಕಾನೂನು ಬಳಕೆ ವಿಚಾರ ಪರಿಶೀಲಿಸುವುದು ಸೂಕ್ಷ್ಮ, ಅತಿಸೂಕ್ಷ್ಮವೆಂಬಂತಿರುವ ಈ ವಿಷಯದಲ್ಲಿ ಅವಸರದ/ಪ್ರತಿಷ್ಠೆಯ ತೀರ್ಮಾನ ಸರಿಯಲ್ಲ, ಅದು ಇಲ್ಲಸಲ್ಲದ ಗೊಂದಲಕ್ಕೆ ಕಾರಣವಾಗುತ್ತದೆ.

**ಎಲ್. ನರಸಿಂಹಯ್ಯ ತೊಂಡೋಟಿ,** ತುಮಕೂರು



ಅಂಧಶ್ರದ್ಧೆ ಎಂದರೇನು ? ಎಂಬ ಪ್ರಶ್ನೆಗೆ ಉತ್ತರ ನೀಡುವುದು ಸ್ವಲ್ಪ ಕಷ್ಟದ ಕೆಲಸ. ಅಂಧಶ್ರದ್ಧೆ ಎನ್ನುವಂಥದ್ದು ಮನುಷ್ಯನ ಹುಟ್ಟಿನೊಂದಿಗೆ ಬೆಳೆದುಬಂದಿದೆ. ಇದು ಕಾಲದಿಂದ ಕಾಲಕ್ಕೆ ಬದಲಾಗುತ್ತಾ ತನ್ನ ಸ್ವರೂಪವನ್ನು ಬದಲಾಯಿಸುತ್ತಾ ಸಾಗುತ್ತಿದೆ. ಒಂದು ಕಾಲದ ನಂಬಿಕೆಗಳು ಇನ್ನೊಂದು ಕಾಲಕ್ಕೆ ಸುಳ್ಳೆಂದು ವೈಜ್ಞಾನಿಕ ಯುಗ ಸಾಬೀತುಪಡಿಸಿದ್ದರೂ ಸಹ ಹಿಂದಿನ ಕಾಲದ ಕೆಲವು ಅನಿಷ್ಟ ಪದ್ಧತಿಗಳನ್ನು ಅನುಸರಿಸುವುದನ್ನು ಅಂಧಶ್ರದ್ಧೆ ಎನ್ನಬಹುದು. ಇಂತಹ ಆಚರಣೆಗಳು ತಳ ಸಮುದಾಯಗಳಲ್ಲಿ ಅಧಿಕವಾಗಿರುವುದು ಸ್ಪಷ್ಟ. ದೇವರು ಮತ್ತು ಧರ್ಮದ ಮೇಲಿನ ಅಪಾರವಾದ ನಂಬಿಕೆ ಹಾಗೂ ಅನಕ್ಷರತೆಯೇ ಇದಕ್ಕೆಲ್ಲ ಬಹುಮುಖ್ಯ ಕಾರಣವಾಗಿದೆ.

ಅಂಧಶ್ರದ್ಧೆಯು ಸಾಮಾಜಿಕವಾಗಿ ಬೆಳೆದುಬಂದ ಅನಿಷ್ಟ ಪದ್ಧತಿಗಳು, ದೇವರ ಹೆಸರಿನಲ್ಲಿ ಆಚರಿಸುವ ವಾಮಾಚಾರ, ಕಂದಾಚಾರ, ನರಬಲಿ, ಪ್ರಾಣಿಬಲಿ, ಹಿಂಸೆ, ಶೋಷಣೆ, ಮಡಿ-ಮೈಲಿಗೆ, ಹರಕೆ, ಮಡೆಸ್ನಾನ, ಮೂಢನಂಬಿಕೆ ಹಾಗೂ ಗೊಡ್ಡು ಸಂಪ್ರದಾಯಗಳನ್ನು ಒಳಗೊಂಡಿದೆ. ಈ ಆಚರಣೆಗಳು ಕೇವಲ ಹಿಂದೂಧರ್ಮಕ್ಕೆ ಮಾತ್ರ ಸೀಮಿತವಾಗಿಲ್ಲ. ಎಲ್ಲಾ ಧರ್ಮಗಳಲ್ಲಿದ್ದರೂ ಸಹ ಆಚರಣೆಯ ರೂಪ ಬೇರೆ, ಬೇರೆ. ಇಂತಹ ಅನಿಷ್ಟಗಳನ್ನು ಒಂದು ಶ್ರದ್ಧೆಯಾಗಿ ಕೈಗೊಳ್ಳುವುದರಿಂದಲೇ ಈ ಆಚರಣೆಗಳು ಇಂದಿಗೂ ನಮ್ಮ ಮುಂದಿವೆ. ಇಂತಹ ಆಚರಣೆಗಳಿಂದ ಸಮಾಜದಲ್ಲಿ ಶೋಷಣೆ, ಮಾನವೀಯ ಮೌಲ್ಯಗಳ ಅವನತಿ ಉಂಟಾಗಿ ಅಭಿವೃದ್ಧಿ ಕುಂಠಿತವಾಗುತ್ತದೆ. ಹಾಗೂ ಬಹುತೇಕ ಜನರು ಆರ್ಥಿಕ ಶೋಷಣೆಯ ಜೊತೆಗೆ ವೈಚಾರಿಕ ಅಂಧಕಾರಕ್ಕೆ ಒಳಗಾಗುತ್ತಿದ್ದಾರೆ. ಕೇವಲ ಕಾನೂನಿನ ರಚನೆಯಿಂದಾಗಿ ಇಂತಹ ಆಚರಣೆಗಳನ್ನು ಅಳಿಸಿಹಾಕಲು ಸಾಧ್ಯವಿಲ್ಲ. ಕಾರಣ ಅವರವರ ಧರ್ಮಗಳ ಮೇಲಿರುವ ಅಪಾರ ನಂಬಿಕೆ. ಆದ್ದರಿಂದ ಈ ವಿಚಾರಗಳ ಬಗ್ಗೆ ಕಳಕಳಿಯಿರುವ ಧರ್ಮ ಪ್ರಚಾರಕರು, ಮಠಾಧೀಶರು, ಸಾಹಿತಿಗಳು, ಹಿರಿಯ ಬುದ್ಧಿಜೀವಿಗಳೇ ಅಲ್ಲದೆ, ವಿಚಾರ ಗೋಷ್ಠಿಗಳು, ಕಿರುಚಿತ್ರಗಳು, ನಾಟಕ ಹಾಗೂ ಸಮೂಹ ಮಾಧ್ಯಮಗಳ ಮೂಲಕ ಜಾಗೃತಿ ಮೂಡಿಸುವುದು ಅಗತ್ಯವಾಗಿದೆ. ಜನರಿಗೆ ಇದರಿಂದಾಗುವ ಅಪಾಯಗಳನ್ನು ಅವರಿಗೆ ಅರ್ಥವಾಗುವ ರೀತಿಯಲ್ಲಿ ತಿಳಿಸಿ, ಜನರಲ್ಲಿ ವೈಚಾರಿಕತೆಯ ಬೀಜ ಬಿತ್ತಿದಾಗ ಮಾತ್ರ ಇಂತಹ ಅನಿಷ್ಟ ಪದ್ಧತಿಗಳನ್ನು ನಿರ್ಮೂಲನೆ ಮಾಡಬಹುದು.

**ಗಿರಿಧರ್ ಎಸ್.**, ಶಂಕರಘಟ್ಟ

ನಾನು ಓದಿದ ಪುಸ್ತಕ

ಸಂಪಾದಕರು : **ಮಾಧವಿ ಭಂಡಾರಿ ಕೆರೆಕೋಣ**
ಬೆಲೆ : ರೂ. ೯೫/-
ಪ್ರಕಾಶಕರು : ಚಿಂತನ ಪುಸ್ತಕ
ನಂ. ೪೦೫, ೧೦ನೇ ಮುಖ್ಯರಸ್ತೆ, ೧ನೇ ಅಡ್ಡರಸ್ತೆ
ಡಾಲರ್ಸ್ ಕಾಲೋನಿ, ಜೆ. ಪಿ. ನಗರ, ೪ನೇ ಫೇಸ್
ಬೆಂಗಳೂರು - ೫೬೦ ೦೭೮




# ಕುಕ್ಕರ್ ಹೇಳಿದ ಮಹಿಳಾ ವಿಮೋಚನೆ ಕಥನ

ಬಂಧಿತ ಬೇಡಿಗಳನ್ನು ಕಳಚಿ ಹಕ್ಕುಗಳನ್ನು ಪಡೆದುಕೊಳ್ಳಲು ಹೋರಾಡುವಂತೆ ಮತ್ತು ಹೋರಾಟಕ್ಕೆ ಕೈ ಜೋಡಿಸುವಂತೆ ಮಾಡಿದ್ದು ಮಹಿಳೆಯರೇ ರಚಿಸಿದ ಸೃಜನಾತ್ಮಕ ಬರಹಗಳು. ಸ್ವಗತವಾಗಿದ್ದ ಮನೋಭಾವಗಳನ್ನು ಸಮಾಜದೆದುರಿಗೆ ತೆರೆದಿಟ್ಟಾಗ, ತನ್ನಂತೆಯೆ ಯೋಚಿಸುವ ಮನಸ್ಸುಗಳ ಪ್ರತಿಸ್ಪಂದನೆಯು ಬರಹಕ್ಕೆ ಮತ್ತಷ್ಟು ಇಂಬು ನೀಡಿತು. ನಾನೇಕೆ ಹೀಗೆ ? ನನ್ನ ಇರವು ಹೀಗೇಕೆ ? ಎಂಬ ಯೋಚನಾ ಲಹರಿಯು ಮುಂದೆ ಹೆದ್ದೊರೆಯಾಗಿ ಹರಿದು ಅಲ್ಲೊಂದು ಇಲ್ಲೊಂದು ಎಲೆಮರೆಯ ಕಾಯಾಗಿ ಕಾಣಬರುತ್ತಿದ್ದ ಸಾಹಿತ್ಯಾಭಿವ್ಯಕ್ತಿಯು ಸಮಾಜದ ಮುನ್ನೆಲೆಗೆ ಬಂದು ಸ್ತ್ರೀವಾದಿ ಸಾಹಿತ್ಯ, ಮಹಿಳಾ ಸಾಹಿತ್ಯ ಎಂಬ ವಿಸ್ತೃತ ಮನೋಭೂಮಿಕೆಯನ್ನು ಪಡೆಯಿತು.

ಅಡುಗೆಮನೆಯ ಸಣ್ಣ ಬೆಳಕಿನ ಕಿಂಡಿಯಿಂದಲೇ ಜಗತ್ತನ್ನು ಊಹಿಸಿ ಕೊಳ್ಳುತ್ತಿದ್ದ ಕಾಲವು ಮುಗಿದು, ಇಂದು ಓಪನ್ ಕಿಚನ್ ವ್ಯವಸ್ಥೆ ಮೂಡಿರುವುದು ಅಡುಗೆಮನೆಯಲ್ಲಾದ ಕ್ರಾಂತಿಯೆಂದೇ ಭಾವಿಸಬೇಕು. ಅಡೆತಡೆಗಳಿಲ್ಲದ ವ್ಯವಸ್ಥೆ ಇದಾಗಿದೆ. ಇದು ಹಾಸ್ಯಾಸ್ಪದವೆನಿಸಿದರೂ ಸತ್ಯವೆಂದು ಎಲ್ಲರೂ ಒಪ್ಪಲೇಬೇಕು. ಬಂಧಿತ ನೆಲೆಯಿಂದಲೇ ಬಂಧಮುಕ್ತತೆಯನ್ನು ಕುರಿತು ಆಲೋಚಿಸುವ ಪರಿ ಗಮನಾರ್ಹವಾದುದು. ಇದನ್ನೆಲ್ಲಾ ಯೋಚಿಸುವಾಗ ಸಿದ್ದಗಂಗಮ್ಮನವರು ಉಲ್ಲೇಖಿಸುವ ವೈದೇಹಿಯವರ 'ತಿಳಿಸಾರು', ಲಲಿತ ಸಿದ್ದಬಸವಯ್ಯನವರ 'ಹಿದಕವರೆ', ಚಂದ್ರಮತಿ ಸೋಂದರ 'ಕೋಸಂಬರಿ', ಪ್ರತಿಭ ನಂದಕುಮಾರರ 'ಅಡುಗೆ ಮಾಡುತ್ತೇನೆ-೨' ಮೊದಲಾದ ಕವನಗಳೊಂದಿಗೆ ಸ್ಥಾನ ಗಿಟ್ಟಿಸುವ ಡಾ॥ ಸಬಿಹಾ ಭೂಮಿಗೌಡರ 'ನನ್ನ ಪ್ರೀತಿಯ ಕುಕ್ಕರ್' ತುಸು ಭಿನ್ನವಾದರೂ ಸರಳತೆಯಲ್ಲಿಯೇ ಶ್ರೀಮಂತಿಕೆಯ ಗುಣವನ್ನು ಹಿಡಿದಿಡುವ ರಚನೆಯಾಗಿದೆ.

ಸಾಮಾನ್ಯವಾದ ಕುಕ್ಕರ್ ಅಸಾಮಾನ್ಯವಾಗಿ ವರ್ತಿಸಿ ಭಯ ಹುಟ್ಟಿಸುವ ಮತ್ತು ಬದಲಾವಣೆಯ ಆಶಯವನ್ನು ಬಯಸುವ ಪರಿಯನ್ನು ಕವಯತ್ರಿ ಸಹಜವಾಗಿಯೇ ಕಟ್ಟಿಕೊಟ್ಟಿದ್ದಾರೆ. ಸರಳ ಭಾಷೆಯ ಮೂಲಕ ಬದುಕಿನ ಮೀಮಾಂಸೆಯನ್ನು 'ನನ್ನ ಪ್ರೀತಿಯ ಕುಕ್ಕರ್' ಹೊರಹೊಮ್ಮಿಸುತ್ತದೆ. ಅಡುಗೆಮನೆಗೆ ಮತ್ತದರೊಳಗಣ ವಸ್ತುಗಳಿಗೆ ಹೊಸ ಶಬ್ದಾರ್ಥವನ್ನು, ನಾವೀನ್ಯತೆಯನ್ನು ಈ ಮೂಲಕ ನೀಡಿದ್ದಾರೆ. ಅನುಭವಗಳನ್ನು ಅನುಭವಿಸಿದವರಿಂದಲೇ ಕೇಳಿದಾಗ ಮಾತ್ರ ನೈಜತೆಯ ಮೌಲ್ಯವು ದೊರಕುತ್ತದೆಂಬುದಕ್ಕೆ ಡಾ॥ ಸಬಿಹಾ ಭೂಮಿಗೌಡರ ಕವನ ಅತ್ಯುತ್ತಮ ಉದಾಹರಣೆಯಾಗಿದೆ.

ಊದುಕೊಳವೆಯನ್ನು ಹಿಡಿದ ಕೈ, ಹೊಗೆಗೆ ಕಪ್ಪು ಹತ್ತಿದ ಕಣ್ಣನ್ನು ಉಜ್ಜುತ್ತಾ ಕೊತಕೊತ ಕುದಿಯುವ ಅನ್ನದ ಪಾತ್ರೆಯೊಳಗಿನ ಅಕ್ಕಿಯನ್ನು ಬೆಂದಿದೆಯೋ ಇಲ್ಲವೋ ಎಂದು ಪರೀಕ್ಷಿಸುತ್ತಾ, ಗಂಜಿಯನ್ನು ಬಸಿದಂತೆ ಜೀವನವನ್ನು ಬಸಿದ ಹೆಣ್ಣಿಗೆ ಅಡುಗೆಮನೆಯ ಕಾರ್ಯಕ್ಕೆ ನೆರವೋ ವರವೋ ಎಂಬಂತೆ ದೊರೆತದ್ದು ಕುಕ್ಕರ್. ಗಂಟೆಗಟ್ಟಲೆ ಹಿಡಿಯುವ ಕೆಲಸವನ್ನು ಮತ್ತು ಯಥೇಚ್ಛ ಶ್ರಮ ವ್ಯಯವನ್ನು ಕಡಿಮೆಗೊಳಿಸಿದ ಪರಿಯೇ ಕವಯತ್ರಿಗೆ ಕುಕ್ಕರ್ ಮೇಲೆ ವ್ಯಾಮೋಹ ಮೂಡಲು ಕಾರಣವಾಗಿರಬೇಕು. 'ತಳತಳ ತೊಳೆದಿಟ್ಟರೆ ಜಗಜಗ ಬೆಳಗುತ್ತಿತ್ತು' ಎಂದು ಪ್ರಾರಂಭವಾಗುವ ಕವನವು ಭೇದಭಾವವೆಣಿಸದೆ ತನ್ನೊಡಲಲ್ಲಿ ಎಲ್ಲವನ್ನೂ ಅಡಗಿಸಿಕೊಂಡು ಸಮಾನತೆಯನ್ನು ಮೆರೆದದ್ದು ಎಂಬ ಹೆಮ್ಮೆಯ ಭಾವ ಕವಯತ್ರಿಗೆ. 'ಜಗ-ಜಗ' ಎಂಬುದು ಅನುಕರಣಾವ್ಯಯವಾದರೂ ಅದರೊಳಗಿನ ಜಗತ್ತು ಎಂಬ ಭಾವ ಮುಖ್ಯವಾದದ್ದು. ಜಗತ್ತು ಎಂದಾಗ ಅಡುಗೆಮನೆಯ ಜಗತ್ತೋ ? ಹೆಣ್ಣಿನ ಅಂತರಾಳದ ಜಗತ್ತೋ ? ಅದಿರಲಿ. ಒಟ್ಟು ಬೆಳಗಿಸಿದ್ದು ಮಾತ್ರ ಕುಕ್ಕರ್. ಬೆಳಗಿಸುವಿಕೆಯೆಂಬುದು ಬದಲಾವಣೆಯ/ ಪರಿವರ್ತನೆಯ ಸಂಕೇತವಾಗಿದೆ ಎಂಬುದೇ ಇಲ್ಲಿನ ಸಾರ.

*ಯಾವುದಕ್ಕೂ ಒಲ್ಲೆನೆನ್ನದೆ*
*ಬೇಳೆ ತರಕಾರಿ ಕಡುಬು ಅನ್ನ ಎಲ್ಲವನೂ*
*ಹೇಳಿದಷ್ಟೇ ಹದವಾಗಿ ಹಿತವಾಗಿ*
*ವೇಗವಾಗಿ ಬೇಯಿಸಿ*
*ಎಂದಿಗೂ ಎಷ್ಟೊತ್ತಿಗೂ ಸೇವೆಗೆ*
*ಹಿಂಜರಿಯದೆ ನಿಲ್ಲುತ್ತಿತ್ತು.*

(ನೀನುಂಟು ನಿನ್ನ ರೆಕ್ಕೆಗಳುಂಟು, ನನ್ನ ಪ್ರೀತಿಯ ಕುಕ್ಕರ್, ೮೭)

- ಎನ್ನುವಲ್ಲಿ ನೆರವಾದ ಕುಕ್ಕರ್ ಬಗೆಗೆ ಸಾರ್ಥಕತೆಯ ಭಾವವಿದೆ. ಹದವಾಗಿ ಮತ್ತು ಹಿತವಾಗಿ ಎಂಬಲ್ಲಿ ಸಮಾಜದಲ್ಲಿನ ಅಸಮಾನತೆಯ ನೆಲೆಯನ್ನು ಸೂಕ್ಷ್ಮವಾಗಿ ಗ್ರಹಿಸಿದಂತಿದೆ. ಭೇದಭಾವವಿಲ್ಲದೆ ಬೇಯಿಸುವ ಭಾವ ಕುಕ್ಕರ್‌ನದ್ದಾದರೆ, ಭೇದಭಾವದ ಮೂಲಕ ಬೇಯಿಸುತ್ತಿರುವ ಸಮಾಜದ ವಾಸ್ತವವನ್ನು ಶಬ್ದಚಿತ್ರದ ಮೂಲಕ ಕವಿತೆ ಕಟ್ಟಿಕೊಡುತ್ತದೆ. ಸಾಮಾಜಿಕ ಅಸಮಾನತೆಯ ಎಳೆಗಳನ್ನು ಹಿಡಿದೆಳೆಯುವ ಪ್ರಯತ್ನವಿದಾಗಿದೆ. ಹಿಂಜರಿಯದ ಮನೋಭಾವದ ಅವಶ್ಯಕತೆಯನ್ನು ಈ ಮೂಲಕ ಎತ್ತಿ ಹಿಡಿದಂತಿದೆ. ಸೇವೆಗೈಯ್ಯಲು ಹಿಂಜರಿಯದ ಮನಸ್ಸು ಇಂದು ತನ್ನ ವಿಮೋಚನೆಗಾಗಿ ಹಿಂಜರಿಯದೆ ಮುಂದಡಿಯಿಡಬೇಕಾದ ಅವಶ್ಯಕತೆಯಿದೆ ಎಂಬ ಒಳಾರ್ಥವನ್ನು ಕಂಡುಕೊಳ್ಳಬೇಕಾಗಿದೆ.

ಅಡುಗೆಮನೆಯನ್ನು ಸೇರಿ ಹತ್ತು ವರ್ಷಗಳೇ ಕಳೆದರೂ ಕೈಕೊಟ್ಟಿದ್ದಿಲ್ಲ. ಆದರೂ ಆಗೊಮ್ಮೆ ಈಗೊಮ್ಮೆ "ಸವೆದ ರಬ್ಬರಿನ ಬದಲಾವಣೆಯನ್ನು ಮಾತ್ರ ಬಯಸಿದೆ" ಎನ್ನುತ್ತಾರೆ. ಪರಂಪರಾನುಗತವಾಗಿ ಸವೆದು ಕಳೆದುಹೋಗುತ್ತಿದ್ದರೂ

**ಪ್ರವೀಣ್ ಕುಮಾರ್ ಟಿ. ಡಿ.**

ಇಂದಿಗೂ ಸಮಾಜವು ಏಕೆ ಬದಲಾವಣೆಯನ್ನು ಬಯಸುತ್ತಿಲ್ಲವೆಂಬ ಶೋಚನೀಯ ಸಂಗತಿಯು ಕವಯತ್ರಿಯ ಮನಸ್ಸನ್ನು ಬಾಧಿಸಿದಂತಿದೆ. ಚಲನಶೀಲತೆಯನ್ನು ಕಳೆದುಕೊಂಡು ನಿಂತ ನೀರಂತೆ 'ಗಬ್ಬುನಾತ' ಬೀರುತ್ತಿರುವ ಸಮಾಜದ ಕಟುವಾಸ್ತವ ಕಣ್ಣೆದುರಿಗೆ ಗೋಚರವಾಗುತ್ತಿದೆ. ಇದರ ವಿರುದ್ಧವೇ ಕವಯತ್ರಿಯ ಹೋರಾಟ. ಇಪ್ಪತ್ತೊಂದನೇ ಶತಮಾನಕ್ಕೆ ಬಂದು ಮಹಿಳೆಯರ ಸ್ಥಾನಮಾನದಲ್ಲಿ ಬದಲಾವಣೆಗಳಾಗಿವೆ ಎಂದರೂ ಎಷ್ಟರ ಪ್ರಮಾಣದಲ್ಲಿ? ಎಂತಹವರಲ್ಲಿ? ಎಂಬ ಪ್ರಶ್ನೆಗಳನ್ನು ಕೇಳಿಕೊಳ್ಳಬೇಕಾಗಿದೆ. ಒಂದಲ್ಲಾ ಒಂದು ದಿನ ಅಂದುಕೊಂಡದ್ದನ್ನು ಸಾಧಿಸಿ ಸಂಪೂರ್ಣ ಬದಲಾವಣೆಯನ್ನು ಸಾಧಿಸುತ್ತೇವೆ ಎಂಬ ಮನೋತುಡಿತಗಳು ಇಂಥ ಕವಿತೆಗಳ ಮೂಲಕ ಅಭಿವ್ಯಕ್ತವಾಗುತ್ತಿವೆ. ಬದಲಾವಣೆಯ ಕುರಿತಾದ ಭಾವವು ಬಾಹ್ಯಪ್ರೇರಿತವಾದುದಲ್ಲ, ಆಂತರಿಕವಾದುದು ಎಂಬುದನ್ನು ಕವನದ ಮುಂದಿನ ಸಾಲುಗಳು ಸ್ಪಷ್ಟಪಡಿಸುತ್ತವೆ:

*ಇಂಥ ಮೌನ ಗೌರಿ ಮೃದುಭಾಷಿ*
*ಮೆಲುನಗೆಯ ಸರಳ ಸಜ್ಜನ ಸಖಿಯ*
*ಒಳಗಿನ ಒತ್ತಡ ಅರಿವಾದದ್ದೇ ಮೊನ್ನೆ*

*ಅಂದೂ ಎಂದಿನಂತಿದ್ದ ಆಕೆ*
*ತಲೆ ಮೇಲಿನ ಗೂಟವ ಕಿತ್ತೊಗೆದು*
*ಅರ್ಭಟಿಸಿದ ಪರಿಗೆ ನಡುಗಿಹೋದ ಮನೆಮಂದಿ*
*ಅವಳ ಶಾಂತವಾಗಿಸುವ ಪರಿ ಅರಿಯದೆ*
*ಪರಿಪರಿಯಾಗಿ ಪರದಾಡಿ ಕೊನೆಗೂ*
*ಮಾರುದೂರ ಬಿದ್ದಿದ್ದ ಗೂಟವ ಹುಡುಕಿ*
*ಹರಸಾಹಸದಿಂದ ಮತ್ತೆ ಜಡಿದ ವೇಳೆಯಲ್ಲಿ*

(ನೀನುಂಟು ನಿನ್ನ ರೆಕ್ಕೆಗಳುಂಟು, ನನ್ನ ಪ್ರೀತಿಯ ಕುಕ್ಕರ್, ೮೭)

– ಎಂಬಲ್ಲಿ ಒಳಮನದಲ್ಲಿ ಅವಿತಿಟ್ಟ ಭಾವಗಳಿಗೆ ಒತ್ತಡ ಹೇರಿದಷ್ಟು ಚಿಮ್ಮುವ ರಭಸ ದುಪ್ಪಟ್ಟಾಗುತ್ತದೆ. ಅಂತೆಯೇ ಕ್ಷಮಯಾ ಧರಿತ್ರಿಯೆಂಬ ಪಟ್ಟವ ಕಟ್ಟಿ ಶತಶತಮಾನಗಳಿಂದ ಹೇರಲಾಗಿದ್ದ ಸಾಂಪ್ರದಾಯಿಕ ಕಟ್ಟಳೆಯ ಭಾರವನ್ನು ಸಂಚಯಿಸಿಟ್ಟಿದ್ದ ತನ್ನೆಲ್ಲ ಶಕ್ತಿಯನ್ನು ಬಳಸಿ ಛಿದ್ರಗೊಳಿಸಿ ಹೊರಜಗತ್ತನ್ನು ತನ್ನದೇ ಕಣ್ಣಲ್ಲಿ ಚಿತ್ರಿಸಲು ಮುಂದಾದಳು. ತುಳಿಯುತ್ತಿದ್ದ ಕಾಲುಗಳನ್ನೆಳೆದು ಎದ್ದು ನಿಂತ ದಿಟ್ಟ ಹೋರಾಟದ ಹೆಣ್ಣುಗಳ ಮನಸ್ಥಿತಿಯನ್ನು ಈ ಸಾಲುಗಳು ಹೋಲುತ್ತವೆ. ಆದಿಶಕ್ತಿ, ಸಹೃದಯಿ ಎಂದು ಹೇಳಿ ಸಮಾಧಾನಿಸುತ್ತಿದ್ದ ಸಮಾಜದ ಕ್ರೌರ್ಯವನ್ನು ಸಹಿಸದೆ ಕಾಳಿಯಾಗಿ ಶೋಷಕರಿಗೆದುರಾಗಿ ನಿಂತ ಹೆಣ್ತನವಿದಾಗಿದೆ.

ಹೀಗೆ ತನ್ನ ರುದ್ರನರ್ತನದ ಮೂಲಕ ಪ್ರೀತಿಯ ಕುಕ್ಕರ್ ಕವಯತ್ರಿಯಲ್ಲಿ ಭಯಮಿಶ್ರಿತ ಆಶ್ಚರ್ಯವನ್ನೂ ಮೂಡಿಸಿದೆ. ಅದುವರೆವಿಗೂ ಕೇವಲ ಪರಿಕರವೆಂದು ಭಾವಿಸಿದ್ದ ಕುಕ್ಕರ್ 'ಏರಿಬಿಡುವುದೇ ಗುರುಪಟ್ಟವ' ಎನ್ನುವಲ್ಲಿ ಹೆಣ್ಣಿನಲ್ಲಿ ಅಂತರ್ಗತವಾಗಿರುವ ಶಕ್ತಿಯನ್ನು ಅರಿವಿಗೆ ತರುವ ಪ್ರಯತ್ನವಿದಾಗಿದೆ. ಏಕೆಂದರೆ ಹೆಣ್ಣು ಅಬಲೆ ಎನ್ನುತ್ತಾ ನಿಶ್ಚಲಳನ್ನಾಗಿಸಿದ್ದ ಕಾಲದಲ್ಲಿ ಆಂತರ್ಯದಲ್ಲಿ ಅಡಗಿರುವ ಸುಪ್ತ ಚೇತನವನ್ನು ಜಾಗೃತಗೊಳಿಸಬೇಕಾದ ಅವಶ್ಯಕತೆಯನ್ನು ಒತ್ತಿ ಹೇಳಿದ್ದಾರೆ. ಇಲ್ಲಿ ಒಳಮನಸ್ಸೇ ಅರಿವಿನ ಗುರುವಾಗಿದೆ. ಶಕ್ತಿಯಿದ್ದು ನಿಶ್ಶಕ್ತಳಾಗಿದ್ದ ಅಬಲೆಯನ್ನು ಸಬಲಳನ್ನಾಗಿಸುವ ಪರಿಯನ್ನು ಕವಯತ್ರಿ ಮೇಲಿನ ಸಾಲುಗಳಲ್ಲಿ ಹಿಡಿದಿಟ್ಟಿದ್ದಾರೆ. ಹೀಗೆ ಹೋರಾಟದ ನೆಲೆಯಲ್ಲಿ ಹೊರಹೊಮ್ಮಿದ ಜ್ವಾಲೆಯು ಸಮಾಜಿಕರಲ್ಲಿ ಎಂದೆಂದೂ ಭಯವನ್ನುಂಟುಮಾಡುವಲ್ಲಿ ಯಶಸ್ವಿಯಾಗಿದೆ. ಮತ್ತೆಂದಾದರೂ ನಮ್ಮನ್ನು ತುಳಿದೀರ ಜೋಕೆ...! ಎನ್ನುವ ಸಂದೇಶವನ್ನು ಸಾರಿದಂತಿದೆ. ಇದೇ ಅಂಶವನ್ನು,

*ಅವಳುಗುಳಿದ ಲಾವಾ ಮೂಡಿಸಿತ್ತು*
*ಅಟ್ಟದಲ್ಲೊಂದು ಮುದ್ರೆಯುಂಗುರವ*
*ಸದಾ ನೆನಪಿಡಬೇಕಾದ ಪಾಠದಂತೆ*

– ಎಂಬ ಸಾಲುಗಳು ಬಿತ್ತರಿಸುತ್ತವೆ. ಅಡುಗೆಯನ್ನಷ್ಟೇ ಉಣಬಡಿಸುವುದಿಲ್ಲ. ಅಗತ್ಯ ಬಿದ್ದಾಗ ಸಮಾಜ ಮತ್ತು ಸಮಾಜಿಕರ ಅಂಕುಡೊಂಕನ್ನು ರಿಪೇರಿ ಮಾಡುವ ಸಾಮರ್ಥ್ಯ ಹೆಣ್ಣಿಗಿದೆ. ಹಾಗಾಗಿ ಎಚ್ಚರಿಕೆಯೆಂಬುದು ಮನದಲ್ಲಿರಲಿ ಎಂದು ಕವಯತ್ರಿ ಹೇಳುತ್ತಾರೆ. ಹಿಂದಿನಂತಿಲ್ಲ ಇಂದು. ಬದಲಾವಣೆಗೆ ಕಣ್ಮನ ತೆರೆದ ಹೆಣ್ಮನಗಳು ತಮ್ಮೆಲ್ಲ ಹಕ್ಕುಗಳು ಮತ್ತು ಸ್ವಾತಂತ್ರ್ಯಕ್ಕಾಗಿ ಸ್ವತಂತ್ರವಾಗಿ ಮತ್ತು ಸಂಘಟಿತರಾಗಿ ಹೋರಾಡಲು ಸಿದ್ಧರಾಗಿದ್ದಾರೆ. ಇದು ಬದಲಾವಣೆಯ ಸೂಚಕವಾಗಿದೆ. ತುಳಿತಕ್ಕೆ ಒಳಗಾಗದೆ ತುಳಿಯಲು ಸೆಟೆದು ನಿಂತಾಗ ಪರಿಸ್ಥಿತಿಯು ಹೇಗಾಗುತ್ತದೆಂದರೆ;

*ನಿನ್ನೆವರೆಗೆ ಕಾಲಕಸ ಸದರದ ನೆಲೆ*
*ದುಡಿತದ ಆಳಾಗಿದ್ದ ಆಕೆಯ*
*ಇಂದು ಮಾತನಾಡಿಸಲು ಅಳುಕು*
*ಮುಟ್ಟಲು ಎದೆ ಡವಡವ*
*ಹಿಂದಿನಂತೆ ಉಪಯೋಗಿಸಲು ಭಯ!*

– ಎನ್ನುವ ಸಾಲುಗಳು ಸಾಮಾಜಿಕ ಸ್ಥಾನದಲ್ಲಾದ ಪರಿವರ್ತನೆಯನ್ನು ಸೂಚಿಸುತ್ತವೆ. ಮಹಿಳೆಗೆ ಮಾತ್ರ ಸೀಮಿತವಾಗಿದ್ದ ಕ್ಷೇತ್ರಗಳನ್ನು ಮೀರಿ ಬೆಳೆದು ಕೈಲಾಗದ್ದು ಏನೂ ಇಲ್ಲ, ಎಲ್ಲವನ್ನು ಹಿಡಿಮುಷ್ಟಿಯಲ್ಲಿಯೇ ಹಿಡಿದು ಪುಡಿಗುಟ್ಟಬಲ್ಲೆನೆಂಬ ದೃಢ ಮನೋಭಾವ ಹೆಣ್ಣಲ್ಲಿ ಮೂಡಿದೆ. ಪುರುಷ ಪ್ರಧಾನ ಸಮಾಜವು ತನ್ನ ಕಲ್ಪನೆಗೂ ಮೀರಿದ ರೀತಿಯಲ್ಲಿ ಬೆಳೆದ ಹೆಣ್ತನದ ವಿರಾಟ್ ರೂಪವನ್ನು ಸೋಜಿಗದಿಂದ ನೋಡುವಂತಾಗಿದೆ.

ಪ್ರೀತಿಯ ಕುಕ್ಕರನ್ನು ಮುಟ್ಟಲು ಭಯ ಎಂದು ಹೇಳುವಲ್ಲಿ ಸಮಾಜದಲ್ಲಿನ ಯಜಮಾನಿಕೆಯ ನೆಲೆಗಳು ಇಂದು ಭಯಗ್ರಸ್ತ ಸ್ಥಿತಿಯಲ್ಲಿವೆ ಎಂಬುದನ್ನು ಸೂಚಿಸುತ್ತದೆ ಅಂದ ಮಾತ್ರಕ್ಕೆ ಸಮಾಜ ಪೂರ್ಣ ಪ್ರಮಾಣದಲ್ಲಿ ಬದಲಾವಣೆಯಾಗಿದೆ ಎಂದಲ್ಲ. ಪ್ರಸ್ತುತ ಶತಮಾನದಲ್ಲೂ ಜಾಗೃತಗೊಂಡ ಹೋರಾಟದ ಮನಗಳು ಹೆಚ್ಚಿದ್ದರೂ, ವಿಸ್ತೃತತೆಯ ಹರಿವನ್ನು ಪಡೆಯದೆ ಇರುವುದೇ ದುರಂತವಾಗಿದೆ. ಆದರೂ ಸಮಾಜದ ಮೂಲೆಯಲ್ಲಿನ ಉಳಿದ ಎಲ್ಲ ಸ್ತ್ರೀ ಸಮಾಜವು ಆಧುನಿಕತೆಗೆ ತನ್ನನ್ನು ತೆರೆದುಕೊಂಡಾಗ ಪೂರ್ಣ ಪ್ರಮಾಣದ ಪರಿವರ್ತನೆ ಸಾಧ್ಯ. ಆದರೆ ಹೆಚ್ಚಿನ ಸಮಯಾಪೇಕ್ಷೆ ಅಗತ್ಯ. ಹೀಗೆ ತನ್ನೊಡಲಲ್ಲೇ ಅದುಮಿಟ್ಟುಕೊಂಡು ಜ್ವಾಲಾಮುಖಿಯನ್ನು ಮುಗಿಲೆತ್ತರಕ್ಕೆ ಹೊರಹೊಮ್ಮಿಸುವುದರ ಮೂಲಕ ಒತ್ತಡದ ಅರಿವು ಮತ್ತು ಬಿಡುಗಡೆಯ ನೆಲೆಯನ್ನು ಸೃಜನಶೀಲ ಬರಹಗಳ ಮೂಲಕ ಸಮಾಜದಲ್ಲಿ ಸಾದರಪಡಿಸಲಾಗುತ್ತಿದೆ. ಇದು ಅವಶ್ಯ ಮತ್ತು ಅಗತ್ಯವೂ ಹೌದು.

ಹೊಡೆದಾಡದೆ ಲೇಖನಿಯನ್ನೇ ಪರಿವರ್ತನೆಯ ರೂವಾರಿಯನ್ನಾಗಿಸಿ, ಹರಿತವಾದ ಖಡ್ಗವನ್ನಾಗಿಸಿ, ತಮ್ಮದೇ ಆದ ಸರಳ ಶೈಲಿಯಲ್ಲಿ ಬರೆಯುವುದರ ಮೂಲಕ ನಿಶ್ಶಬ್ದದೊಳಗಣ ಶಬ್ದದಂತೆ ಅರಿವಿನ ಅಲೆಯನ್ನು ಮಹಿಳಾ ಸಾಹಿತ್ಯವು ಹರಿಯಬಿಡುತ್ತಿದೆ. ಕೇವಲ ಕುಕ್ಕರ್ ಒಳಗೆ ಇಡೀ ಸಾಮಾಜಿಕ ವ್ಯವಸ್ಥೆಯನ್ನು ತುಂಬಿ ಅದರೊಳಗೆ ಬದಲಾವಣೆಯ ಆಶಯವನ್ನು ರೂಪಿಸಿ, ಬದಲಾವಣೆಗಾಗಿ ಹೋರಾಟದ ದಾರಿಗಳನ್ನು ತೋರಿದ 'ನನ್ನ ಪ್ರೀತಿಯ ಕುಕ್ಕರ್'ನಂತಹ ಪ್ರಗತಿಪರ ಕವನಗಳು ನೊಂದ ಮನಗಳಿಗೆ ಚೈತನ್ಯ ತುಂಬುವ ಕೆಲಸವನ್ನು ಮಾಡುತ್ತಿವೆಯಲ್ಲದೆ ಪ್ರಗತಿಪರ ಕೆಲಸಕ್ಕೆ ತೊಡಗುವಂತೆ ಪ್ರೇರೇಪಿಸುತ್ತಿವೆ. ಹೀಗೆ ಸಮಾಜದಲ್ಲಿ ರಕ್ತಪಾತ, ಅಶಾಂತಿಗೆ ಎಡೆಗೊಡದೆ ಅರಿವಿನ ನೆಲೆಯಲ್ಲಿ ಹೋರಾಡುತ್ತಾ ಬದಲಾವಣೆಯನ್ನು ತರಬಯಸುವ ಸಾರ್ವಕಾಲಿಕ ಕವಿತೆಗಳ ಸಾಲಿನಲ್ಲಿ 'ನನ್ನ ಪ್ರೀತಿಯ ಕುಕ್ಕರ್' ಸಹ ಒಂದು. ಬೆಟ್ಟದಷ್ಟಲ್ಲದಿದ್ದರೂ ಸಾಸಿವೆಯಷ್ಟಾದರೂ ಬದಲಾವಣೆ ಕಂಡಾಗ ಕವಯತ್ರಿಯ ಮನಸ್ಸು ಮತ್ತು ರಚನೆ ಸಾರ್ಥಕ್ಯವನ್ನು ಹೊಂದುತ್ತವೆ. ಹಾಗಾಗಿ ಸಮಕಾಲೀನ ಸಮಾಜದ ಯಾವ ನೆಲೆಯಲ್ಲಿ ನಿಂತು ನೋಡಿದರೂ ಸಬಿಹಾ ಭೂಮಿಗೌಡರ ಈ ಕವನ ಪ್ರಸ್ತುತವೆನಿಸುತ್ತದೆ.

ತಮ್ಮಿಂದೇನೂ ಆಗದು ಎಂದು ತಲೆಯ ಮೇಲೆ ಕೈ ಹೊತ್ತ, ಮಂಡಿಗೆ ತಲೆಯಾನಿಸಿ ಕುಳಿತ ಎಷ್ಟೋ ನೊಂದ ಮನಗಳಿಗೆ ಈ ಕವಿತೆ ಶಕ್ತಿಯ ಧಾರೆಯನ್ನು ಎರೆದಿದೆ. ಅಲ್ಲದೆ ಚಳುವಳಿಗಳು ಮತ್ತು ಹೋರಾಟಗಳಲ್ಲಿ ಪಾಲ್ಗೊಳ್ಳಲು ಕಾಣದ ಕೈಗಳಂತೆ ಕೆಲಸಮಾಡಿದೆ. ಕೇವಲ ಸ್ತ್ರೀ ಸಮಾಜವನ್ನಷ್ಟೇ ಅಲ್ಲ ಪುರುಷಪ್ರಧಾನವಾದ ಯಾಜಮಾನ್ಯದ ಮನಗಳನ್ನು ಪರಿವರ್ತಿಸಿದೆ ಎಂದರೆ ತಪ್ಪಲ್ಲ. ಹೀಗೆ ಶೋಷಿತರೊಂದಿಗೆ ಶೋಷಕ ಮನಗಳನ್ನು ಬದಲಾಯಿಸುವ ಗುಣ ಹೋರಾಟದ ಆಶಯ ಹೊತ್ತ ಇಂತಹ ಕವನಗಳಿಗಿದೆ. ಸಾಹಿತಿಗಳು ಸಮಕಾಲೀನರಾಗುವುದು ಎಂದರೆ ಹೀಗೆ, ಯಾವುದೋ ಕಾಲದಲ್ಲಿ ರಚಿತವಾದ ಬರಹ ಮತ್ತಾವುದೋ ಕಾಲದ ಅಗತ್ಯವನ್ನು ಪೂರೈಸಿದಾಗ. ಓದಿದಾಗಲೆಲ್ಲ ಪರಿಸ್ಥಿತಿಗೆ ಸಮಕಾಲೀನಗೊಳ್ಳುವ ಕವನ ಕೊಟ್ಟ ಡಾ॥ ಸಬಿಹಾ ಭೂಮಿಗೌಡರಿಗೆ ಹ್ಯಾಟ್ಸ್ ಆಫ್.

**ಪ್ರವೀಣ್ ಕುಮಾರ್ ಟಿ. ಡಿ.**
ಸಂಶೋಧನ ವಿದ್ಯಾರ್ಥಿ, ಕನ್ನಡ ಅಧ್ಯಯನ ಸಂಸ್ಥೆ
ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳಗಂಗೋತ್ರಿ – ೫೭೪ ೧೯೯

ತಿಳಿವು

# ಮಾನವೀಯ ಮೌಲ್ಯಗಳು

**ಸಾ**ಮಾನ್ಯನೊಬ್ಬ ಅಸಾಮಾನ್ಯ ವ್ಯಕ್ತಿಯಾಗುವುದು ವಂಶಪಾರಂಪರ್ಯದ ಮೂಲಕ ಅಥವಾ ರಾಜಕೀಯ ಹಿನ್ನೆಲೆಯಲ್ಲಿ ಮಾತ್ರ ಎಂಬ ನಂಬಿಕೆ ಇದೆ. ಅಧಿಕಾರ ಮತ್ತು ಸಂಪತ್ತು ಅರಮನೆಗೂ ಬೇಕು. ಗುರುಮನೆಗೂ ಬೇಕು. ಇವು ಜನಸಾಮಾನ್ಯರ ಬೆವರಿನ ಫಲ. ಇವುಗಳ ಫಲಾನುಭವಿಗಳೂ ಜನಸಾಮಾನ್ಯರೆ ಎನ್ನುವ ಪರಿಜ್ಞಾನವಿಲ್ಲದವರ ಕೈಯಲ್ಲಿ ಅಧಿಕಾರ ಸಿಕ್ಕರೆ ಅವು ಅನಾಥ ಪ್ರಜ್ಞೆಯನ್ನು ಅನುಭವಿಸುತ್ತವೆ. ಈ ಅರಮನೆ ಪರೋಪಜೀವಿಗಳು ಅನುಭವಿಸುವಂಥದು ಅವರ ಸ್ವಯಾರ್ಜಿತವಲ್ಲ. ಶ್ರಮದ ಫಲವೂ ಅಲ್ಲ. ಪ್ರಜೆಗಳ ಬೆವರಿನ ಶ್ರಮದ ಫಲ. ಇವರ ಅಧಿಕಾರದ, ಅಹಂನ ಮೂಲ ಅಧಿಕಾರದ ಪ್ರತಿಷ್ಠೆಗೆ, ಅರಮನೆ, ಬಲಿಯಾಗುವ ಜನಸಾಮಾನ್ಯರ ಶ್ರಮದ ಸದ್ಬಳಕೆಯಾಗ ಬೇಕು. ಅಧಿಕಾರದಲ್ಲಿರುವ ವ್ಯಕ್ತಿಯನ್ನು ಇಂದ್ರ, ಚಂದ್ರ ಎಂದು ಹೊಗಳಿ ಬೊಕ್ಕಸಕ್ಕೆ ಕನ್ನ ಹಾಕುವ ಪುರೋಹಿತಶಾಹಿಯನ್ನು, ಹೊಗಳುಭಟ್ಟರನ್ನು ತಿರಸ್ಕರಿಸುವಂತೆ ಕರೆ ನೀಡುತ್ತಾರೆ ಶರಣರು. ಸಾಮಾಜಿಕ ರಾಜಕೀಯ ಮತ್ತು ಧಾರ್ಮಿಕವಾಗಿ ದಬ್ಬಾಳಿಕೆ, ತುಳಿತಕ್ಕೆ ಒಳಗಾದ ಜನಸಾಮಾನ್ಯರ ಬದುಕಿನ ಸಂಕಟ, ಆಕ್ರೋಶ, ಅಸಹಾಯಕತೆಗಳು ಅಧಿಕಾರಕೇಂದ್ರದಲ್ಲಿದ್ದು ಬಸವಣ್ಣನವರ ಮನ ಕಲಕಿದ್ದು ಇತಿಹಾಸ. ಶರಣ ಚಳುವಳಿ ಅಂದಿನ ಜನಸಮುದಾಯದ ಚೈತನ್ಯಕ್ಕೆ ಹೊಸ ಆಯಾಮ ನೀಡಿತು. ಅಕ್ಷರವಂಚಿತ ಶ್ರಮಜೀವಿಗಳಿಗೆ ಹೊಸ ಅರಿವಿನ ಜೊತೆಗೆ ಅಕ್ಷರ ಜ್ಞಾನವನ್ನೂ ನೀಡುವ ಮೂಲಕ ಅವರ ಕಾಯಕಗಳಿಗೂ ಸಮಾನ ಸ್ಥಾನಮಾನ ದೊರಕಿಸಿತು. ಅಜ್ಞಾತ ಶ್ರಮಜೀವಿಗಳು ಅನುಭವ ಮಂಟಪದ ಚರ್ಚೆಗಳಲ್ಲಿ ಭಾಗವಹಿಸುವ ಅವಕಾಶ ಕಲ್ಪಿಸಿದರು. ಶರಣ ಚಳುವಳಿ ಬಹುಮುಖೀ ಆಯಾಮವನ್ನು ಕಂಡುಕೊಂಡಿತು. ನವಸಾಕ್ಷರರು ತಮ್ಮ ಅನುಭವಗಳನ್ನು ವಚನಗಳ ಮೂಲಕ ಅಭಿವ್ಯಕ್ತಿಸಲು ಸಾಧ್ಯವಾಯಿತು. ವಚನಗಳ ರಚನಾ ವಿನ್ಯಾಸವೇ ವಿಶಿಷ್ಟವಾದದ್ದು. ವಚನ ಸಾಹಿತ್ಯ ಕಾವ್ಯವೂ ಅಲ್ಲ, ಕಥಾನಕವೂ ಅಲ್ಲ, ಆತ್ಮಚರಿತ್ರೆಯೂ ಅಲ್ಲ. ಶರಣರು ಕಥೆಗಳನ್ನು ಪುರಾಣಗಳನ್ನು ಅಲ್ಲಗಳೆದರು. ತಮ್ಮ ಮನದ ಭಾವನೆಗಳನ್ನು ವಾಸ್ತವ ಬದುಕಿನ ಅನುಭವಗಳ ಹಿನ್ನೆಲೆಯಲ್ಲಿ ಪರಿಣಾಮಕಾರಿಯಾಗಿ ಅಭಿವ್ಯಕ್ತಿಸುವ ಮಾರ್ಗ ಕಂಡುಕೊಂಡರು.

ವಚನ ಸಾಹಿತ್ಯ ಯಾವುದೇ ಯುದ್ಧ, ರಕ್ತಪಾತ ಅಥವಾ ವಿಜಯದ ಸಂಕೇತವಲ್ಲ. ಜನಸಾಮಾನ್ಯರ ಬದುಕನ್ನು ನರಕವಾಗಿಸಿದ್ದ ಮೇಲು ಕೀಳು, ಅಸ್ಪೃಶ್ಯತೆ ವಿರುದ್ಧ ಧಾರ್ಮಿಕ ಸ್ವಾತಂತ್ರ್ಯಕ್ಕಾಗಿ ನಡೆದ ಶಾಂತಿಯುತ ಪ್ರತಿಭಟನೆಯ ಸಂಕೇತವಾಗಿ ಶರಣ ಚಳುವಳಿ ಮೂಡಿಬಂದಿತು. ಶರಣರು ಜಾತಿ ವಿರೋಧಿಗಳೆಂಬ ಇತ್ತೀಚಿನ ಚರ್ಚೆಗಳಲ್ಲಿ ಯಾವುದೇ ಹುರುಳಿಲ್ಲ. ಎಲ್ಲ ಜಾತಿಗಳನ್ನು ಸಮಾನತೆಯ ದೃಷ್ಟಿಯಿಂದ ನೋಡುವಂತೆ ಕಣ್ತೆರೆಸಿದವರು ಬಸವಣ್ಣನವರು. ಹುಟ್ಟಿನಿಂದ ಮೇಲು ಕೀಳು ಎಂದು ಭಾವಿಸುವುದು ಮಾನವೀಯತೆಗೆ ಎಸಗುವ ಘೋರ ಅಪರಾಧ ಎಂದರು. ಎಲ್ಲರೂ ತಮ್ಮ ತಮ್ಮ ಕಾಯಕಗಳನ್ನು ಸತ್ಯ ಶುದ್ಧವಾಗಿ ಸಮಾನ ನೆಲೆಯಲ್ಲಿ ಮಾಡಬೇಕೆಂದರು. ಎಲ್ಲ ಕಾಯಕಗಳಿಗೂ ಶ್ರಮಜೀವಿ ಗಳಿಗೂ ಗೌರವದ ಸ್ಥಾನ ದೊರಕಿಸುವ ಪ್ರಾಮಾಣಿಕ ಪ್ರಯತ್ನ ಮಾಡಿದರು. ಶರಣರು ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ ಎಂದರೂ, ಸ್ಥಾವರ ದೇವಾಲಯ ಗಳನ್ನು ನಾಶಮಾಡಲಿಲ್ಲ. ಸಾಮಾನ್ಯರಿಗೆ ಪ್ರವೇಶ ವಿಲ್ಲದ ದೇವಾಲಯಗಳನ್ನು, ತಮ್ಮನ್ನು ತಾವೇ ಶ್ರೇಷ್ಠರೆಂದು ಕರೆದುಕೊಳ್ಳುತ್ತಿದ್ದ ಪುರೋಹಿತಶಾಹಿ ಗಳನ್ನು ನಿರಾಕರಿಸಿದರು. ಪರ್ಯಾಯವಾಗಿ ಅವರು ಇಷ್ಟಲಿಂಗಧಾರಣೆ ಮೂಲಕ ತಮ್ಮ ದೇಹವನ್ನೇ ದೇವಾಲಯ ವನ್ನಾಗಿಸುವ ದಾರಿಯನ್ನು ಕಂಡುಕೊಂಡರು.




ಸಂಪತ್ತು, ಆಸ್ತಿ ಒಂದು ಕಡೆ ಸಂಗ್ರಹವಾಗುವುದನ್ನು ಶರಣರು ವಿರೋಧಿಸಿದರು. ಪ್ರಜೆಗಳಿಂದ ಸಂಗ್ರಹವಾದ ಹಣ ಪ್ರಜೆಗಳ ಜೀವನದ ಸುಧಾರಣೆಗೆ ಬಳಕೆಯಾಗ ಬೇಕು; ಪ್ರತಿಯೊಬ್ಬರೂ ಸತ್ಯಶುದ್ಧ ಕಾಯಕ ಮಾಡಬೇಕು; ಶ್ರಮಕ್ಕೆ ತಕ್ಕ ಪ್ರತಿಫಲ ಪ್ರತಿಯೊಬ್ಬರ ಹಕ್ಕು; ಅಪಮಾರ್ಗದಲ್ಲಿ ಸಂಗ್ರಹಿಸಿದ ಹಣ, ಆಸ್ತಿ ಸತ್ಪಾತ್ರಕ್ಕೆ ಸಲ್ಲದು; ಕಾರಣ ಅಂದಂದಿನ ದುಡಿಮೆಯನ್ನು ಅಂದೇ ದಾಸೋಹ ಮಾಡಬೇಕು; ಮಾನವಕೇಂದ್ರಿತ ಸಮಾಜದ ಮನುಷ್ಯನ ಕ್ರೂರ ಬಯಕೆ; ಭೋಗಾಕಾಂಕ್ಷೆ, ದುರಾಸೆಗಳು, ಎಲ್ಲ ಬಗೆಯ ಶೋಷಣೆ, ಸಂಕಟಗಳಿಗೆ ಮೂಲ ಮಾತ್ರವಲ್ಲ, ಮನುಷ್ಯನ ದುರಂತಕ್ಕೂ ಕಾರಣ ಎಂಬ ವಾಸ್ತವ ಸತ್ಯವನ್ನು ಜನಸಾಮಾನ್ಯರಲ್ಲಿ ಬಿತ್ತಿದರು. ಅಧಿಕಾರದ ದುರ್ಬಳಕೆಯಿಂದ ಮಾನವೀಯತೆ ನಾಶವಾಗುತ್ತದೆ. ಮಿತಿಯಿಲ್ಲದ, ಸ್ವಯಂ ನಿಯಂತ್ರಣವಿಲ್ಲದ ಅಧಿಕಾರ ದಿಂದ ಜನಸಾಮಾನ್ಯರ ಬದುಕು ನರಕಸದೃಶವಾಗಿ ಬಿಡುತ್ತದೆ. ಇಂತಹ ಶೋಷಣೆಯ ಒಳಗೇ ಕಾಲಕಾಲಕ್ಕೆ ಪ್ರತಿಭಟನೆಯ ಧ್ವನಿಗಳು ಕೇಳಿಬರುತ್ತವೆ. ಅವುಗಳನ್ನು ಪೋಷಿಸುವ ಜೀವಚೈತನ್ಯದ ಸೆಲೆಗಳು ಕಂಡುಬರುತ್ತವೆ. ಸತ್ಯದ ನಾಲಿಗೆ ಕತ್ತಿಗಿಂತ ಹರಿತವಾದದ್ದು ಎಂದು ನಂಬಿದ್ದ ಬಸವಣ್ಣನವರು, ಜನಸಾಮಾನ್ಯರಿಗೆ ಬದುಕಿನ ಮಹತ್ವವನ್ನು ತಿಳಿಸಿ, ನಡೆ ಕಲಿಸಿದರು, ನುಡಿ ಕಲಿಸಿದರು, ಅಕ್ಷರ ಲೋಕವನ್ನು ಪ್ರತಿಯೊಬ್ಬರಿಗೂ ಮುಕ್ತವಾಗಿಸಿದರು. (ಉಡ ಕಲಿಸಿದರು, ಉಣ ಕಲಿಸಿದರು) ಹಿಂದುಳಿದವರ, ತುಳಿತಕ್ಕೊಳಗಾದವರ ಮನದಾಳದ ಭಾವನೆಗಳು ಸ್ಫೋಟಗೊಂಡವು. ಅರಿವಿನ ಮಹಾಸ್ಫೋಟದ ಪರಿಣಾಮವಾಗಿ ವಚನ ಸಾಹಿತ್ಯ ಮೂಡಿಬಂದಿತು. ಯಾವುದೇ ಯುದ್ಧ, ರಕ್ತಪಾತಗಳಿಲ್ಲದೆ ಸರ್ವಸಮಾನತೆಯ ಕಲ್ಯಾಣ ರಾಜ್ಯ ನಿರ್ಮಾಣವಾಯಿತು. ಎಲ್ಲ ಕ್ರೂರತೆಗೂ ಒಂದು ಕೊನೆ ಇರುವಂತೆ, ಸಮೃದ್ಧತೆಗೂ ಒಂದು ಕೊನೆ ಇರುತ್ತದೆ. ಸತ್ಯವೂ ಸವಕಲು ನಾಣ್ಯವಾಗುತ್ತದೆ. ಕಾಲಚಕ್ರ ತಿರುಗಿದಂತೆ, ಅರಮನೆ, ಗುರುಮನೆ ಪುರೋಹಿತಶಾಹಿ ಗಳು ವಿಜೃಂಭಿಸುತ್ತಾರೆ. ಕಲ್ಯಾಣ ರಾಜ್ಯ ನಾಶ ವಾಗುತ್ತದೆ. ರಾಜ್ಯ ನಾಶವಾದರೂ, ಜೀವನ ಮೌಲ್ಯಗಳು, ಮಾನವೀಯತೆ ಎಂದಿಗೂ ನಾಶವಾಗುವುದಿಲ್ಲ. ದಿಕ್ಪಾಲಾಗಿದ್ದ ಅಮೂಲ್ಯ ವಚನ ಸಾಹಿತ್ಯ ಎಲ್ಲ ಕಾಲಕ್ಕೂ ಅಸಮಾನತೆ, ಮೂಢನಂಬಿಕೆ, ಹಿಂಸಾಚಾರಗಳ ವಿರುದ್ಧ ಸಾಮಾಜಿಕ ಜೀವನವನ್ನು ಎಚ್ಚರಗೊಳಿಸುತ್ತಲೇ ಬಂದಿದೆ ಹಾಗೂ ಇಂದಿಗೂ ಪ್ರಸ್ತುತವಾಗಿದೆ.

**ಜಯದೇವಪ್ಪ ಜೈನಕೇರಿ**
ನಂ. ೮೭, 'ಶಾಂತಲಾ', ಕುವೆಂಪು ರಸ್ತೆ
ಶಿವಮೊಗ್ಗ – ೫೭೭ ೨೦೧







# ಪ್ರತಿಭಾನ್ವಿತ ಕಲಾವಿದ ಬಿ. ಎಸ್. ದೇಸಾಯಿ

ಚಿತ್ರಕಲಾ ಜಗತ್ತಿನ ಮೇರು ಕಲಾವಿದರಲ್ಲೊಬ್ಬರು ಬಿ. ಎಸ್. ದೇಸಾಯಿ. ಅಮೂರ್ತ ಚಿತ್ರಕಲೆಯಲ್ಲಿ ತಮ್ಮದೇ ಛಾಪು ಮೂಡಿಸಿ ಕಲಾಸಕ್ತರನ್ನು ಮಂತ್ರಮುಗ್ಧರನ್ನಾಗಿಸುವ, ವಿಭಿನ್ನ ಶೈಲಿಯಲ್ಲಿ ಬಣ್ಣಗಳನ್ನು ಬಳಸಿ ನೋಡುಗರನ್ನು ಚಿಂತನೆಗೆ ಹಚ್ಚುವ ಅವರ ಅಪೂರ್ವ ಶೈಲಿಯ ವರ್ಣಗಳ ಕೃತಿಗಳು ಗಮನ ಸೆಳೆಯುತ್ತವೆ.

ಬಿ. ಎಸ್. ದೇಸಾಯಿ ಹುಟ್ಟಿದ್ದು ಬಿಜಾಪುರ ಜಿಲ್ಲೆಯ ತಾಳಿಕೋಟೆ ಎಂಬ ಉತ್ತರ ಕರ್ನಾಟಕದ ಒಂದು ಹಳ್ಳಿಯಲ್ಲಾದರೂ ತಮ್ಮ ಕಲಾ ನೈಪುಣ್ಯದಿಂದ ಬೆಳೆದದ್ದು ಜಗದಗಲಕ್ಕೆ. ಒಮನ್, ಕೆನಡ, ಅಮೆರಿಕ, ಸಿಂಗಪುರ್, ಮಸ್ಕಟ್, ಇಂಗ್ಲೆಂಡ್, ಬೆಲ್ಜಿಯಮ್, ಫ್ರಾನ್ಸ್, ಸ್ವೀಡ್ಜರ್‌ಲ್ಯಾಂಡ್, ಜರ್ಮನಿ, ಅಸ್ಟ್ರಿಯಗಳ ಕಲಾ ಗ್ಯಾಲರಿಗಳಲ್ಲಿ ಹಾಗೂ ರಾಷ್ಟ್ರದ ಬಹುತೇಕ ನಗರಗಳಲ್ಲಿ ಇವರ ಕಲಾಕೃತಿಗಳು ಪ್ರದರ್ಶನಗೊಂಡಿರುವುದು ಇವರ ಪ್ರತಿಭೆಗೆ ಸಾಕ್ಷಿ.

ದೇಸಾಯಿ ಬರೀ ಕಲಾವಿದರಾಗಿ ತಮ್ಮನ್ನು ಗುರುತಿಸಿಕೊಂಡವರಲ್ಲ, ಸಾಮಾಜಿಕ ಕಳಕಳಿ, ಬದ್ಧತೆ ಹೊಂದಿದವರು. ಉತ್ತಮ ಯೋಗಪಟು, ರಂಗಭೂಮಿಯ ಅದ್ಭುತ ಕಲಾವಿದರಾದ ಇವರು ಪರಿಸರ ಕುರಿತು ಅಪಾರ ಕಾಳಜಿಯನ್ನು ಹೊಂದಿದವರು.

1991ರಲ್ಲಿ ಹಾಸನಕ್ಕೆ ಚಿತ್ರಕಲಾ ಅಧ್ಯಾಪಕರಾಗಿ ನೇಮಕಗೊಂಡು ಬಂದು ಜಿಲ್ಲೆಯ ಚಿತ್ರಕಲಾ ಕ್ಷೇತ್ರದ ಬರವನ್ನು ನೀಗಿ, ಇಂದು ಜಿಲ್ಲೆಯ ಎಲ್ಲಾ ಮನೆಗಳಲ್ಲೂ ಚಿತ್ರಕಲೆಯ ಬಗ್ಗೆ ಅಭಿಮಾನದಿಂದ ಮಾತನಾಡುವಂತೆ, ಚಿತ್ರಕಲೆ ತರಗತಿಗಳಿಗೆ ತಮ್ಮ ಮಕ್ಕಳನ್ನು ಸೇರಿಸಲು ಮುಗಿ ಬೀಳುವಂತೆ ಮಾಡಿದ ಶ್ರೇಯಸ್ಸು ದೇಸಾಯಿಯವರಿಗೇ ಸಲ್ಲಬೇಕು.

ಅಷ್ಟೇ ಅಲ್ಲದೆ ಕರ್ನಾಟಕ ಲಲಿತಕಲಾ ಅಕಾಡೆಮಿಯ ಸದಸ್ಯರಾಗಿ, ಬೆಂಗಳೂರಿನ ವೆಂಕಟಪ್ಪ ಆರ್ಟ್ ಗ್ಯಾಲರಿಯ ಸದಸ್ಯರಾಗಿ, ಕರ್ನಾಟಕ ರಾಜ್ಯ ಬಾಲವಿಕಾಸ ಅಕಾಡೆಮಿಯ ಸದಸ್ಯರಾಗಿ ತಮ್ಮ ಕಾರ್ಯದಕ್ಷತೆಯನ್ನು ಮೆರೆದಿದ್ದಾರೆ.

– **ಹನುಮಂತ ನಾಯಕ್**, ಆಕಾಶವಾಣಿ, ಹಾಸನ





Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil

**HOSATHU** Kannada Monthly /FEBRUARY 2014 / Rs. 15
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)